# ಗದ್ಯ ವಿಹಾರ

೧






ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೭೦

ಕನ್ನಡ ಅಧ್ಯಯನ ಸಂಸ್ಥೆ

ಪಠ್ಯಪುಸ್ತಕ ಮಾಲೆ–೫

ಪ್ರಧಾನ ಸಂಪಾದಕ

ಪ್ರೊಫೆಸರ್ ಡಿ. ಜವರೇಗೌಡ

# ಗದ್ಯ ವಿಹಾರ

೧

# ಮೊದಲ ಮಾತು

ಎರಡು ಸಾವಿರ ವರ್ಷಗಳ ದೀರ್ಘ ಇತಿಹಾಸವಿರುವ ಕನ್ನಡ ಸಾಹಿತ್ಯದಲ್ಲಿ ಗದ್ಯಪ್ರಕಾರ ಪದ್ಯಪ್ರಕಾರದಷ್ಟೆ ಸಮಪ್ರಮಾಣದಲ್ಲಿ ಹುಲುಸಾಗಿ ಬೆಳೆದಿಲ್ಲವೆಂಬ ಅಭಿಪ್ರಾಯವಿದೆ. ಒಂಬತ್ತನೆಯ ಶತಮಾನಕ್ಕೆ ಹಿಂದೆ ಸಾಕಷ್ಟು ಗದ್ಯ ಬೆಳೆದಿತ್ತೆಂಬುದಕ್ಕೆ ಕ್ರಿ. ಶ. ೪೫೦ರ ಹಲ್ಮಿಡಿ ಶಾಸನ ಮತ್ತು ಕವಿರಾಜಮಾರ್ಗದ ಉಲ್ಲೇಖಗಳು ಸಾಕ್ಷಿಯಾಗಿವೆ. ವಡ್ಡಾರಾಧನೆಯಂಥ ಗದ್ಯಕೃತಿಯ ಸೃಷ್ಟಿ ಆ ಕಾಲಕ್ಕೆ ಕನ್ನಡ ಗದ್ಯ ಪ್ರೌಢವಾಗಿ ಪಕ್ವವಾಗಿ ಸಮರ್ಪಕವಾಗಿ ಸರ್ವಶಕ್ತವಾಗಿ ವೀರ್ಯವತ್ತಾಗಿ ಸರ್ವಾಂಗ ಸುಂದರವಾಗಿ ಬೆಳೆದಿತ್ತೆಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಚಂಪೂಕೃತಿಗಳಲ್ಲಿ ವಚನಗಳಲ್ಲಿ ರಗಳೆಗಳಲ್ಲಿ ಉಗಾಭೋಗಗಳಲ್ಲಿ ಒಡೆಯರ ಕಾಲದ ಕೃತಿಗಳಲ್ಲಿ ಕನ್ನಡ ಗದ್ಯದ ನಾನಾ ರೂಪ ವಿಲಾಸಗಳನ್ನು ಕಾಣಬಹುದಾಗಿದೆ. ಆಧುನಿಕ ಗದ್ಯವಂತು ಜಗತ್ತಿನ ನಾನಾ ಭಾಷಾ ಸಾಹಿತ್ಯಗಳ ಸಾರಸತ್ವವನ್ನು ಹೀರಿಕೊಂಡು ಸುಪುಷ್ಟವಾಗಿ ವಿಶ್ವರೂಪಾತ್ಮಕವಾಗಿ ಸರ್ವಂಕಷವಾಗಿ ಸರ್ವವ್ಯಾಪಕವಾಗಿ, ಜಗತ್ತಿನ ಸಮೃದ್ಧ ಭಾಷೆಗಳಿಗೆ ಸರಿಸಮವಾಗಿ ಬೆಳೆದಿದೆ.

ಇಷ್ಟು ಸಂಪತ್ಸಮೃದ್ಧವಾದ ಗದ್ಯದ ವಿವಿಧ ಮುಖಗಳನ್ನು ಪರಿಚಯಿಸಿ ಕೊಡುವ ಸಂಕಲನ ಗ್ರಂಥಗಳು ತುಂಬ ಕಡಿಮೆ. ಈ ಶತಮಾನ ಪ್ರಧಾನವಾಗಿ ಗದ್ಯಯುಗ. ಆಧುನಿಕ ವಿಜ್ಞಾನದ ಸಮಗ್ರಾಭಿವ್ಯಕ್ತಿಗೆ ಅದು ಸಾಧನವಾಗ ಬೇಕಾಗಿದೆ. ಮಡಿ ಮೈಲಿಗೆಯ ಸಂಕೋಚವಿಲ್ಲದೆ ಬಿಂಕಬಿಗುಮಾನವಿಲ್ಲದೆ ಸಂಸ್ಕೃತ ಇಂಗ್ಲಿಷ್ ಪರ್ಷಿಯನ್ ಅರೇಬಿಕ್ ಮೊದಲಾದ ಭಾಷೆಗಳಿಂದ ಸಲೀಸಾಗಿ ಶಬ್ದಸಾಮಗ್ರಿಯನ್ನೂ ಅವುಗಳ ಚೇಗು ಬನಿಗಳನ್ನೂ ಸ್ಥೂಲ ಸೂಕ್ಷ್ಮಗಳನ್ನೂ ಎರವಲು ಪಡೆದುಕೊಂಡು, ರಕ್ತಗತ ಮಾಡಿಕೊಂಡು ಲೋಕಭಾಷೆಯಾಗಬಲ್ಲ ಸಾಮರ್ಥ್ಯವನ್ನು ಪಡೆದಿದೆ. ಇಂಥ ಗದ್ಯದ ರೂಪರೇಷೆಗಳನ್ನು ಕೇವಲ ದಿಗ್ದರ್ಶನ ರೀತಿಯಲ್ಲಿ ತೋರಿಸಿಕೊಡುವ ಸಲುವಾಗಿ 'ಗದ್ಯವಿಹಾರ'ದ ಮೂರು ಸಂಪುಟಗಳನ್ನು ಪ್ರಕಟಿಸಬೇಕೆಂದು ತೀರ್ಮಾನವಾಯಿತು. ಈ ತೀರ್ಮಾನವನ್ನು ಕಾರ್ಯಗತಗೊಳಿಸುವ ಸಲುವಾಗಿ ವಿಶ್ವವಿದ್ಯಾನಿಲಯ ಈ ಕೆಳಗೆ ಕಾಣಿಸಿರುವ ಸಂಪಾದಕ ಮಂಡಲಿಯನ್ನು ನೇಮಿಸಿತು:

ಪ್ರಾ. ಡಿ. ಜವರೇಗೌಡ (ಅಧ್ಯಕ್ಷ)
ಡಾ. ಮಾನಪ್ಪನಾಯಕ
ಪ್ರಾ. ಎಸ್. ವಿ. ಪರಮೇಶ್ವರಭಟ್ಟ
ಡಾ. ಪ್ರಭುಶಂಕರ
ಡಾ. ಎಚ್. ತಿಪ್ಪೇರುದ್ರಸ್ವಾಮಿ

ಮೊದಲನೆಯ ಸಂಪುಟದಲ್ಲಿ ಹಳಗನ್ನಡ ನಡುಗನ್ನಡ ಗದ್ಯಭಾಗಗಳು, ಎರಡನೆಯ ಸಂಪುಟದಲ್ಲಿ ಆಧುನಿಕ ಸಾಹಿತ್ಯ ಗದ್ಯಖಂಡಗಳು, ಮೂರನೆಯ ಸಂಪುಟದಲ್ಲಿ ಆಧುನಿಕ ಶಾಸ್ತ್ರ ಗದ್ಯಭಾಗಗಳು ಸೇರಬೇಕೆಂದೂ, ಅವು ಪ್ರಾತಿನಿಧಿಕವಾಗಿರಬೇಕೆಂದೂ ಸಮಿತಿ ತೀರ್ಮಾನಿಸಿ, ಮೊದಲನೆಯ ಸಂಪುಟವನ್ನು ಸಿದ್ಧಗೊಳಿಸಿದೆ. ಸೌಕರ್ಯಕ್ಕಾಗಿ ಹಳಗನ್ನಡ ನಡುಗನ್ನಡ ಗದ್ಯಖಂಡಗಳನ್ನು ಶಾಸನ ಗದ್ಯ, ಚಂಪೂ ಗದ್ಯ, ವಚನ ಗದ್ಯ ಮತ್ತು ಗದ್ಯಗ್ರಂಥಗಳ ಗದ್ಯವೆಂದು ನಾಲ್ಕು ಗುಂಪುಗಳಾಗಿ ವಿಂಗಡಿಸಿದೆ. ಆಯಾ ಪ್ರಕಾರದ ವಿಶಿಷ್ಟ ಶೈಲಿಯೂ ಈ ವಿಂಗಡಣೆಗೆ ಕಾರಣ.

ಈ ಸಂಕಲನವನ್ನು ೧೯೭೦ ಮತ್ತು ೧೯೭೧ರ ಬಿ.ಎ., ಬಿ.ಎಸ್‌ಸಿ. ಡಿಗ್ರಿ ಪರೀಕ್ಷೆಗೆ ಪಠ್ಯಪುಸ್ತಕವಾಗಿ ಗೊತ್ತುಮಾಡಿದೆ. ಶಾಸನ ಗದ್ಯವನ್ನು ಬಿಟ್ಟು ಉಳಿದ ಮೂರು ಭಾಗಗಳು ಮಾತ್ರ ಮೇಲ್ಕಂಡ ಪರೀಕ್ಷೆಗಳಿಗೆ ನಿಯಮಿತವಾಗಿವೆ.

ಈ ಗ್ರಂಥದ ಸಂಕಲನ ಕಾರ್ಯದಲ್ಲಿ ಸಹಕರಿಸಿದ ಸಂಪಾದಕ ಮಂಡಲಿಯ ಸದಸ್ಯ ಮಿತ್ರರಿಗೂ, ಅದನ್ನು ಅಚ್ಚಿಗೆ ಸಿದ್ಧಪಡಿಸಲು ನೆರವಾದ ಪಠ್ಯಪುಸ್ತಕ ಮತ್ತು ಭಾಷಾಂತರ ವಿಭಾಗದ ಮಿತ್ರರಿಗೂ ವಂದನೆಗಳು. ಎಷ್ಟೇ ಕೆಲಸಗಳಿದ್ದರೂ, ನಾವು ಕೊಟ್ಟ ತೊಂದರೆಗಳನ್ನೆಲ್ಲ ಸಹಿಸಿಕೊಂಡು ಶೀಘ್ರವಾಗಿ ಅಚ್ಚುಮಾಡಿಕೊಟ್ಟ ವಿಶ್ವವಿದ್ಯಾನಿಲಯದ ಅಚ್ಚುಕೂಟದ ಡೆಪ್ಯುಟಿ ಡೈರೆಕ್ಟರ್ ಶ್ರೀ ಎಚ್. ನರಸಣ್ಣ ಮತ್ತು ಅವರ ಸಿಬ್ಬಂದಿವರ್ಗದವರಿಗೂ ನನ್ನ ಕೃತಜ್ಞತೆಗಳು.

ದೇ. ಜವರೇಗೌಡ
ಅಧ್ಯಕ್ಷ
ಸಂಪಾದಕ ಮಂಡಲಿ

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು

## ಎರಡನೆಯ ಮುದ್ರಣ

ಮೊದಲ ಮುದ್ರಣದ ಪ್ರತಿಗಳು ಮುಗಿದುಹೋಗಿದ್ದುದರಿಂದ ಈ ಎರಡನೆಯ ಮುದ್ರಣವನ್ನು ಪ್ರಕಟಿಸಲಾಗುತ್ತಿದೆ. ೧೯೭೧ರ ಬಿ. ಎ., ಬಿ.ಎಸ್‌ಸಿ., ಪರೀಕ್ಷೆಗಳಿಗೆ ಅಪಠಿತ (Non-detailed) ಪಠ್ಯ ಪುಸ್ತಕವಾಗಿ ಇದನ್ನು ಗೊತ್ತುಮಾಡಿದೆ. ಚಂಪೂ ಗದ್ಯ, ವಚನ ಗದ್ಯ ಹಾಗೂ ಗದ್ಯಗ್ರಂಥಗಳ ಗದ್ಯದಲ್ಲಿ ಶಿವಕೋಟ್ಯಾಚಾರ್ಯ, ಕೆಂಪುನಾರಾಯಣ ಮತ್ತು ಮುದ್ದಣ—ಈ ಭಾಗಗಳು ಮಾತ್ರ ಮೇಲ್ಕಂಡ ಪರೀಕ್ಷೆಗೆ ನಿಯಮಿತವಾಗಿವೆ.

೧೯೭೩ರ ಬಿ. ಎ., ಬಿ.ಎಸ್‌ಸಿ., ಪದವಿ ಪರೀಕ್ಷೆಗೆ ಇದನ್ನು ಪಠಿತ (detailed) ಪಠ್ಯಪುಸ್ತಕವಾಗಿ ಗೊತ್ತುಮಾಡಿದೆ. ಈ ಪರೀಕ್ಷೆಗೆ ಶಾಸನ ಗದ್ಯ, ಚಂಪೂ ಗದ್ಯ ಮತ್ತು ವಚನ ಗದ್ಯ ಭಾಗಗಳನ್ನು ಗೊತ್ತುಪಡಿಸಲಾಗಿದೆ.

ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು

ಹಾ. ಮಾ. ನಾಯಕ
ನಿರ್ದೇಶಕ

# ಪರಿವಿಡಿ

## ಶಾಸನ ಗದ್ಯ



## ಚಂಪೂ ಗದ್ಯ

## ವಚನ ಗದ್ಯ



## ಗದ್ಯಗ್ರಂಥಗಳ ಗದ್ಯ

# ಹಲ್ಮಿಡಿ ಶಾಸನ

ಜಯತಿ ಶ್ರೀಪರಿಷ್ವಙ್ಗಶ್ಯಾರ್ಙ್ಗ (ವ್ಯಾನತಿ) ರಚ್ಯುತಃ।
ದಾನವಾಕ್ಷ್ಣೋರ್ಯುಗಾನ್ತಾಗ್ನಿಃ (ಶಿಷ್ಟಾನಾನ್ತು) ಸುದರ್ಶನಃ ॥

ನಮಃ ಶ್ರೀಮತ್ಕದಂಬಪನ್ತ್ಯಾಗಸಂಪನ್ನನ್ಕಲಭೋರ( ನಾ ) ಅರಿಕಕುಸ್ಥ ಭಟ್ಟೋರನಾಳೆ, ನರಿದಾವಿಳೆ ನಾಡುಳ್ ಮೃಗೇಶನಾಗೇನ್ದ್ರಾಭೀಳಭ್ಭಟಹ ರಪ್ಪೋರ್, ಶ್ರೀ ಮೃಗೇಶ ನಾಗಾಹ್ವಯರಿರ್ವ್ವರಾ ಬಟರಿ ಕುಲಾಮಲವ್ಯೋಮ ತಾರಾಧಿನಾಥನ್ನಳಪಗಣಪಶುಪತಿಯಾ ದಕ್ಷಿಣಾಪಥ ಬಹುಶತಹವನಾಹವದುಳ್ ಪಶುಪ್ರದಾನ ಶೌರ್ಯ್ಯೋದ್ಯಮ ಭರಿತೋ( ನ್ದಾನ )ಪಶುಪತಿಯೆನ್ದು ಪೊಗೞೆ ಪ್ಪೊಟ್ಟಣ ಪಶುಪತಿ ನಾಮಧೇಯನಾಸರಕ್ಕೆಲ್ಲ ಭಟರಿಯಾ ಪ್ರೇಮಾಲಯ ಸುತನ್ಗೆ ಸೇನ್ದ್ರಕಬಣೋಭಯದೇಶದಾ ವೀರಾಪುರುಷ ಸಮಕ್ಷದೆ ಕೇಕಯ ಪಲ್ಲವರಂ ಕಾದೆಱಿದು ಪೆತ್ತಜಯನಾ ವಿಜ ಅರಸನ್ಗೆ ಬಾಳ್ಗಚ್ಚು ಪಲ್ಮಡಿಉಂ ಮೂೞವಳ್ಳಿಉಂ ಕೊಟ್ಟಾರ್. ಬಟಾರಿಕುಲದೊನಳುಕದಮ್ಬನ್ಕಳ್ದೋನ್ ಮಹಾಪಾತಕನ್. ಇರ್ವ್ವರುಂ ಸಬ್ಬಙ್ಗದರ್ ವಿಜಾರಸರುಂ ಪಲ್ಮಡಿಗೆ ಕುಱುಮ್ಬಿಡಿ ವಿಟ್ಟಾರ್. ಅದಾನಳಿವೊನ್ಗೆ ಮಹಾಪಾತಕವ್. ಸ್ವಸ್ತಿ. ಭಟ್ಟರ್ಗ್ಗೀಗಲ್ದಿ ಒಡ್ಡಲಿ ಆಪತ್ತೊನ್ದಿವಿಟ್ಟಾರಕರ.

# ಮಹಾಕೂಟ ಶಾಸನ

ಸ್ವಸ್ತಿ. ವಿಜಯಾದಿತ್ಯ ಸತ್ಯಾಶ್ರಯ ಶ್ರೀ ಪೃಥಿವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟಾರರಾ ಪ್ರಾಣವಲ್ಲಭೆ ವಿನಾಪೊಟಿಗಳಿನ್ಪೊರ್ ಸೂಳೆಯರ್. ಇವರಾ ಮುದುತಾಯ್ವಿರ್ ರೇವಮಂಚಳ್ಗಳವರಾ ಮಗಳ್ದಿರ್ ಕುಚಿಪೊಟಿಗಳವರಾ ಮಗಳು ವಿನಾಪೊಟಿಗಳ್–ಇಲ್ಲಿಯೆ ಹಿರಣ್ಯಗರ್ಭಮಿಟ್ಟು, ಎಲ್ಲಾ ದಾನಮಂಗೊಟ್ಟು ದೇವನಾ ಪೀಠಮಾನ್ ಕಿಸುವಿನೆ ಕಟ್ಟಿ ಬೆಳ್ಳಿಯಾ ಕೊಡೆಯಾನೇಱಿಸಿಯೆ, ಮಂಗಲುಳ್ಳೆ ಅಷ್ಟಶತಂ ಕ್ಷೇತ್ರಂಗೊಟ್ಟೊಳ್. ಇಪಾನಳಿದೊನ್ ಪಂಚಮಹಾಪಾತಕನಕ್ಕುಮ್.

## ಸಿಗ್ಗಾವಿ ಶಾಸನ

ಸ್ವಸ್ತ್ಯಮೋಘವರ್ಷ ಶ್ರೀ ಪೃಥಿವೀವಲ್ಲಭ ಮಹಾರಾಜಾಧಿರಾಜ ರಾಜ ಪರಮೇಶ್ವರ ಭಟರರ ರಾಜ್ಯಾಭಿವೃದ್ಧಿಯೋಳ್ಶಕನೃಪಕಾಳಾತೀತ ಸಂವತ್ಸರಶತಂಗಳೇೞ್ನೂಱೆಣ್ಭತ್ತ್ರೀೞನೆಯ ಪಾರ್ತ್ಥಿವ ಸಂವತ್ಸರಂ ಪ್ರವರ್ತಿಸೆ, ಪುರಿಗೆಱೆನಾಡ ಕುಪ್ಪೆಯನಾಳೆ, ವೈಶಾಖಮಾಸದ ಪೌರ್ಣ್ಣಮಾಸೆಯನ್ದೆಬ್ಬಿಪ್ಪುಣುಸೆಯ ನಾಲ್ವ ದಿಂಬರ್ಮ್ಮಹಾಜನಮುಂ, ಪೋನಿಗೊರವರುಂ, ಮೂಲಸ್ಥಾನದ ಮಹಾದೇವ ರಾಳ್ಪೆಲಂವಳ್ಳಿಯ ಶಾಸ[ನ]ಮುಮಾದೇವರ ಮೂಡ ದಿಸೆಯೊಳ್ಮೂಡ ವಡ್ಡವ[ನೆ]ಯ ಪೊಲಮೇರೆಯೇ ತೆಂಕ ದೇವಂಗೆಯ್ಯೆ ಮೇರೆ, ಪಡುವ ನಿಱುಗಲ್ಮೇರೆ, ಬಡಗ ಕಾಲಡಿಯ ಪೊಲ ಮೇರೆಯೇ ಮೇರೆ ಮಾಡಿ, ಎಣ್ಭತ್ತ್ರಯ್ವತ್ತರ್ಕ್ಕೆಯ್ಯುಮಾಱು ದೋಣ್ಟದ ನೆಲನುಮಾದಿತ್ಯ ಭಟರರ ಸ್ಥಾನವುವ ರಕ್ಷಿಸಲ್ವೆೞ್ಚಿಸಲಿವರೆ ಸಮರ್ತ್ಥರೆಂದು ಗೋಕರ್ಣ್ಣ ಪಣ್ಡಿತ ಭಟರರ್ಗ್ಗೆ ಸರ್ವ್ವಬಾಧಾಪರಿಹಾರಂ ಕಾಲಂ ಕೞ್ಚಿ ಕೊಟ್ಟರೀ ಸ್ಥಾನಮನಾಳ್ವ ಗೊರವರಖಂಡಿತ ಬ್ರಹ್ಮಚಾರಿಯಪ್ಪುದು. ಬ್ರಹ್ಮಚರ್ಯ್ಯಹೀನರನೀ ಸಮುಯದ ಗೊರವರ್ಕ್ಕಳ್ಕಳೆವೊರೀ ಪದ್ಧತಿಯಂ ಶಿಲಾಲೇಖೆ ಮಾಡಿ ನಿಱಿಸಿದಪ್ಪರ್ಂಡಿತ ಭಟಾರರೀ ಧರ್ಮ್ಮವಂ ಕಾದೊಂಗಶ್ವಮೇಧದ ಫಲಂ, ಅೞಿಯಲ್ಬಗೆವೊಂಗೆ ಬ್ರಹ್ಮಾತಿಯ ಪಾಪಮಕ್ಕುಂ. ನಾಗದೇವನೀ ಧರ್ಮ್ಮಮೊಳ್ಗೋಷ್ಠಿ ಆದೊಂ· ಶ್ರೀ ರೂವಯ್ಯನ ಲಿಖಿತಂ.

## ಆತಕೂರು ಶಾಸನ

ಸ್ವಸ್ತಿ. ಅಮೋಘವರಿಷದೇವ ಶ್ರೀ ಪ್ರಿಥುವೀವಲ್ಲಭ ಪರಮೇಶ್ವರ ಪರಮ ಭಟ್ಟಾರಕ ಪಾದಪಙ್ಕಜ ಭ್ರುಮರಂ ನೃಪತ್ರಿಣೇತ್ರುನಾನೆವೆಡಙ್ಗಂ ವನಗಜಮಲ್ಲಂ ಕಚ್ಚೆಗಂ ಕೃಷ್ಣರಾಜಂ ಶ್ರೀಮತ್ಕನ್ನರದೇವಂ ಅಱಿಕ್ಕೋವದೆ ಚೋೞ ರಾಜಾದಿತ್ಯನ ಮೇಲೆ ಬನ್ದು ತಕ್ಕೋಲದೊಳ್ಕಾದಿ ಕೊಂದು ಬಿಜಯಂಗೆಯ್ಯುತ್ತಿಱ್ದು,

ಸ್ವಸ್ತಿ. ಸತ್ಯವಾಕ್ಯ ಕೊಙ್ಗುಣಿ ವರ್ಮ್ಮ, ಧರ್ಮಮಹಾರಾಜಂ ಕೋಳಾಲ ಪುರವರೇಶ್ವರಂ ನನ್ದಗಿರಿನಾಥಂ ಶ್ರೀಮತ್ಪೆರ್ಮ್ಮಾನಡಿಗಳ್ ಸನ್ನಿಯ ಗಙ್ಗ ಜಯ ದ್ತುತರಙ್ಗ ಗಙ್ಗ ಗಾಙ್ಗೇಯಂ ಗಙ್ಗನಾರಾಯಣನಾತನಾಳು,

ಸ್ವಸ್ತಿ. ಸಕಳಲೋಕ ಪರಿತಾಪಾಪಹತ ಪ್ರಭಾವಾವತಾರಿ(ತ) ಗಙ್ಗಾ ಪ್ರವಾಹೋದಾರ ಸಗರವಂಶ ವಳಭೀಪುರವರೇಶ್ವರನುದಾರ ಭಗೀರಥನಿಱವ ಬೆಡಙ್ಗಂ ಸಗರ ತ್ರಿಣೇತ್ರುಂ ಸೆಣಸೆ ಮೂಗರಿವೊಂ ಕದನೈಕ ಶೂದ್ರುಕಂ ಬೂತುಗ ನಙ್ಕಕಾರಂ.

### ನಾಯಿಗೊಂದು ವೀರಗಲ್ಲು

ಶ್ರೀಮತ್ ಮನಾಲರಙ್ಗೆ ಅನುವರದೊಳ್ ಮೆಚ್ಚಿ ಬೇಡಿಕೊಳ್ಳೆನ್ದೊಡ ದಯೆಯ ಮೆಚ್ಚಿವೊಳ್ಳೆಮ್ಬ ಕಾಳಿಯಂ ದಯೆಗೆಯ್ಯೆನ್ದು ಕೊಟ್ಟೊನಾ ನಾಯ ಕೆಳಲೆನಾಡ ಬೆಳತೂರ ಪಡುವಣ ದೆಸೆಯ. ಮೊಱಡಿಯೊಳ್ ಪಿರಿಯ ಪನ್ದಿ ವಿಟ್ಟೊಡೆ, ಪನ್ದಿಯುಂ ನಾಯುಮೊಡಸತ್ತುವದರ್ಕ್ಕೆಯಾತುಕೂರೊಳ್ ಚಲ್ಲೇಶ್ವರದ ಮುನ್ದೆ ಕಲ್ಲನ್ನಡಸಿ, ಪಿರಿಯಕೆಱೆಯ ಕೆೞಗೆ ಮಟ್ಟುತ್ತಕಾಲಙ ದೊಳಿರ್ಕಣ್ಡುಗ ಮಣ್ಣಂ ಕೊಟ್ಟರಾ ಮಣ್ಣನೊಕ್ಕಲ್ ನಾಡನಾಳ್ವೊನು ನಾಳ್ವೊರೀ ಮಣ್ಣನೞಿದೊನಾ ನಾಯಗೆಯ್ದ ಪಾಪಮಂ ಕೊಣ್ಣೊನಾ ಸ್ಥಾ ಮನಾಳ್ವ ಗೊರವನಾ ಕಲ್ಲಂ ಪೂಜಿಸದುಣ್ಬರಪ್ಪೊಡೆ ನಾಯಗೆಯ್ದ ಪಾಪವ ಕೊಣ್ಣೊನ್. ಓಂ.

## ಆಲೂರು ಶಾಸನ

ಸ್ವಸ್ತಿ. ಸಮಸ್ತಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜಂ ಪರಮೇಶ್ವರ ಪರಮಭಟ್ಟಾರಕಂ ಚಾಳುಕ್ಯಾಭರಣಂ ಸತ್ಯಾಶ್ರಯ ಕುಳತಿಳಕಂ ಶ್ರೀಮತ್ರಿಭುವನಮಲ್ಲದೇವರ ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾ ಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ,

ತತ್ಪಾದಪದ್ಮೋಪಜೀವಿ : ಸ್ವಸ್ತಿ. ಸಮಧಿಗತ ಪಂಚಮಹಾಶಬ್ದ ಪಲ್ಲವಾನ್ವಯ ಶ್ರೀ ಪೃಥ್ವೀವಲ್ಲಭಂ ಪಲ್ಲವಕುಳತಿಳಕನೇಕವಾಕ್ಯಂ ಕಾಂಚೀಪುರವರೇಶ್ವರಂ ಮಣ್ಡಳಿಕ ತ್ರಿಣೇತ್ರಂ ಘಟಿಯಂಕಕಾಱಂ ಶ್ರೀಮದಿಱಿವನೊಳಂಬಾಧಿರಾಜಂ ನೊಳಂಬವಾಡಿ ಮೂವತ್ತಿರ್ಚ್ಛಾಸಿರಮುಂ ಕೆಂಗಳಿಯ್ಯೆನೂಱುಂ ಬಲ್ಲಕುನ್ದೆ ಮೂನೂಱುಂ ಕುಕ್ಕನೂರ್ಮೂವತ್ತುಂ ಮಾಸಿಯವಾಡಿ ನಾಡೊಳಗಣ ಪಂಚ ಬಾಡಂಗಳುಮಂ ದುಷ್ಟನಿಗ್ರಹವಿಶಿಷ್ಟಪ್ರತಿಪಾಳನದಿಂ ಸುಖದಿನಾಳುತ್ತಮಿರೆ,

ತತ್ಪಾದಪದ್ಮೋಪಜೀವಿ : ಸ್ವಸ್ತಿ. ಸಮಸ್ತರಾಜ್ಯಭರನಿರೂಪಿತ ಮಹಾಸೇನಾಧಿಪತಿ ಪತಿಹಿತಾಚರಣಂ ರಣರಂಗದುಷ್ಟಂ ದುಷ್ಟನಿಷ್ಠುರಂ ಕುಟಿಲಕೌಟಿಲ್ಯಂ ಕ್ಷುದ್ರವಿದ್ರಾವಣಂ ಕಲಿಕಾಲ ಬೃಹಸ್ಪತಿ ಪರಿವಾರವಜ್ರಪಂಜರನಹಿತಾಹಿಗರುಡನುಭಯಕವೀಂದ್ರಂ ಕವಿರಾಜವಲ್ಲಭಂ ವಾದೀಭಪಂಚಾನನಂ ಸರಸ್ವತೀವಲ್ಲಭಂ ಪರನಾರೀದುರ್ಲಭಂ ಘಟಿಗನ ಗನ್ಧವಾರಣಂ ನಯಧಾಮಂ ಚಲದೋಜನಚಿಪಿಲ್ಲದಾತಂ, ನಲ್ಲರ್ಗೆ ನಲ್ಲಂ, ಚತುರ ಚತುರ್ಮ್ಮುಖಂ, ಕದನ ವಿನೋದಂ, ಮಲೆಯ ಮರ್ದನಂ, ವಿಪ್ರಕುಳಕಮಳಭಾಸ್ಕರಂ, ಪಾರ್ವರೊಳ್ಗಣ್ಡಂ, ಸಪ್ತಗ್ರಾಮಾಗ್ರಗಣ್ಯಂ, ಕಮ್ಮಕುಳೋದ್ಭವಂ ಧೀತಗೋತ್ರಂ, ದಿಣ್ಣಪಣ್ಡಿತಪುತ್ರಂ, ಛಾತ್ರಕಮಿತ್ರಂ, ಪಣ್ಡಿತಮಣ್ಡನಂ, ವೆಣ್ಣೆಯ ಭಟ್ಟರುಮೆನಿಸಿದ ಶ್ರೀಮನ್ಮಹಾಪ್ರಚಣ್ಡದಂಡನಾಯಕಂ ಘಟಿಯಂಕಕಾಱಂ ಬ್ರಹ್ಮಾಧಿರಾಜರ್ಗ್ಗೆ,

ಶಕಭೂಪಾಳಕಾಳಾತಿಕ್ರಾಂತ ಸಂವತ್ಸರ ಶತಂಗಳ್ ೯೩೨ನೆಯ ಸಾಧಾರಣ ಸಂವತ್ಸರ ವೈಶಾಖದ ಪುಣ್ಣಿಮೆ ಆದಿತ್ಯವಾರದಂದು ಮಾಳದಾಲೂರ ಬಡಗಣ ಪೊಲದೊಳ್ ಸಿರಿವುರದಿಂದಿಟ್ಟಗೆಗೆ ಪೋದ ಬಟ್ಟೆಯ ಕಣ್ಣ ಕುಱಿಂಬನ ಕಲ್ಲ ಬಡಗಣ ದೆಸೆಯೊಳ್ಸಿದ್ಧೇಶ್ವರಗೆಯ್ಯ ಮೂಡಣ ಕಂಬಿವದ್ದದೊಳಲ್ಲೇಶ್ವರಗೆಯ್ಯದಱ ಮೂಡಣ ಕಂಬಿವದ್ದದೊಳ್ ಮೂಱುಮತ್ತರ್ಕ್ಕೆಯ್ಯುಂ ಸರ್ವ್ವಬಾಧಾಪರಿಹಾರಂ ನಮಸ್ಯವಾಗೆ ಮಾಳದಾಲೂರಿನ್ನೂರ್ವರುವಿಬ್ಬೊರೊಡೆಯಂ ಚಟ್ಟಿವಾರಯ್ಯಂ ವೆಣ್ಣೆಯ ಭಟ್ಟರ ಕಾಲಂ ಕರ್ಚ್ಚಿ ಕುಡೆ, ತತ್ಕಾಳದೊಳ್ ಮಹಾಜನದಧ್ಯಕ್ಷದೊಳ್ ವೆಣ್ಣೆಯ ಭಟ್ಟರ್ತಮ್ಮಾರಾಧ್ಯರ್

## ಆತಕೂರು ಶಾಸನ

ಸ್ವಸ್ತಿ. ಅಮೋಘವರಿಷದೇವ ಶ್ರೀ ಪೃಥುವೀವಲ್ಲಭ ಪರಮೇಶ್ವರ ಪರಮ ಭಟ್ಟಾರಕ ಪಾದಪಙ್ಕಜ ಭ್ರಮರಂ ನೃಪತ್ರಿಣೇತ್ರನಾನೆವೆಡಙ್ಗಂ ವನಗಜಮಲ್ಲಂ ಕಚ್ಚೆಗಂ ಕೃಷ್ಣರಾಜಂ ಶ್ರೀಮತ್ಕನ್ನರದೇವಂ ಅೞಿಕ್ಕೋವದೆ ಜೋೞ ರಾಜಾದಿತ್ಯನ ಮೇಲೆ ಬನ್ದು ತಕ್ಕೋಲದೊಳ್ಕಾದಿ ಕೊಂದು ಬಿಜಯಂಗೆಯ್ಯುತ್ತಿೞ್ದು,

ಸ್ವಸ್ತಿ. ಸತ್ಯವಾಕ್ಯ ಕೊಙ್ಗುಣಿ ವರ್ಮ್ಮ, ಧರ್ಮಮಹಾರಾಜಂ ಕೋಳಾಲ ಪುರವರೇಶ್ವರಂ ನನ್ದಗಿರಿನಾಥಂ ಶ್ರೀಮತ್ಪೆರ್ಮ್ಮಾನಡಿಗಳ್ ನನ್ನಿಯ ಗಙ್ಗ ಜಯದ್ದುತ್ತರಙ್ಗ ಗಙ್ಗ ಗಾಙ್ಗೇಯಂ ಗಙ್ಗನಾರಾಯಣನಾತನಾಳು,

ಸ್ವಸ್ತಿ. ಸಕಳಲೋಕ ಪರಿತಾಪಾವಿಹತ ಪ್ರಭಾವಾವತಾರಿ(ತ) ಗಙ್ಗಾ ಪ್ರವಾಹೋದಾರ ಸಗರವಂಶ ವಳಭೀಪುರವರೇಶ್ವರನುದಾರ ಭಗೀರಥನಿಱಿವ ಬೆಡಙ್ಗಂ ಸಗರ ತ್ರಿಣೇತ್ರಂ ಸೆಣಸೆ ಮೂಗರಿವೊಂ ಕದನೈಕ ಶೂದ್ರಕಂ ಬೂತುಗ ನಙ್ಕಕಾರಂ.

### ನಾಯಿಗೊಂದು ವೀರಗಲ್ಲು

ಶ್ರೀಮತ್ ಮನಾಲರಱ್ಗೆ ಅನುವರದೊಳ್ ಮೆಚ್ಚಿ ಬೇಡಿಕೊಳ್ಳೆನ್ದೊಡ ದಯೆಯ ಮೆಱೆವೊಳ್ಳೆಮ್ಪ ಕಾಳಿಯಂ ದಯೆಗೆಯ್ಯೆನ್ದು ಕೊಣ್ಡೊನಾ ನಾಯ ಕೆಳಲೆನಾಡ ಬೆಳತೂರ ಪಡುವಣ ದೆಸೆಯ. ಮೊಱಡಿಯೊಳ್ ಪಿರಿಯ ಪನ್ದಿ ವಿಟ್ಟೊಡೆ, ಪನ್ದಿಯುಂ ನಾಯುಮೊಡಸತ್ತುವದರ್ಕ್ಕೆಯಾತುಕೂರೊಳ್ ಚಲ್ಲೇಶ್ವರದ ಮುನ್ದೆ ಕಲ್ಲನ್ನಡಸಿ, ಪಿರಿಯಕೆಱೆಯ ಕೆೞಗೆ ಮಟ್ಟಿತ್ತಿಕಾಲಜ ದೊಳಿರ್ಕ್ಕಣ್ಡುಗ ಮಣ್ಣಂ ಕೊಟ್ಟರಾ ಮಣ್ಣನೊಕ್ಕಲ್ ನಾಡನಾಳ್ವೊನು ನಾಳ್ವೊರೀ ಮಣ್ಣನೞಿದೊನಾ ನಾಯಗೆಯ್ದ ಪಾಪಮಂ ಕೊಣ್ಡೊನಾ ಸ್ವಾ ಮನಾಳ್ವ ಗೊರವನಾ ಕಲ್ಲಂ ಪೂಜಿಸದುಣ್ಡರಪ್ಪೊಡೆ ನಾಯಗೆಯ್ದ ಪಾಪವ ಕೊಣ್ಡೊನ್. ಓಂ.

## ಆಲೂರು ಶಾಸನ

ಸ್ವಸ್ತಿ. ಸಮಸ್ತಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜಂ ಪರಮೇಶ್ವರ ಪರಮಭಟ್ಟಾರಕಂ ಚಾಳುಕ್ಯಾಭರಣಂ ಸತ್ಯಾಶ್ರಯ ಕುಳತಿಳಕಂ ಶ್ರೀಮತ್ತ್ರಿಭುವನಮಲ್ಲದೇವರ ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾ ಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ,

ತತ್ಪಾದಪದ್ಮೋಪಜೀವಿ : ಸ್ವಸ್ತಿ. ಸಮಧಿಗತ ಪಂಚಮಹಾಶಬ್ದ ಪಲ್ಲವಾನ್ವಯ ಶ್ರೀ ಪೃಥ್ವೀವಲ್ಲಭಂ ಪಲ್ಲವಕುಳತಿಳಕನೇಕವಾಕ್ಯಂ ಕಾಂಚೀಪುರವರೇಶ್ವರಂ ಮಣ್ಡಳಿಕ ತ್ರಿಣೇತ್ರಂ ಘಟೆಯಂಕಕಾಱಂ ಶ್ರೀಮದಿಱಿವನೊಳಂಬಾಧಿರಾಜಂ ನೊಳಂಬವಾಡಿ ಮೂವತ್ತಿಚ್ಚಾಸಿರಮುಂ ಕೆಂಗಱಿಯ್ಯೆನೂಱುಂ ಬಲ್ಲಕುನ್ದೆ ಮೂನೂಱುಂ ಕುಕ್ಕನೂರ್ಮೂವತ್ತುಂ ಮಾಸಿಯವಾಡಿ ನಾಡೊಳಗಣ ಪಂಚಬಾಡಂಗಳುಮಂ ದುಷ್ಟನಿಗ್ರಹವಿಶಿಷ್ಟಪ್ರತಿಪಾಳನದಿಂ ಸುಖದಿನಾಳುತ್ತಮಿರೆ,

ತತ್ಪಾದಪದ್ಮೋಪಜೀವಿ : ಸ್ವಸ್ತಿ. ಸಮಸ್ತರಾಜ್ಯಭರನಿರೂಪಿತ ಮಹಾಸೇನಾಧಿಪತಿ ಪತಿಹಿತಾಚರಣಂ ರಣರಂಗದುಷ್ಟಂ ದುಷ್ಟನಿಷ್ಠುರಂ ಕುಟಿಲಕೌಟಿಲ್ಯಂ ಕ್ಷುದ್ರವಿದ್ರಾವಣಂ ಕಲಿಕಾಲ ಬೃಹಸ್ಪತಿ ಪರಿವಾರವಜ್ರಪಂಜರನಹಿತಾಹಿಗರುಡನುಭಯಕವೀಂದ್ರಂ ಕವಿರಾಜವಲ್ಲಭಂ ವಾದೀಭಪಂಚಾನನಂ ಸರಸ್ವತೀವಲ್ಲಭಂ ಪರನಾರೀದುರ್ಲಭಂ ಘಟಿಗನ ಗನ್ಧವಾರಣಂ ನಯಧಾಮಂ ಚಲದೋಜನಱಿಪಿಲ್ಲದಾತಂ, ನಲ್ಲರ್ಗೆ ನಲ್ಲಂ, ಚತುರ ಚತುರ್ಮ್ಮುಖಂ, ಕದನ ವಿನೋದಂ, ಮಲೆಯಮರ್ದನಂ, ವಿಪ್ರಕುಳಕಮಳಭಾಸ್ಕರಂ, ಪಾರ್ವರೊಳ್ಗಣ್ಡಂ, ಸಪ್ತಗ್ರಾಮಾಗ್ರಗಣ್ಯಂ, ಕಮ್ಮಕುಳೋದ್ಭವಂ ಧೀತಗೋತ್ರಂ, ದಿಣ್ಣಪಣ್ಡಿತಪುತ್ರಂ, ಧಾತ್ರಕಮಿತ್ರಂ, ಪಣ್ಡಿತಮಣ್ಡನಂ, ವೆಣ್ಣೆಯ ಭಟ್ಟರುಮೆನಿಸಿದ ಶ್ರೀಮನ್ಮಹಾಪ್ರಚಣ್ಡ ದಂಡನಾಯಕಂ ಘಟೆಯಂಕಕಾಱಂ ಬ್ರಹ್ಮಾಧಿರಾಜರ್ಗ್ಗೆ,

ಶಕಭೂಪಾಳಕಾಳಾತೀತಕ್ರಾಂತ ಸಂವತ್ಸರ ಶತಂಗಳ್ ೯೩೩ನೆಯ ಸಾಧಾರಣ ಸಂವತ್ಸರ ವೈಶಾಖದ ಪುಣ್ಣಿಮೆ ಆದಿತ್ಯವಾರದಂದು ಮಾಳದಾಲೂರ ಬಡಗಣ ಪೊಲದೊಳ್ ಸಿರಿವುರದಿಂದಿಟ್ಟಗೆಗೆ ಪೋದ ಬಟ್ಟೆಯ ಕಣ್ಣಾ ಕುಱಿಂಬನ ಕಲ್ಲ ಬಡಗಣ ದೆಸೆಯೊಳ್ಸಿದ್ಧೇಶ್ವರಗೆಯ್ಯ ಮೂಡಣ ಕಂಬಿವದ್ದದೊಳಲ್ಲೇಶ್ವರಗೆಯ್ಯದಱ ಮೂಡಣ ಕಂಬಿವದ್ದದೊಳ್ ಮೂಱುಮತ್ತರ್ಕ್ಕೆಯ್ಯಂ ಸರ್ವ್ವಬಾಧಾಪರಿಹಾರಂ ನಮಸ್ಯವಾಗೆ ಮಾಳದಾಲೂರಿನ್ನೂರ್ವರುವಿಬ್ಬೊರೊಡೆಯಂ ಚಟ್ಟವಾರಯ್ಯಂ ವೆಣ್ಣೆಯ ಭಟ್ಟರ ಕಾಲಂ ಕರ್ಚ್ಚಿ ಕುಡೆ, ತತ್ಕಾಳದೊಳ್ ಮಹಾಜನದಧ್ಯಕ್ಷದೊಳ್ ವೆಣ್ಣೆಯ ಭಟ್ಟರ್ತ್ತಮ್ಮಾರಾಧ್ಯರ್

ಸ್ವಸ್ತಿ. ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ, ಧಾರಣಾಧ್ಯಾನ ಸಮಾಧಿಸಂಪನ್ನರಪ್ಪ ಶ್ರೀಮತ್ಸಿರಿವುರದ ಗುಹೆಯ ಮಠದ ಅಮರಾಚಾರ್ಯ ಭಟ್ಟಾರಕರ್ಗ್ಗೆ ಪಾದಪ್ರಕ್ಷಾಳನ ಪೂರ್ವ್ವಕಂ ನೂಱುಮತ್ತರ್ಕ್ಕೆಯ್ಯುಮಂ ಮಠಮಂ ಮಾಡಿಸಿ ಮಠಕೆ ವಿದ್ಯಾದಾನವಾಗೆ ಪನ್ನಿರ್ವ್ವರ್ಬ್ರಾಹ್ಮಣರ್ಗ್ಗಮಱುವತ್ತರ್ತ್ತಪೋಧನರ್ಗ್ಗಂ ಸತ್ರಕೆವಿಟ್ಟನದನಿನ್ನೂರ್ವ್ವರುಂ ಸರ್ವ್ವಬಾಧಾಪರಿಹಾರಂ ಕಾದೂಡುವರ್.

ಪ್ರಾಸಾದ ಚಕ್ರವರ್ತಿ ಮರುಳೋಜಂ ಬರೆದಂ. ಮಂಗಳಂ

## ಕುರುವತ್ತಿ ಶಾಸನ

ಚಾಳುಕ್ಯ ವಿಕ್ರಮವರ್ಷದ ೪೯ನೆಯ ತಾರಣ ಸಂವತ್ಸರದ ವೈಶಾಖ ಶುದ್ಧ ತದಿಗೆ ಆದಿತ್ಯವಾರದಂದು, ಅಗ್ರಹಾರಂ ಗಂಡರಾದಿತ್ಯನ ಹೊಱಲ ಮಹಾಜನಂಗಳು ಮನ್ನೆಯಂ ಜೊಪ್ಪಯಂ ಹೊಳಲನಿಱಿದು ಸರ್ವ್ವಸ್ವಹರಣಂ ಮಾಡಿ ಸೂರೆಗೊಂಡುದುಮಂ. ಬ್ರಾಹ್ಮಣರಂ ಕೊಂದುದುಮಂ ಚಕ್ರವರ್ತಿಗೆ ಬಿನ್ನಪಂ ಗೆಯ್ಯಲು,

ಕೇೞ್ದವಧಾರಿಸಿ ಜೊಪ್ಪನಂ ದಂಡಿಸಿ, ಸಮಸ್ತಪ್ರಧಾನರ ಸನ್ನಿಧಾನದಲು ಆ ಅಗ್ರಹಾರಕ್ಕೆ ಮಂನೆಯರಾರುವಿಲ್ಲದನ್ತಾಗಿ ನಿಯಾಮಿಸಿ ಕುಡಿಪೆನ್ನು (ಕುಡಿಂ+ಎನ್ದು) ಪ್ರಧಾನಗ್ರ್ಗಂ ಶ್ರೀಮನು ಮಲಿಯಾಳ ಪಂಡಿತ ದೇವಗ್ರ್ಗಂ ಸೋಮೇಶ್ವರ ಭಟ್ಟಯಂಗಳಿಗಂ ಚಕ್ರವರ್ತ್ತಿ ಬೆಸಸಲನಿಬರುವಿಟ್ಟು ಜೊಪ್ಪನಂ ಕರೆದು, ನೀನುಂ ನಿನ್ನ ವಂಶದವರುಂ ಹೊಬಿಲ ಮನ್ನೆಯಮಂ ಮಾಣ್ಬುದೆನ್ದು ಮಾಣಿಸಲಾತನು ವನ್ತೆ ಗೆಯ್ವೆನೆನ್ದು ಆಣೆಪತ್ರಮಂ ಕೊಟ್ಟು, ತ್ರಿಪುರಾಂತಕ ದೇವರ ಬಳಿ ನೀರಂ ಕುಡಿದೀ ಪಡಿಯಲ್ ಶಾಸನಮಂ ಕುಡುವನ್ತಾಗಿಯೊಡಂಬಟ್ಟು ಬಂದನಾ ಕ್ರಮದಲೆ ಮಲಿಯಾಳ ಪಂಡಿತದೇವರುಂ ತಾನುವಿೞ್ದು ಮನ್ನೆಯಮಂ ಬಿಟ್ಟು, ಬೆಂಣೆವೂರು ಹನ್ನೆರಡಱ ಪ್ರಭುಗಾವುಣ್ಡುಗಳ ನೀರಗುಂದದ, ಎರಡುಂ ಹಡಂಗಿಲೆಯ, ಮಾಂಗೊಱದ, ಬಿದಿರ ಹಳ್ಳಿಯ, ಹಹನೂರ (ಹಾವನೂರ ?), ಹೊನ್ನವತ್ತಿ, ಕುಱುವತ್ತಿಯ ಬಾಳ್ಗುಱಿಯನ್ತು ಮೂವತ್ತಿಚ್ಛಾಸಿರದ ಸನ್ನಿಧಾನದಲು ತ್ರೈಳೋಕ್ಯ ಮಲ್ಲೇಶ್ವರ ದೇವರ ಮುನ್ತೆಯುಂ ಹೊಱಲಲುಂ ಶಾಸನಮಂ ನಿಲಿಸಿದಂ.

# ಮಾವನೂರು ಶಾಸನ

ಸ್ವಸ್ತಿ. ಸಮಸ್ತ ಸಮುದ್ರಮುದ್ರಿತಮಪ್ಪ ಧರಾಕಾಂತೆಯ ಶಿರಃಕಂಜ ದಂತೆ, ಪುರತ್ರಯವಿಸಿನದಹನದಾವಾನಳನ ಸುಕೃತ ಸರ್ವಸ್ವದ ಗವಸಣಿಗೆಯಂತೆ, ಸಕಳ ಭಕ್ತರ ಪುಣ್ಯಸಾಲೆಯಂತೆ, ಮುಕ್ತ್ಯಂಗನೆಯ ತಾಯ್ಮನೆಯಂತೆ, ಧರ್ಮಾರ್ತ್ಥ ಕಾಮ ಮೋಕ್ಷಂಗಳಪ್ಪ ಚತುರ್ವ್ವಿಧ ಪುರುಷಾರ್ತ್ಥಂಗಳ ಜನ್ಮಕ್ಷೇತ್ರದಂತೆ ಮೆಱೆವ ಶ್ರೀಪರ್ವ್ವತದ ಮೇಲೆ ಮೂಜಗಕೆ ಸೋಜಿಗಮಪ್ಪೋಜೆಯಿಂ ರಾಜಿಸುವ ರಾಜೇಂದ್ರ ಚೂಡಾಮಣಿಯ ಮನುಮಥ ಮತ್ತೇಭ ಮೃಗಾಧಿಪನ, ಕೀನಾಶಬಳಬಳಾಹಕ ಮಹಾಬಳನ, ಶಾರ್ದ್ದೂಲ ದೈತ್ಯಧ್ವಾಂತ ಪ್ರದ್ಯೋತನನ, ದರ್ಪ್ಪಿಷ್ಟ ಕುಂಜರಾಸುರ ಮರಾಳ ಹರುಷ ವಿಳಯಜಳದ ಗರ್ದ್ದನನ, ಸುರಸರಿತ್ಸಮುದ್ಭೂತ ಲೋಲತರ ಕಲ್ಲೋಲಮಾಲಾಸಂಘಟ್ಟಿತ ಜಟಾಜಾಳನ, ಲೋಕಾಲೋಕ ಚೇತನತರ ವಾತ ಪಿತ್ಥ ಬ್ರಾತನೂತನಾಭರಣನ, ಶ್ರೀಪರ್ವ್ವತಾಧೀಶ್ವರನಪ್ಪ ಮಲ್ಲಿಕಾರ್ಜ್ಜುನನ ಕಾರುಣ್ಯಕಾಂತಿ ಕಾಯಮಂ ತಳೆವಂತೆ ದಕ್ಷಿಣ ದಿಶಾಭಾಗದೊಳು ಮೆಱೆವ ಶೀವರವೆಂಬ ಮಹಾ ಗ್ರಾಮದೊಳು.

ಅಪ್ಪಯ್ಯ ದೇವರಸರಿಗೆ ಉಪದೇಶ :

ಶಿವನ ಉಭಯನೇತ್ರದಿಂ ಚಂದ್ರಸೂರ್ಯರೊಗೆದಂತೆ ಪರ್ವತಯ್ಯನುಭಯ ವಹ ಕಾರುಣ್ಯಕಟಾಕ್ಷದಿಂದುದಯಿಸಿದ ಅಪ್ಪಯ್ಯದೇವರಸರಂ ಕಂಡು ಕಾರುಣ್ಯಂ ಮಾಡಲುವೇಡಿ, ಚಂದ್ರಂಗೆ ಬೆಳುದಿಂಗಳುಂ, ಬೆಳುದಿಂಗಳಿಗೆ ಪರಿಮಳಮಂ, ಪರಿ ಮಳಕ್ಕೆ ಸವಿಯಂ, ಸವಿಗೆ ರೂಪಂ, ರೂಪಿಂಗೆ ಸೌಂದರ್ಯಮಂ ಕೊಡುವಂತೆ ಉಪದೇಶಂ ಮಾಡೆ, ಕೈಕೊಂಡ ಅಪ್ಪಯ್ಯದೇವರಸರು, ಪುಟವಿಟ್ಟ ಪುಣ್ಯಂ ಪುರುಷಾಕಾರವಾದಂತೆ, ಶಾಂತಿ ಸಾಕಾರವೆತ್ತಂತೆ, ಪರಮಾರ್ತ್ಥಂ ಶರೀರವಡೆದಂತೆ ಭಕ್ತಿ ಜ್ಞಾನಂ ಸಂಸಾರವಂ ಸವಿವಂತೆ ಮೆಱವುತ್ತೆ, ಲೋಭವಡಿಯಿಡದ ಕರ ಪಲ್ಲವಂಗಳ, ಅಮೃತವಂಕುರಿಸದ ರಸನಾಪ್ರದೇಶದ, ಸಂಸೃತಿ ಸರಸವಾಡದ ಚರಿತಶುದ್ಧಿಯ, ಕಾಮನ ಡಾಮರಕೊಳಸೋರದ ಮನದ ಬಿನದದ, ಮಾಯೆ ಯಾಜ್ಞೆಯನುಲ್ಲಂಘಿಸಿದ ಚಿತ್ತವೃತ್ತಿಯ, ಶಬ್ದಸ್ಪರುಶರೂಪುರಸಗಂಧಾದಿ ಭೋಗಕ್ಕೆಳಸದ ಕರಣಾವಳಿಯ ಮಹಾಮಹಿಮರೆನಿಸುವ ಅಪ್ಪಯ್ಯದೇವರಸರು, ತಿಲಮಧ್ಯದೊಳಿರ್ಪ್ಪ ತೈಲದಂತೆ, ಕಾಷ್ಮಮಧ್ಯದೊಳಿರ್ಪ್ಪ ಅಗ್ನಿಯಂತೆ, ಜಲಮಧ್ಯ ದೊಳಿರ್ಪ್ಪ ಕಮಳದಂತೆ, ತಾವು ಮಾನುಷಚರಿತರಪ್ಪುದಱಿಂ ಸಂಸಾರಮಂ ಸೋಂಕದೆ ಅಣೋರಣೀಯಾಂ ಮಹತೋಮಹೀಯಾಂ ಎಂಬ ಶ್ರುತಿಯುಂಟಾಗಿ ಇಱಿಹೆ ಮೊದಲಾದ ಪರಮಾಣುವಿನ ನೋವಂ ಸೈರಿಸದೆ, ಇಚ್ಛಾಶಕ್ತಿ

ಜ್ಞಾನಶಕ್ತಿ ಕ್ರಿಯಾಶಕ್ತಿ ಉಳ್ಳ ಶಿವನ ಭಕ್ತರಪ್ಪುದಱಿಂ ಉಭಯತನುವಿಂದನಂತ ವಾದ್ಯದಿಂ ಶಿವನಂ ಕೇಳಿಸುತಂ ಅನವರತಂ ಶಿವನೊಳವಿರಳ ಪೂಜೆಯಂ ಮಾಡುತಂ ಮೂಲೋಕಮಂ ತೀವಿದ ಶೈವಕೀರ್ತಿಯಂ ತಳೆದಪ್ಪಯ್ಯದೇವರಸರು ಸುಖದೊಳಿರೆಯಿರೆ. ಶಿವಶರಣು.

# ಶ್ರವಣಬೆಳಗೊಳದ ಶಾಸನ

ಸ್ವಸ್ತಿ. ಶ್ರೀಮನ್ಮಹಾಮಂಡಲೇಶ್ವರಂ ಆರಿರಾಯ ವಿಭಾಡ, ಭಾಷೆಗೆ ತಪ್ಪುವ ರಾಯರ ಗಂಡ ಶ್ರೀ ವೀರಬುಕ್ಕರಾಯನು ಪೃಥ್ವೀರಾಜ್ಯವ ಮಾಡುವ ಕಾಲದಲ್ಲಿ ಜೈನರಿಗೂ ಭಕ್ತರಿಗೂ ಸಂವಾಜವಾದಲ್ಲಿ, ಆನೆಯಗೊಂದಿ ಹೊಸಪಟ್ಟಣ ಪೆನುಗುಂಡೆ ಕಲ್ಲೆಹದಪಟ್ಟಣವೊಳಗಾದ ಸಮಸ್ತ ನಾಡ ಭವ್ಯಜನಂಗಳು ಆ ಬುಕ್ಕರಾಯಂಗೆ, ಭಕ್ತರು ಮಾಡುವ ಅನ್ಯಾಯಂಗಳನು ಬಿನ್ನಹಂ ಮಾಡಲಾಗಿ, ಕೋವಿಲ್ ತಿರುಮಳೆ ಪೆರುಮಾಳ್ ಕೋವಿಲ್ ತಿರುನಾರಾಯಣಪುರ ಮುಖ್ಯವಾದ ಸಕಳಾಚಾರ್ಯರು, ಸಕಳ ಸಮಯಿಗಳು, ಸಕಳ ಸಾತ್ತ್ವಿಕರು, ಮೋಷ್ಟಿಕರು, ತಿರುಪಣಿ_ತಿರುವಿಡಿ_ತಣ್ಣೀರವರು, ನಾಲ್ವತ್ತೆಂಟು ಜನಂಗಳು, ಸಾವಂತ ಬೋವಕ್ಕಳು ತಿರಿಕುಲ ಜಾಂಬುವಕುಲವೊಳಗಾದ ಹದಿನೆಂಟು ನಾಡ ಶ್ರೀವೈಷ್ಣವರ ಕೈಯಲು, ಮಹಾರಾಯನು ವೈಷ್ಣವ ದರ್ಶನಕ್ಕೆಯೂ ಜೈನದರ್ಶನಕ್ಕೆಯೂ ಭೇದವಿಲ್ಲೆಂದು ಜೈನರ ಕೈವಿಡಿದುಕೊಟ್ಟು, ಈ ಜೈನದರ್ಶನಕ್ಕೆ ಪೂರ್ವ್ವಮರಿಯಾದೆಯಲು ಪಂಚಮಹಾವಾದ್ಯಂಗಳೂ ಕಳಶವೂ ಸಲುವುದು. ಜೈನದರ್ಶನಕ್ಕೆ ಭಕ್ತರ ದೆಸೆಯಿಂದ ಹಾನಿ ವೃದ್ಧಿಯಾದರೂ ವೈಷ್ಣವ ಹಾನಿವೃದ್ಧಿಯಾಗಿ ಪಾಲಿಸುವರು. ಈ ಮರ್ಯಾದೆಯಲು ಎಲ್ಲಾ ರಾಜ್ಯದೊಳಗುಳ್ಳಂತಹ ಬಸ್ತಿಗಳಿಗೆ ಶ್ರೀವೈಷ್ಣವರು ಶಾಸನವನಟ್ಟು ಪಾಲಿಸುವರು. ಚಂದ್ರಾರ್ಕ್ಕಸ್ಥಾಯಿಯಾಗಿ ವೈಷ್ಣವ ಸಮಯವು ಜೈನ ದರ್ಶನವ ರಕ್ಷಿಸಿಕೊಂಡು ಬಹೆವು. ವೈಷ್ಣವರೂ ಜೈನರೂ ಒಂದು, ಭೇದವಾಗಿ ಕಾಣಲಾಗದು. ಶ್ರೀತಿರುಮಲೆಯ ತಾತಯ್ಯಂಗಳು ಸಮಸ್ತರಾಜ್ಯದ ಭವ್ಯ ಜನಂಗಳ ಅನುಮತದಿಂದ ಬೆಳಗುಳದ ತೀರ್ತ್ಥದಲ್ಲಿ ವೈಷ್ಣವ ಅಂಗರಕ್ಷೆಗೋಸುಕ ಸಮಸ್ತ ರಾಜ್ಯದೊಳಗುಳ್ಳಂತಹ ಜೈನರ ಬಾಗಿಲುಗಟ್ಟಳೆಯಾಗಿ ಮನೆಮನೆಗೆ ವರ್ಷಕ್ಕೆ ೧ ಹಣಕೊಟ್ಟು, ಆಯೆತ್ತಿದ ಹೊನ್ನಿಂಗೆ ದೇವರ ಅಂಗರಕ್ಷೆಗೆಯಿಪ್ಪತ್ತಾಳನು ಸಂತವಿಟ್ಟು ಮಿಕ್ಕ ಹೊನ್ನಿಂಗೆ ಜೀರ್ಣ್ನಜಿನಾಲಯಗಳಿಗೆ ಸೊಧೆಯನಿಕ್ಕುವುದು. ಈ ಮರಿಯಾದೆಯಲು ಚಂದ್ರಾರ್ಕರುಳ್ಳನ್ನಂ ತಪ್ಪಲೀಯದೆ ವರ್ಷವರ್ಷಕ್ಕೆ ಕೊಟ್ಟು ಕೀರ್ತಿಯನೂ ಪುಣ್ಯವನೂ ಉಪಾರ್ಜಿಸಿಕೊಂಬುದು. ಈ ಮಾಡಿದ ಕಟ್ಟಳೆಯನು ಆವನೊಬ್ಬನು ಮೀಱಿದವನು ರಾಜದ್ರೋಹಿ, ಸಂಘಸಮುದಾಯಕ್ಕೆ ದ್ರೋಹಿ.

ಕಲ್ಲೆಹದ ಹರ್ವ್ವಿಸೆಟ್ಟಿಯ ಸುಪುತ್ರ ಬುಸುವಿಸೆಟ್ಟಿ ಬುಕ್ಕರಾಯರಿಗೆ ಬಿನ್ನಹಂ ಮಾಡಿ ತಿರುಮಲೆಯ ತಾತಯ್ಯಂಗಳ ಬಿಜಯಂಗೈಸಿ ತಂದು ಜೀರ್ಣ್ನೋದ್ಧಾರವ ಮಾಡಿಸಿದರು. ಉಭಯ ಸಮಯವೂ ಕೂಡಿ ಬುಸುವಿಸೆಟ್ಟಿಯರಿಗೆ ಸಂಘನಾಯಕ ಪಟ್ಟವ ಕಟ್ಟಿದರು.

# ಮಲಪನಗುಡಿ ಶಾಸನ

ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ, ಶ್ರೀವೀರಪ್ರತಾಪದೇವರಾಯ ಮಹಾರಾಯರು ರಾಜ್ಯಂ ಪಾಲಿಸುವಲ್ಲಿ, ಶ್ರೀಮದ್ಭಾಸ್ಕರ ಕ್ಷೇತ್ರದ ಶ್ರೀವಿರೂಪಾಕ್ಷ ದೇವರ ಪಂಚಕೋಶದೊಳಗೆ ಬಿಸಿಲಹಳ್ಳಿಯ ಕಣಿವೆಯ ಬಡವಲಿಯ ಕಣಿವೆಯ ಹಾದಿಕೂಡಿದ ಮಹಾಪಥದಲ್ಲಿ ಬುಳ್ಳೆನಾಯಕರ ಮಕ್ಕಳು ಹೆಗ್ಗಡೆ ಸೋವಣ್ಣ ಅಣ್ಣಗಳು ಅಜವಟಗೆಯನಿಕ್ಕಿಸಿ, ಮಾಳಿಗೆ ಕೂಪಾರಾಮವನು ಮಾಡಿಸಿ, ಈ ಅಜವಟಿಗೆಯ ಧರ್ಮ್ಮ ಆಚಂದ್ರಾರ್ಕಸ್ಥಾಯಿಯಾಗಿ ನಡೆಯಬೇಕೆಂದು

ಕೊಟ್ಟ ವೃತ್ತಿಗಳ ವಿವರ ಇಲ್ಲಿ ಬರುತ್ತದೆ. ಅನಂತರ :

ಅಂತು ಈ ಮೂಱು ವೃತ್ತಿಯ ಬೆಳೆಯ ಆದಾಯವನು ಮೂಱು ಭಾಗವ ಮಾಡಿ, ಆ ಅಜವಟಿಗೆಯ ನಡಸುವ ವಿರುಪಣ್ಣಗಳಿಗೆ ಒಂದು ಭಾಗೆ; ಅಜವಟಿಗೆಗೆ ನೀರಹೊಯ್ವುದಕ್ಕೆ, ಮರಗಳಿಗೆ ನೀರನೆಱೆವದಕ್ಕೆ, ಮಾಳಿಗೆ ಗಿಳಿಲಾದರೆ ಕಟ್ಟು ವುದಕ್ಕೆ, ಅಜವಟ್ಟಿಗೆಗೆ ಗುಡಾಣ ಬಿಂದಿಗೆ ಕರಗ ಮೊಘೆಗಳ ಕ್ರಯಕ್ಕೆ, ಸುತ್ತಣ ಮನೆ ಅಣಿ ಮಾಡಿಕೊಂಡು ಇಹದಕ್ಕೆ, ಬಾವಿಹೂಳಿದರೆ ತೋಡುವುದಕ್ಕೆ—ಇಷ್ಟರ ಉಪ ಕ್ಷಯಕ್ಕೆ ಮಿಕ್ಕ ೨ ಭಾಗೆ ಸಲುವುದು. ಈ ಮರಿಯಾದೆಯಲು ಆ ವಿರುಪಣ್ಣಗಳು ತನ್ನ ಮಕ್ಕಳು ಮಕ್ಕಳು ತಪ್ಪದೆ ಅಜವಟಿಗೆಯ ಧರ್ಮ್ಮವನು ನಡಸುವರು. ನಡಸದೆ ಉಳಿದಡೆಯು ಧರ್ಮಿಷ್ಟರಾಗಿಯಿದ್ದವರು ಈ ಶಾಸನವನು ಓದಿಸಿ ನೋಡಿ ಆ ವೃತ್ತಿಗಳನು ವಿಚಾರವಮಾಡಿ ಮುಂದೆ ಆ ಅಜವಟಿಗೆಯ ಧರ್ಮ್ಮವ ನಡಸುವಾತಗೆ ಒಂದು ಭಾಗೆ ಸಲುವುದು. ಅಜವಟಿಗೆಗೆ ನೀರನೆಱವರ ಜೀವಿತ ಮೊದಲಾದ ಎಲ್ಲಾ ಉಪಕ್ಷಯಕ್ಕೆ ಆ ಉಳಿದ ಎರಡು ಭಾಗೆ ಸಲುವುದು

## ಶ್ರೀರಂಗಪಟ್ಟಣದ ಶಾಸನ

ಶ್ರೀಮತ್ ಸ್ವಸ್ತಿ ಶ್ರೀವಿಜಯಾಭ್ಯುದಯ ಶಾಲಿವಾಹನ ಶಕವರುಷ ೧೪೬೪ ಸಂದು ವರ್ತಮಾನ ರಕ್ತಾಕ್ಷಿ ಸಂವತ್ಸರದ ಆಷಾಢ ಶುದ್ಧ ೧೨ರಲ್ಲೂ ಶ್ರೀಮದ್ರಾಜಾಧಿರಾಜ ಪರಮೇಶ್ವರ ಶ್ರೀ ವೀರ ಪ್ರತಾಪ ಅಚ್ಯುತದೇವ ಮಹಾರಾಯರು ಪೃಥ್ವೀರಾಜ್ಯಂಗೆಯ್ಯುತ್ತಿರಲು ಶ್ರೀರಂಗಪಟ್ಟಣದ ದಳವಾಯ ಅಘೌರಗಳು ಮಾನ್ಯಗ್ರಾಮಗಳು ಕರಗ್ರಾಮಗಳಲಿ ಇದಮಾನ್ಯದ ಮಹಾಜನಂಗಳಿಗೂ ಸತ್ರದೇವಸ್ಥಾನಗಳಿಗೂ ಕಾಶ್ಯಪಗೋತ್ರದ ಅಪ್ಪಾಜಿಗಳ ಮಕ್ಕಳು ಪೆದ್ದಿರಾಜಗಳು ಕೊಟ್ಟ ಶಿಲಾಶಾಸನದ ಕ್ರಮವೆಂತೆಂದರೆ

ನಮಗೆ ರಾಮಾಭಟ್ಟಯ್ಯನವರು ಅವರ ಮಾಗಣೆಗೆ ಪಾಲಿಸಿದ ಶ್ರೀರಂಗಪಟ್ಟಣದ ಸೀಮೆಯೊಳಗಣ ಅಗ್ರಹಾರಗಳು ಮಾನ್ಯಗ್ರಾಮಗಳು, ಕರಗ್ರಾಮಗಳಲುಯಿದ ಮಾನ್ಯಗಳು ಸತ್ರದೇವಸ್ಥಾನಗಳಲಿಯು, ಪೂರ್ವದಲಿ ಇಲ್ಲದೆಯಿದ್ದ ಸುಂಕವನು ಕಾಮಪ್ಪನಾಯಕ ಪಾರುಪತ್ಯ ಮಾಡಲಾಗಿ ಅನಿತದಲಿ ಕೊಂಡು ಬಂದರಾಗಿ ಆ ಸುಂಕ ಬೆಡಿಗೆ ಸಹ ಗದ್ಯಾಣ ೩೦೦, ಅಕ್ಷರದಲು ಮುನ್ನೂಱು, ವರಹನನು ಪೆರಂಗೂರಯ್ಯನವರ ಹಾರುವಹಳ್ಳಿವೊಗೆಯ ಸಮುದ್ರದ ಆಲಯ ಸುಂಕವೆಲ್ಲವನೂ ರಾಯರಿಗೂ ರಾಮಾಭಟ್ಟಯ್ಯನವರಿಗೂ ಪುಣ್ಯವಾಗಬೇಕುಯೆಂದು ಉಭಯ ಕಿವರಿಯ (ಕಾವೇರಿಯ?) ಮಧ್ಯದಲ್ಲಿ ಶ್ರೀ ರಂಗನಾಥದೇವರ ಸನ್ನಿಧಿಯಲ್ಲಿ ಪ್ರಥಮ ಏಕಾದಶಿ ದ್ವಾದಶಿಯ ಪುಣ್ಯಕಾಲದಲ್ಲಿ ನಾವು ನಿಮಗೆ ಕುಳವಕಱದು ಧಾರೆಯನೆಱದು ಸರ್ವಮಾನ್ಯವಾಗಿ ಬಿಟ್ಟೆವಾಗಿ ನಿಮ್ಮ ಮಾನ್ಯದ ಅಡಕೆಯ ಸುಂಕ ಬೆಡಿಗೆ ಸಂಮಂಧವಿಲ್ಲ, ನಿಮ್ಮ ಅಡಕೆಯನು ಕೊಂಡ ಬಣಜಿಗರ ಕೈಯಲಿ ಅಡಕೆಯ ಕವೊಳವಾಱು ಮೂಱು ಹಣವಲ್ಲದೆ ಸುಂಕ ಬೆಡಿಗೆಯೆತಕು ಸಂಮಂಧವಿಲ್ಲ. ನೀವು ಸರ್ವಮಾನ್ಯವಾಗಿ ಅನುಭವಿಸಿಕೊಂಡು ಬಹಿರಿ. ಈ ಧರ್ಮಕ್ಕೆ ಅಳುಪಿದವರು ತಮ್ಮ ತಾಯಿತಂದೆಗಳನು ಮಕ್ಕಳನು ವಾರಣಾಸಿಯಲಿ ಕೊಂದ ಪಾಪಕ್ಕೆ ಹೋಹರು. ತಮ್ಮ ಅಭಿಮಾನವನು ಪರರಿಗೆ ಕೊಟ್ಟವರು ರಂಗನಾಥದೇವರಿಗೆ ತಪ್ಪಿದವರು ಎಂದು ನಾವು ನಮ್ಮ ಸ್ವರುಚಿಯಿಂ ಒಡಂಬಟ್ಟು ಕೊಟ್ಟ ದಾನಶಿಲಾಶಾಸನ. ಪೆದ್ದಿರಾಜಗಳ ಒಪ್ಪಿತ.

# ಸಕ್ಕರೆಬೈಲು ತಾಮ್ರ ಶಾಸನ

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ

ಸ್ವಸ್ತಿ ಶ್ರೀಜಯಾಭ್ಯುದಯ ಶಾಲಿವಾಹನ ಶಕವರುಷ ೧೬೨೩ನೆಯ ತಾರಣ ಸಂವತ್ಸರದ ಜೇಷ್ಠ ಶುದ್ಧ ೧ರಲ್ಲು ಶ್ರೀಮತ್ಸಜನ ಶುದ್ಧ ಶಿವಾಚಾರ ಸಂಪಂನ ದ್ವಾವಾ ಪೃಥ್ವೀ ಮಹಾಮಹತ್ತಿನವಳಗಾದ ಕುಪ್ಪಸ್ತ ಕಂಥೆ ಮನೋಹರದೇವರ ಶಿಷ್ಯರು ಕೆಂಪುನಂಜೇದೇವರಿಗೆ ಶ್ರೀಮದ್ದೆಡವ ಮುರಾರಿ ಕೋಟೇ ಕೋಳಾಹಳ ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ ಶಿವಗುರು ಭಕ್ತಿ ಪರಾಯಣರಾದ ಕೆಳದೀ ಸದಾಶಿವರಾಯ ನಾಯಕರ ವಂಶೋದ್ಭವರಾದ ಸಂಕಣ್ಣನಾಯಕರ ಪ್ರಪೌತ್ರರು ಸಿದ್ಧಪ್ಪನಾಯಕರ ಪೌತ್ರರು ಶಿವಪ್ಪನಾಯಕರ ಪುತ್ರರಾದ ಸೋಮ ಶೇಖರ ನಾಯಕರು ಕೊಟ್ಟ ಧರ್ಮಶಾಸನದ ಕ್ರಮವೆಂತೆಂದರೆ :

ಬಿದಿರೂರ ಬಾಳೆಕೊಪ್ಪದಲ್ಲೊ ನಮ್ಮ ಹೆಸರಲ್ಲು ಮಠವ ಕಟ್ಟಿಸಿ ನಿಮಗೆ ಶರಣುಮಾಡಿದ ವಶೀಕೃತ ಮಠದ ಧರ್ಮಕೆ ಹೇರುವ ಮಾನ್ಯದ ಎತ್ತು ನಡೆ ಆಯಿವತ್ತು(೫೦) ಎತ್ತಿನ ಮಾನ್ಯವನು ಶಿವಾರ್ಪಿತವಾಗಿ ಬಿಟ್ಟಿಧೇವೆ. ಈ ಎತ್ತಿನಲೂ ತಾವು ಜೀವಿಸು ಅಡಕೆ ಮೆಣಸು ಝುಲ್ಲಿಸಟಿ ಖೊಬರಿ ಕವಾಡ ಅಕ್ಕಿ ಭತ್ತ ರಾಗಿ ಉಪ್ಪು ಹುಳಿ ಬೆಲ್ಲ ಎಣ್ಣೆ ತುಪ್ಪ ವಿದಳ ಬೂಸ ಕಾಯಿ ಕತ್ತ ಹೊಗೇ ಸಪ್ಪು ಜವಳಿ ಮುಂತಾಗಿ ಇಕ್ಕೇರಿದುರ್ಗ ವಸುವಾರೆ ಸಕ್ಕರೇ ಪಟ್ಟಣ, ಕಾಮನ ದುರ್ಗದ ಹೋಬಳಿ ಘಟ್ಟದ ಕೆಳಗಣ ಹೋಬಳಿ, ಚಂದಾವರದ ಸುಂಕ ಸಹಾ ಈ ಠಾಣೆಗಳಲ್ಲಿಯೆತ್ತುಗಳ ವರ್ನವಯುಸಬರಸಿ ಹೇರಿಕೊಂಡು ಷಡ್ದರುಸನ..................... ಧರ್ಮ ವನೂ ನಡೆಸಿಕೊಂಡು ನಿಮ್ಮ ಶಿಷ್ಯಪರಂಪರೆಯಾಗಿ ಆಚಂದ್ರಾರ್ಕಸ್ಥಾಯಿ ಗಳಾಗಿ ಸುಖದಿಂ ಅನುಭವಿಸಿಕೊಂಡು ಬಾಹದು—ಎಂದು ಕೊಟ್ಟ ಎತ್ತಿನ ಮಾನ್ಯದ ಧರ್ಮಶಾಸನ. ದೇವಸಾಕ್ಷಿ.

## ಚಾಮರಾಜನಗರದ ಅರಿಕುಠಾರ ಶಾಸನ

ಶ್ರೀ ಮದ್ಗಿರೀ ಪ್ರಘೋರ್ಜ್ಜೀಯಾದಷ್ಟ ಮೂರ್ತೀಃ ಪಿನಾಕಿನಃ
ಕೈಲಾಸಾದ್ರೀಂದ್ರ ನಾಥಸ್ಯ ಶಾಸನಂ ವಿಶ್ವಶಾಸನಂ

ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೨೭ ಸಂದು ವರ್ತಮಾನ ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ ೩ರಲು ಶ್ರೀಮನ್ಮಹಾ ಮಂಡಲೇಶ್ವರ ರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ ಶ್ರೀ ವೀರ ವೆಂಕಟಪತಿದೇವ ಮಹಾರಾಯರು ಪೃಥಿವೀ ರಾಜ್ಯಂಗೆಯಿವಲ್ಲಿ ಉಮ್ಮತ್ತೂರ ಸೀಮೆಯ ಉಯ್ಯಂಬಳ್ಳಿಯ ಸ್ಥಳದ ಹಂಗಳಿಪುರದ ಗ್ರಾಮವು ಪ್ರಾಕಿನಲ್ಲಿ ಕಮ್ಮರ ವಳಿಯ ವೊಡೆಯರುಗಳಿಗೆ ಶ್ರೋತ್ರಿಯ ಗುತ್ತಿಗೆಯಾಗಿ ಸೇರಿ ಅರಿಕುಠಾರದ ಪ್ರಭು ಗಳಿಗೆ ತೆತ್ತು ಬರುತ್ತಿದ್ದ ಸಂಬಂಧ ಈ ತಿಥಿಯಲ್ಲು ಅರಿಕುಠಾರದ ಸ್ಥಳದ ಪ್ರಭು ಚನ್ನರಾಜವೊಡೆಯರ ಕುಮಾರರು ಚಂದ್ರಶೇಖರ ಒಡೆಯರು ಆ ಕಮ್ಮರವಳ್ಳಿಯ ವೀರರಾಮೆಯ ಒಡೆಯರ ಮಕ್ಕಳು ಮಲರಾಜ ಒಡೆಯರು ಕೂಡಿ ಉಭಯಾನು ಮತದಿಂದ ಕುಲಸ್ವಾಮಿ ಶ್ರೀಮನ್ಮಹಾದೇವದೇವೋತ್ತಮ ದಕ್ಷಾಧ್ವರಧ್ವಂಸನ ವಿನೋದ ವಿಲಾಸಿಯಪ್ಪ ಅರಿಕುಠಾರದ ವೀರಭದ್ರ ದೇವರ ನೈವೇದ್ಯ ಪಾತ್ರ ಭೋಗಕ್ಕೆ ಈ ಹಂಗಳಿಯ ಪುರದ ಗ್ರಾಮವನು ಕೊಟ್ಟೆವಾಗಿ ಆ ಗ್ರಾಮಕ್ಕೆ ಸ್ರಾಕು ಸಲುವ ಚತುಸ್ಸೀಮೆಯೊಳಗಣ ಗದ್ದೆ ಬೆದ್ದಲು ತೋಟ ತುಡಿಕೆ ಕೆಱೆ ಕಟ್ಟೆ ಆಡುಮನೆ ಸುಂಕ ಸುವರ್ನಾದಾಯ ಬಿಟ್ಟಿ ತೆರಿಗೆವೊಳವಾಜು ಹೊರವಾಜು— ಇವು ಮುಂತಾದ ಸಕಲ ಸುವರ್ಣಾದಾಯ ಅಲ್ಲಿದ್ದ ನಿಧಿ ನಿಕ್ಷೇಪ ಜಲ ಪಾಷಾಣ, ಅಕ್ಷಿಣಿ ಆಗಾಮಿ ಸಿದ್ಧ ಸಾಧ್ಯಂಗಳೆಂಬ ಅಷ್ಟವಿಧ ತೇಜಸ್ಸಾಮ್ಯವೆಲ್ಲವಾ ವೀರ ಭದ್ರದೇವರ ಸೇವೆಗೆ ಮೀಸಲುವುದು—ಎಂದು ಸರ್ವಮಾನ್ಯವಾಗಿ ಸುವರ್ಣೋದಕ ಧಾರಾಪೂರ್ವಕದಿಂ ಕೊಟ್ಟ ಹಂಗಳಿಯಪುರಗ್ರಾಮದ ಶಾಸನಕ್ಕೆ ಭದ್ರಂ ಶುಭಂ ಮಂಗಳಂ.

# ಅರಕಲಗೂಡು ಶಾಸನ

ಶ್ರೀಮಮ್ರಾಧಿರಾಜ ರಾಜಪರಮೇಶ್ವರ ಪ್ರವೃಢಪ್ರತಾಪನಪ್ರತಿಮ ಶ್ರೀ ವೀರಚಿಕದೇವ ಮಹಾರಾಜ ವಡಯರ್ಐಯ್ಯನವರು, ಪೈಂಗಳನಾಮ ಸಂವತ್ಸರದ ವೈಶಾಖ ಬಹುಳ ೩ರಲ್ಲು ಶ್ರೀರಂಗಪಟ್ಣದ ರತ್ನಸಿಂಹಾಸನಾರೂಢರಾಗಿ ಪ್ರಥಿವೀ ಸಾಮ್ರಾಜ್ಯಂಗೆಯ್ಯುತ್ತಾ ಇರಲು, ಅರಕಲಗೂಡು ಭೈರುವ ಹೆಬ್ಬಾರುವನ ವೆಂಕಟ ಪತಿಗೆ ಬರ್ಸಿ ಕೊಟ್ಟ ದಾನಶಾಸನಾ—

ಅದಾಗಿ ಅರಕಲಗೂಡು ಅತವಣೆ ಸ್ಥಳದ ನಾಡಿಗರವರ ಶ್ಯಾನುಭಾಗತನವು ಪ್ರೂರ್ವಾರಭ್ಯ ನಿನ್ನವಂಶ ಪಾರಂಪರ್ಯವಾಗಿಯೂ ನಿಮಗೆ ನಡೆದು ಬರುತ್ತಾ ಇದ್ದಲ್ಲಿ ನಿನ್ನ ಯಜಮಾನ ತನ್ನ ಹಸ್ತಕನ ಮೇಲೆ ಆ ಬದುಕು ಆರೋಪಿಸಿ ಸ್ಥಳಬಿಟ್ಟು ಹೋಗಿ ಅಲ್ಲಿಯೇ ಸ್ವರ್ಗಸ್ಥನಾದ ಕಾರಣ ನೀನು ಇಲ್ಲಿಗೆ ಬಂದು ನಾನು ಅರಕಲ ಗೂಡು ಸ್ಥಳದ ಅತವಣೆ ಸ್ಥಳದ ಶ್ಯಾನುಭಾಗ ಎಂದು ಅರಿಕೆಮಾಡಿಕೊಳ್ಳಲಾಗಿ ನಿನಿಗೆ ಸೇರಲಾರದ ನಿನ್ನ ಹಸ್ತಕ ಸಂಜಪ್ಪ ಎಂಬವ ಇಲ್ಲಿಗೆ ಒಂದು ಅರಿಕೆಮಾಡಿ ಕೊಂಡ ವಿವರ: ಈ ವೆಂಕಟಪತಿ ಅರಕಲಗೂಡು ಸ್ಥಳದ ಶ್ಯಾನುಭಾಗನ ಮಗನೂ ಅಲ್ಲ; ಇವರ ಯಜಮಾನ ರಾಜದ್ರೋಹತನವ ಮಾಡಿ ಹೋದಾ ಎಂಬುವದಾಗಿ ಅರಿಕೆಮಾಡಿಕೊಳಲಾಗಿ, ನೀನು ಈ ಮಾತಿಗೆ ನೆಟ್ಟಗೆ ನಿಂತು ಅರಕಲಗೂಡು ಅತವಣೆ ಸ್ಥಳದ ಶ್ಯಾನುಭಾಗತನವು ರಾಯದತ್ತವಾಗಿ ನನ್ನ ವಂಶ ಪಾರಂಪರ್ಯ ವಾಗಿ ನಮಗೆ ನಡೆದು ಬರುತ್ತಾಯಿದ್ದದ್ದು ವುಂಟು. ನಮ್ಮಲ್ಲಿ ರಾಜದ್ರೋಹತನವೂ ಇಲ್ಲಾ ಎಂಬುವಾಗಿ ಅಪ್ಪಣೆ ಪ್ರಕಾರಕ್ಕೆ ಸುತ್ತಲ್ ಅರಕೇಶ್ವರ ಸ್ವಾಮಿಯವರ ಪಾದಸನ್ನಿಧಾನದಲ್ಲಿ ಅತಿ ಕಠಿಣತರವಾಗಿ ಕಾದುಯಿದ್ದ ತುಪ್ಪದಲ್ಲಿ ಕೈಯ್ಯನಿಕ್ಕಿ ಗೆದ್ದಿಯಾದ ಕಾರಣ, ಪೂರ್ವ ಪ್ರಕಾರಕ್ಕೆ ಈ ದಿವ್ಸದಲ್ಲು ಈ ಅರಕಲಗೂಡ ಅತವಣೆ ಸ್ಥಳದ ಶ್ಯಾನುಭಾಗತನವನ್ನು ಈ ಶ್ಯಾನುಭಾಗತನಕ್ಕೆ ಪೂರ್ವದಲ್ಲಿ ನಡೆಯುತ್ತಾ ಇದ್ದ ಸ್ವಾಸ್ತ್ಯಗಳಲ್ಲಿ ಈ ದಿವ್ಸ ಸೇಮಕಾಮಾಡಿದ್ದು ಅರಕಲಗೂಡಿಗೆ ವಾಯುವ್ಯ ಮೂಲೆಯಲ್ಲಿ ವಿದಿಕ್ಕಿನಲ್ಲಿ ಹೇಮಾವತೀ ನದೀ ತೀರದಲ್ಲಿ ಇರುವ ಶ್ಯಾನುಭಾಗನ ಹಳ್ಳಿಗ್ರಾಮಕ್ಕೆ ೩೫೦ ವರಹ ಅರಕಲಗೂಡು ಕ್ಸಬಾ ಗ್ರಾಮದಲ್ಲು ಬಿಡಿಸ್ವಾಸ್ತ್ಯ ೭॥-೧, ವೀರಭದ್ರ ದೇವರಗುಡಿ ಹಿಂದಣಮನೆ ಸಹಾ ಈದಿವ್ಸದಲ್ಲು ನಿನಗೆ ಧಾರಾಗ್ರಹೀತವಾಗಿ ಕೊಟ್ಟುಯಿರುವದ್ದರಿಂದಾ ಅಪ್ಪಣೆ ಪ್ರಕಾರಕ್ಕೆ ಅರಕಲ ಗೂಡ ಅತವಣೆ ಸ್ಥಳದ ಶ್ಯಾನುಭಾಗತನದ ಸಕಲ ಲೆಖ್ಖವನ್ನು ಬರೆದುಕೊಂಡು ಈ ಸ್ವಾಸ್ತ್ಯಂಗಳನ್ನು ಅನುಭವಿಸಿಕೊಂಡು ನಿನ್ನ ಪುತ್ರ ಪೌತ್ರ ಪಾರಂಪರ್ಯ ವಾಗಿಯೂ ಸುಖದಲ್ಲಿಯಿರುವ್ರದು—ಎಂಬುವಾದಾಗಿ ಬರ್ಸಿಕೊಟ್ಟ ದಾನಶಾಸನಾ.

# ಪ್ರಸನ್ನ ನಂಜುಂಡೇಶ್ವರ ಶಾಸನ

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರ್ಷಂಗಳು ೧೭೪೩ ಸಂದ ವರ್ತಮಾನವಾದ ವಿಷುನಾಮ ಸಂವತ್ಸರದ ಆಶ್ವಿಜ ಶುದ್ಧ ೧ ಗುರುವಾರ ದಲ್ಲು ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಮದ್ರಾಜಾಧಿರಾಜ ಮಹಾರಾಜ ವೀರ ನರಪತಿ ಶ್ರೀ ಕೃಷ್ಣರಾಜ ಒಡೆಯರವರ ಪಟ್ಟಮಹಿಷಿಯರಾದ ಲಕ್ಷ್ಮೀವಿಳಾಸ ದೇವಾಜಮ್ಮಣ್ಣಿಯವರು ತಮ್ಮ ದೀರ್ಘ ಸೌಮಂಗಲ್ಯ ಸಂಪತ್ಸೌಭಾಗ್ಯಾಭಿ ವೃದ್ಧ್ಯರ್ಥವಾಗಿ ಶ್ರೀ ಚಾಮುಂಡೇಶ್ವರಿ ಪ್ರೀತ್ಯರ್ಥವಾಗಿ ತಮ್ಮ ಹೆಸರಿಂದಾ ಲಕ್ಷ್ಮೀವಿಳಾಸದ ದೇವಾಂಬಾ ಅಗ್ರಹಾರವೆಂದು ಹೆಸರನಿಟ್ಟ ಮಹಿಶೂರು ಕೋಟೆಗೆ ಪಶ್ಚಿಮಭಾಗ ಖಾಸ ಕುದುರೆ ಲಾಯಕ್ಕೆ ಬಲದ ಪಾರ್ಶ್ವದಲ್ಲಿ ಇಪ್ಪತ್ತೊಂದು ಮನೆ ಗಳ ಕಟ್ಟಿಸಿ ಅಗ್ರಹಾರ ಪ್ರತಿಷ್ಠೆಯಂ ಮಾಡಿ ಈ ಅಗ್ರಹಾರಕ್ಕೆ ಚತುರ್ದಿಕ್ಕಿನಲ್ಲು ವಾಮನಮುದ್ರೆ ಶಿಲಾಪ್ರತಿಷ್ಠೆಯಂ ಮಾಡಿಸಿ, ಈ ಅಗ್ರಹಾರಕ್ಕೆ ಈಶಾನ್ಯ ಭಾಗ ದಲ್ಲಿ ಶಿವದೇವಾಲಯಮಂ ನಿರ್ಮಿಸಿ ಪ್ರಸನ್ನ ನಂಜುಂಡೇಶ್ವರ ಪ್ರತಿಷ್ಠೆಯಂ ಗೈದು ದೇವ ಬ್ರಾಹ್ಮಣರಿಗೆ ಗೃಹಸೋಬಸ್ಕರ ಸಮೇತವಾಗಿ ವೃತ್ತಿಗಳಂ ಧಾರೆಯೆರದು ಈ ಮಹಾಜನಂಗಳಿಗೆ ದೇವಾಲಯಕ್ಕೆ ಸಹಾ ತಮ್ಮ ರುಜು ಮೊಹರು ಖಾಸದ ಕತ್ತಿನಿಂದ ಪ್ರತ್ಯೇಕವಾಗಿ ದಾನಶಾಸನಂಗಳಂ ಬರೆಸಿಕೊಟ್ಟು ದೇವರ ವೃತ್ತಿ ಒಂದು, ಬ್ರಾಹ್ಮಣರ ವೃತ್ತಿ ಇಪ್ಪತೊಂದು ಸಹಾ ಗಣಸಂಖ್ಯಾವೃತ್ತಿ ಇಪ್ಪತ್ತೆರಡಕ್ಕೆ ಈ ವೃತ್ತಿ ಒಂದಕ್ಕೆ ಮೂವತ್ತಾರು ವರಹಾದಮೇರೆಗೆ ಒಟ್ಟು ಏಳುನೂರು ತೊಂಬತ್ತೆರಡು ವರಾಹಕ್ಕೆ ಎಡತೊರೆ ತಾಲ್ಲೂಕಿನಲ್ಲಿ ಕುಂದೂರು ಒಂದು, ಮಟಕೆರೆ ಒಂದು, ಕಲ್ಲ ಹಳ್ಳಿ ಒಂದು, ಹೊಸೂರು ಒಂದು, ವಡ್ರಹಳ್ಳಿ ಒಂದು – ಈ ಐದು ಗ್ರಾಮ ಇದರ ಉಪಗ್ರಾಮಗಳು ಸಹಾ ವಿಂಗಡಿಸಿಕೊಟ್ಟು ಈ ಗ್ರಾಮಗಳ ಆಯಿದರ ಉಪಗ್ರಾಮ ಗಳಲ್ಲಿ ಸಹಾ ಎಷ್ಟು, ಹೆಚ್ಚು, ಹುಟ್ಟುವಳಿಯಾದಾಗ್ಯೂ ನಿರುಪಾಧಿಕ ಸರ್ವಮಾನ್ಯ ವಾಗಿ ಈ ವಿಶಿಷ್ಟ ಮಹಾಜನಂಗಳ ಗೋತ್ರ ಸೂತ್ರ ತ್ರಿಪೂರೂಷವೆನಿಸಿ ಎಡತೊರೆ ತಾಲೋಕಿಗೆ ನಮ್ಮ ಆಳಿದ ಮಹಾಸ್ವಾಮಿಯವರು ಬುದ್ಧಿ ಸನ್ನದು ಅಪ್ಪಣೆಮಾಡಿಸಿ ಕೊಟ್ಟು ಈ ಪ್ರಸನ್ನ ನಂಜುಂಡೇಶ್ವರ ದೇವರ ದೀಪಾರಾಧನೆ ರಥೋತ್ಸವಾದಿಗಳಿಗೆ ದೇವರಿಗೆ ಸಮರ್ಪಿಸಿರುವ ವೃತ್ತಿಹೊರತಾಗಿ ವರ್ಷಂ ಪ್ರತಿಯಲ್ಲೂ ಮುನ್ನೂರು ತೊಂಬತ್ತಮೂರು ವರಹಾವು ಐದುಹಣ ತಸ್ತೀಕು ನಡೆಸಿಕೊಂಡು ಬರುವಂತೆ ಈ ಮೈಸೂರು ತಾಲೋಕು ಅಮಲದಾರನಿಗೆ ಸಹಾ ನಮ್ಮ ಆಳಿದ ಮಹಾಸ್ವಾಮಿ ಯವರ ಬುದ್ಧಿಸನ್ನದು ಅಪ್ಪಣೆಮಾಡಿಸಿಕೊಟ್ಟಯಿಧೆ.

ಮದ್ವಂಶಜಾಃ ಪರಮಹೀಪತಿವಂಶಜಾವಾ ಯೇ ಭೂಮಿಪಾಸ್ಸತತಮುಜ್ವಲ ಧರ್ಮಚಿತ್ತಾಃ
ಮದ್ಧರ್ಮಮೇವ ಸತತಂ ಪರಿಪಾಲಯಂತಿ ತತ್ಪಾದ ಪದ್ಮಯುಗಳಂ ಶಿರಸಾ ನಮಾಮಿ

ಶ್ರೀ ಕೃಷ್ಣ

# ಗುಣವರ್ಮ

ಸಂಗರಾರ್ಜುನಂ ಸಿದ್ಧನಂತಾಸಿದ್ಧಕ್ಷೇತ್ರಮಂ ಪುಗುತಂದನದೆಂತಪ್ಪು ದೆಂದೊಡೆ—ಇಂದ್ರಜಾಲಿಗನಂತುರಿಯನುಗುೞ್ವ ಬಳ್ಳಿಗಳಿಂ, ವಾತಪೂರಣಗಳಿಂ ನೊಂದಂತೆ ದೆಸೆದೆಸೆಗೆ ಪೊಂಗುವ ಗೂಗೆಗಳಿಂ, ಜೆಡೆಕಾಱರೆರ್ದೆಯಂತೆ ಬೇಯು ತ್ತಿರ್ದ ಪೆಣಂಗಳಿಂ, ಜಿಗುಱಿಯಂತೆ ನೆತ್ತರನೆ ಪೀರ್ವ ಡಾಕಿನಿಯರಿಂ, ಭೈರವ ನಂತೆ ಛಾಂಕಾರಂಗುಡುತಿರ್ಪ ಸಾಧಕರಿಂ, ಗೋದಾಮೆಯಂತೆ ಬಗೆದ ಬಣ್ಣಮಪ್ಪ ರಣಜೆಟ್ಟಿಗರಿಂ, ನಾರಾಯಣನಂತೆ ಬಲಿಯಂ ಬೇಡುವ ಬ್ರಹ್ಮರಾಕ್ಷಸರಿಂ, ಬಲ ದೇವನಂತೆ ಪೆಣನಂ ಪೊತ್ತು ತೊೞಲ್ವ ಕ್ಷೇತ್ರಪಾಲರಿಂ, ಈಶ್ವರನಂತೆ ಪಾವಂ ತೊಟ್ಟಿರ್ದ ಬೇತಾಳರಿಂ, ಮೀನ್ಗಳಂತೆ ಗಾಳದೊಳ್ ತೊಡರ್ದಿರ್ದ ಪಾದರಿಗರಿಂ, ಮಹಿಷಾಸುರನಂತೆ ಸೂಲದೊಳ್ ನೊಂದು ನರಳ್ವ ಕಳ್ಳರಿಂ, ಬೊಂತಿಯಂತೆ ದಕ್ಕಿನೊಳಿರ್ದ ಪಂದಲೆಗಳಿಂ, ಬಂದಿಕಾಱನಂತೆ ತಿಱಪುವಾರ್ಜು ಪಿಡಿವ ಶಾಕಿನಿ ಯರಿಂ, ಮೃಗಯಾಪತಿಯಂತೆ ಕೀಲಾಲಜಲದೊಳೋಲಾಡುವ ಲಲಾಮೆಯರಿಂ ಸೋಂಬನು ಮೆಚ್ಚಿ ಬೇಱೂರ್ಗೆ ಪೋದ ಸೂಳೆಯಂತುಯ್ಯಲಾಡುವ ರಣದೇವತೆಯ ರಿಂದತಿ ಭಯಂಕರಾಕಾರಮಪ್ಪುದದಱೊಳಗೆ.

೧

ಆಸ್ನೆಗಂ ಶ್ರೀಮತಿಯುಂ ಅನಂತ ಸಾಮಂತ ಸೀಮಂತಿನೀ ಪರಿವೃತೆಯು ಮತಿ ಪ್ರೌಢವಾರ ವನಿತಾಪರಿವೃತೆಯುಮಾಗಿ ಪಾಲ್ಗಡಲ ತೆರೆಯ ನೊರೆಯ ದೊರೆಯ ದುಕೂಲಾಂಬರಮನುಟ್ಟುಟ್ಟ ದುಕೂಲವಸನಮಾತ್ರೀಯ ಘನ ಜಘನದ ನುಣ್ಪಿನೊಳ್ ನುಣ್ಪುವೆಗೆತ್ತು ಝಣಝಣಾಯಮಾನಮಣಿಕಿಂಕಿಣೀವಿರಾಜಿತ ಕನಕಕಾಂಚೀಕಳಾಪಮನನಂಗರಾಗರಸಪ್ರವಾಹಕ್ಕೆ ಕಟ್ಟೆಗಟ್ಟುವಂತೆ ಕಟ್ಟಿ ಸಾಂದ್ರ ಚಂದನದ್ರವಾನುಲಿಪ್ತೋದೃಪ್ತಕುಚಕಲಶಂಗಳಂ ತರಲತರತಾರಹಾರದಿಂದಲಂಕರಿಸಿ ಚಂಪಕದಲದಾಮ ಕೋಮಲ ನಿಜ ಭುಜಲತೆಗಳನನೇಕ ಮೌಕ್ತಿಕ ಮಣಿವಿಭೂಷಣಂಗಳಿಂ ಕುಸುಮಿಸಿ ಮನ್ಮಥೋತ್ಸವಾಭಿಮುಖ ಮುಖಚಂದ್ರನಂ ಚಂದ್ರಕವಲದಿಂತೊಡೆದೋರೊಂದೆ ವಜ್ರದ ಪಂಚಲೋಹಮುಮನವರ್ಕ್ಕಮರ್ಕ್ಕೆವೆತ್ತ ಮುತ್ತಿನ ಮುಗುಳ್ಗಳುಮನಿಟ್ಟಾ ಮುಗುಳನೆ ಬಿಱಿಮುಗುಳ್ಗೆತ್ತಿ ಜಗಿದ ಮಱಿದುಂಬಿಯಂತೆ ಸೊಗಯಿಸೆ ತೀವಿದ ಕೊಗ್ಗಿಯ ಕತ್ತುರಿಯುಂ ಕತ್ತುರಿಯೊಳಂಟೆ ಪರಿಜೆಯುಂ ಪರಿಜೆಯೊಳ್ ಪರಿಚಯಂಬಡೆದ ಮದವಟ್ಟೆಯುಂ, ಮದವಟ್ಟೆಯೊಳೊಡಂಬಟ್ಟ ವಿಪುಲಕಪೋಲತಲಲಿಖಿತವಿಚಿತ್ರಪತ್ರಲೇಖೆಯುಂ ಪತ್ರಲೇಖೆಯಂ ಮುಗುಳ್ನಗೆ ನಗುವಂತಿರ್ದಧರಮುಮನಧರಂ ಮಾಡಿ ಪೊಳೆವ ಸುಲಿಪಲ್ಲ ಪೊಳಪುಂ ಸುಲಿಪಲ್ಲ ಪೊಳಪೆಂಬ ತನ್ನ ಬಾಳ ಪೊಳಪನೆ ಮೆಱಿದು ಸಮಱಿದ ಮದನನೊಡ್ಡಣದಂತೆ ಸಮಱಿದ ಪುರ್ವುಂ ಪುರ್ವೆಂಬ ಕರ್ಬಿನ ಬಿಲ್ಲಿಂ ಬರ್ದುಂಕಿದ ಮದನನಲರಂಬೆಂಬಿನ ಮಿಂಬಾಗಿರ್ದ ನೆಲೆವೊಟ್ಟುಂ ನೆಲೆವೊಟ್ಟನೊಟ್ಟೈಸಿ ಪಳಂಚಲೆವ ಕುರುಳೋಳಿಯುಂ ಕುರುಳೋಳಿಯೊಳ್ ಮುನ್ನಮೆ ಸೊಗಯಿಸುವ ಚಿನ್ನಪೂಗಳುಂ ಚಿನ್ನಪೂಗಳೆಡೆಯೆಡೆಯೊಳ್ ನಿಮಿರ್ದು ಮಿಱುಮಿಱುಗುವ ತಲೆದುಡುಗೆಯುಂ ತಲೆದುಡುಗೆಯೊಳೊಡಂಬಡಂ ಪಡೆದು ಮಿಳಿರ್ದು ಪೊಳೆವ ಪೊಂದಳಿರುಂ ಪೊಂದಳಿರೊಳೊಂದವಿಂದಿಯಲ್ಲದೊಂದಿ ನಾಡೆಯುಮುಂಡಂಬಡೆದು ಪದನಱಿದು ತಳಿದ ಮೃಗಮದ ಸಲಿಲದೊಳ್ ಮೆಲ್ಲಮೆಲ್ಲನುಳ್ಳಲರ್ದ ಜೆಲ್ಪಿಂಗೆ ಮುಡಿಗವಿದಂತೆ ತೋಱುವ ತೋಱ ಮಲ್ಲಿಗೆಯ ಮುಡಿಯುಮೆಸೆಯೆ ಕೈಗೆಯ್ದಾಗಳ್.

೨

ಆಗಳಾ ಬಸಂತರಾಜನ ಬರವಿಂಗೆ ಗುಡಿಗಟ್ಟಿದಂತೆ ಬಳ್ಳಳ ಬಳೆದ ಮಿಳಿರ್ವ ಶೋಕೆಯತಳಿರ್ಗಳುಮಾತನ ಬರವಿಂಗೆ ತೋರಣಂಗಟ್ಟಿದಂತೆ ಬಂದ ಮಾಮರಂಗಳನಡರ್ದು ತೊಡರ್ದೆಳಗೊಂಬುಗಳ್ಪಿಡಿದು ಮರದಿಂ ಮರಕ್ಕೆ ದಾಂಗುಡಿವಿಡುವ ಮಾಘವೀಲತೆಗಳುಮಾತನ ಬರವಿಂಗೆ ನೆಱಿಯೆ ಸೊಗಯಿಸೆ ಕೆಯ್ಗೆಯ್ದ ನಲ್ಲಳಂತೆ

ನನೆಯ ಬಿರಿಮುಗುಳ್ಗಳ ತುಱುಗಲೊಳೆಱಗಿ ತುಱುಗಿದ ಕಲ್ಪಲತೆಗಳುಮಾತನ ಬರವಿಂಗೆ ಬದ್ಧವಣಂ ಬಾಜಿಪಂತೆ ಭೋರ್ಗರೆದು ಮೊರೆವ ತುಂಬಿಗಳುಮಾತನ ಬರವಿಂಗೆ ರಂಗವಲಿಯಿಕ್ಕಿದಂತೆ ಪುಳಿನಸ್ಥಳಂಗಳೊಳುದಿರ್ದ ಕಟಿವೂಗಳುಮಾತನ ಬರವಿಂಗೆ ವನವನಿತೆ ಮೆಚ್ಚಿ ನೆಱೆಯೆ ಕೈಯ್ಗೆಯ್ದಂತೆ ನಿಱಿನಿಱಿಗೊಂಡು ಸೊಗಯಿಸುವ ನಿಱುಗನ ನಿಱುದಳಿರ ಗೊಂಚಲ್ಗಳುಮಾತನ ಮೇಲ್ವಾಯೆ ರಾಗಿಸಿ ರೋಮಾಂಕುರವೊಗೆದಂತೊಗೆದ ಕಳಿಕಾಂಕುರಂಗಳುಮಾತನಂಗಸಂಗದೊಳ್ ಕಾಮರಸಮುಗುವಂತುಗುವ ಸೊನೆಯ ಸೋನೆಗಳುಮನೊಳಕೊಂಡು ತಪಾಶ್ರಮದ ನಂದನವನಂಗಳ್ ಜನಂಗಳನನಂಗಂಗೆ ತೊೞ್ತುವೆಸಂಗೆಯ್ಸಿದುವು—

೩

ಆಗಳಾ ತಾರಾಗಣಂಗಳ್ ದಿಶಾವನಿತೆಯರ ಮಕುಟಮಾಣಿಕಗಳಂತೆನಿತು ಬೆಳಗಿಯುಂ ಕೞ್ತಲೆಯನಲೆಯಲಾಱವಾದುವು. ಕನಕ ಪ್ರಾಸಾದ ಪಙ್ಕ್ತಿಗಳ್ ಪೞಪೞನೆ ಬೆಳಗುವ ಸೊಡರ್ಗಳನಾದಿತ್ಯನ ನಂಟರೆಂದು ತಮೋರಾಜಕಂ ಮುಳಿದು ಸೆಱೆಗೆಯ್ದು ಬೆಳಗಿನ ಸೆಱೆಯ ಮನೆಗಳನ್ನವಾದುವು. ಮದಗಜಗಂಡಸ್ಥಲಂಗಳೊಳೆಱಗಿ ಮೊರೆವ ತುಂಬಿಯ ಬಂಬಲ್ಗಳ್ ವಿಮುಖೀಭೂತಂಗಳಾದುವು. ತಂಡತಂಡದೋಲಗಕ್ಕೆ ಪುಗುವ ಪೊಱಮಡುವ ವಾರ ವಿಳಾಸಿನಿಯರ ನೂಪುರಂಗಳ ರವಂಗಳೊಳ್ ನೃಪಭವನೋಪವನ ದೀರ್ಘಿಕಾ ಹಂಸಕುಳಂಗಳ್ ತಳವೆಳಗಾದುವು. ರಾಜಹಂಸ ಪಾರಾವಾತ ಮಿಥುನಂಗಳ್ ಉತ್ತುಂಗ ಪ್ರಾಸಾದ ಶಿಖರ ಮಣಿಗವಾಕ್ಷಾಂತರಾಳ ವಿವಿಧ ಗೃಹಾಂತರಗತಂಗಳಾದುವು. ಉದಯಗಿರಿ ಕಟಕ ಕುಹರ ಪರಿಕರ ನಿಶಾಕರಂ ಹರಿದಳಿತ ನಿಜಹರಿಣ ರುಧಿರ ನಿಚಯ ನಿಚಿತಮಾದಂತೆ ಲೋಹಿತಾಂಗನಾಗೆ—

ಅನಂತರಮನೇಕ ಶಬರಸಂಘಾತದಿಂದಳಿಯೆ ನೊಂದು ಮೃದಂಗಧ್ವಾನ ಧೀರಮಾಗೆ ಬೆಟ್ಟುಗಳ್ಮಾರ್ದ್ವನಿಗುಡೆ ಗಜರಿಗರ್ಜಿಪ ಕಂಠೀರವ ರವಂಗಳೊಳಿ ಬೆದಱಿ ಬೆಳ್ಚಿ ಕಡುಪುಗಳಂ ಬಿಟ್ಟು ಪರಿದೊಂದಿನಿಂದು ಭೂಮಿತಾಡನಂಗೆಯ್ದು ಮುಗಿಲ್ಗಳ್ಮೊಳಗುವಂತೆ ಮೊಳಗುವ ಯೂಥಪತಿಗಳ ಬೃಂಹಿತಂಗೊಳೊಳಂ ಪರಿದು ಪತ್ತಿ ನಾಯ್ಗಳುಲಿದು ತಿನೆ ಜೋಲ್ದು ಕೆಡೆದ ಹರಿಣಂಗಳ ಕೂಜಿತಂಗೊಳೊಳಂ ಬಳಿ ಸಲ್ವ ಮಱಿಗಳ್ಬೆರಸು ಕಳಕಳಕ್ಕೆ ಕೆಕ್ಕರಿಸಿ ಪರಿವೃತಮಾಗಳಾಗಳೆ ಬೀಳ್ದ ನಿಜಯೂಥ ಪತಿಗಳಂ ಕಂಡು ಪೋಗಲಾಱದೆ ಸುಳಿಸುಳಿದು ನಿಲ್ವ ಕರಿಣಿಗಳ ಚೀತ್ಕಾರದೊಳಂ ಆಗಳೆ ಪೆತ್ತ ಮಱಿಗಳಂ ಬಿಟ್ಟು ಬೆದಱಿ ಪೋಗಲಾರದೆಳಸಿ ನಿಲಲಾರದೆ ಬಾಯ್ಬಿ ಟ್ಟೊದಱಿ ಪೆಳಱಿಪರಿವ ಖಡ್ಗಿಧೇನುಕಂಗಳ ಕರುಣಾಕ್ರಂದನಂಗಳೊಳಂ ಮರದ ತುದಿಗೋಡುಗಳಿಂ ತಱಗೆಲೆಗಳಂತೆ ಬೆದರಿ ನೆಲಕ್ಕೆ ಬೀಳ್ವ ಪಕ್ಕಿಗಳುಲುಪುಗಳೊಳಂ ಭೂಮಿಕಂಪಮಾಗೆ ಪರಿವ ಮೃಗಯುಗಳ ಚರಣಘಾತ ಶಬ್ದಂಗಳೊಳಂ ಮಹಿಷ ಸ್ಕಂಧಪೀಠಪಾತಿತಂಗಳಪ್ಪ ಬಾಳ್ಗಳ ಬಾಯಧಾರೆಗಳ ನಿನಾದದೊಳಂ ಎಡೆವಿಡದೆ ಬೆದೆವೆರಸಿದ ಕುರರ ಕೂಜಿತಂಗಳಂತೊಗೆವಸರಳ ಮೊರೆಪದೊಳಂ ಕೂಡೆ ವಿಂಧ್ಯಾಟವಿ ಯೆಲ್ಲಂ ಪ್ರಚಲಿತಮಾದಂತಾಗೆ ||

೨

ಮತ್ತಮಾತಂ ಕೈಕೊಂಡುದರಿಂ ಋಷಿವೇಷಕ್ಕಗ್ರಾಮ್ಯತೆಯುಂ ಆತನಂ ಪೊರ್ದಿದ ಜನ್ಮನಕ್ಕೆ ಸೌಂದರ್ಯಮುಂ ಆತನ ಕಿವಿಗವತಂಸಮಾದ ಪಾರಿಜಾತ ಕುಸುಮಮಂಜರಿಗೆ ಮನೋಹರತೆಯುಮಾತನಿರವಿಂದಮೆ ಸುರಲೋಕಕ್ಕೆ ರಮಣೀಯತೆಯುಮಾತನ. ರೂಪಸಂಪತ್ತಿಯಿಂ ಕುಸುಮಾಯುಧಂಗೆ ದುರ್ಜ ಯತ್ವಮುಮಾದುದೆಂದು ಬಗೆಯುತ್ತಮಾಸೌಭಾಗ್ಯನಿಧಿಯ ವಿಯೋಗದಿಂ ಜೀವ ವಿಯೋಗಮಾಗದಿರ್ಕೆಂದು ತಗುಳ್ಚಿದ ರಕ್ಷಾವಳಿಯಂತೆ ಕೊರಲೊಳಿಕ್ಕಿರ್ದಕ್ಷಾವ ಳಿಯುಂ ಆತನ ರಹಸ್ಯಾಲಾಪದಂತೆ ಕಿವಿಗೆ ವಂದು ರಾಜಿಸುವ ಪಾರಿಜಾತ ಕುಸುಮ ಮಂಜರಿಯುಮಾತನ ಕರತಲಸ್ಪರ್ಶ ಸುಖದಿಂ ಕಪೋಲತಲ ಕದಂಬ ಮುಕುಳ ಕರ್ಣಪೂರದಂತುಣ್ಮಿರ್ದ್ದಪುಳಕಮುಂ ಬೆರಸು ಗದ್ಗದಚಿತ್ತೆಯೆನೇಕಾಕಿಯಾಗಿರ್ಪ್ಪ ದುಮನ್ನೆಗವೆನ್ನ ತಾಂಬೂಲಕರಂಕವಾಹಿನಿ ಮಕರಿಕೆಯೆಂಬಳ್ ಪೆಱಗೆ ಕಿಱಿದು ಬೇಗಂ ಪಾಯಲೆಂದು ನಿಂದನಂತರಂ ಮತ್ಸಮೀಪಕ್ಕೆ ಬಂದು ಮೆಲ್ಲನಿಂತೆಂದಳ್||

೩

ಆಗಳಾತನ ಮನದ ಸಂತಾಪಮನರಿವಾನುಂ ದುಃಖಿತ ಹೃದಯನಾಗಿ ಮಿತ್ರ

ನಪ್ಪ ಕಪಿಂಜಲ ನೀಂ ನಿರ್ಭಾಗ್ಯನಾದೆನಗೋಸುಗಂ ಕುದುರೆ ವರಿಜಂ ತಳೆದು ಪರಾಧೀನನಾಗಿ ಪಲಕೋಟಲೆಗಳನನುಭವಿಸಿದೆ ಸೋಮಪಾನೋಚಿತ ಮಪ್ಪೀ ಮೊಗದೊಳ್ ನೊರೆವೆರೆದ ನೆತ್ತರುಗುವ ಬೆಟ್ಟಿತಪ್ಪ ಕಡಿಯಾಣದೇರ್ಗಳುಮಂ ಪೂಗೊಯ್ಪ ಪದದೊಳ್ಮೇಲೆ ಕೆಡೆದೆಳವಳ್ಳಿಯ ಸೋಂಕಿಗಂ ಬಳಲ್ವೊಡಲೊಳ್ ಚಮ್ಮಟಿಗೆ ಗುತ್ತುಗಳುಮಂ ಜೆಂದಳಿರ ಮೆಲ್ಪಾಸಿನೊಳ್ಮಲಂಗುತ್ತಿರ್ದ್ದ ನಿನ್ನೀ ಬೆನ್ನೆಲುವಿನೊಳಾವಗಂ ಬಿಗಿದಿರ್ದ್ದ ಪಲ್ಲಣದೊತ್ತಿನಿಂದೊಗೆದ ದಡ್ಡುಗಳುಮಂ ಜನ್ನಿವಾರಮಂ ತಳೆವೀಮೆಯ್ಯೊಳೊವಲ್ವೊರಜೆಗಳ ಕಟ್ಟಂ ಪುಟ್ಟಿದ ಜೇನೆಯುಮನೆಂತು ಸೈರಿಸಿದೆಯೆಂದೀತೆರದ ಪೂರ್ವವೃತ್ತಾಂತಾಲಾಪಂಗಳಿಂನಾಗಳಾಂ ತಿರ್ಯಗ್ಜಾತಿ ದುಃಖಮಂ ಮಱೆದು ಸಂತಸದಿನಿರ್ಪ್ಪನ್ನೆಗಂ ||

೧

ಮಹಾನದಿಯ ಮಡುವಿನೊಳಗನಾಗತಮತಿಯುಮುತ್ಪನ್ನ ಮತಿಯುಂ ಯದ್ಭವಿಷ್ಯನುಮೆಂಬ ಪೆಸರ ಮೂಱು ಮತ್ಸ್ಯಂಗಳ್ ಮತ್ಸ್ಯ ಪ್ರಧಾನ ರಾಗಿರ್ಪುವು. ಅಲ್ಲಿಗೊಂದು ದಿವಸಂ ಜಾಲಗಾಱರ್ ಬಂದು—ಈ ಮಡುವಿನೊಳ್ ಪಲವು ಮತ್ಸ್ಯಂಗಳೊಳವಿಲ್ಲಿಗೆ ನಾಳೆ ಬಂದು ಜಾಲಮಂ ಬೀಸಿ ಮತ್ಸ್ಯಂಗಳಂ ಪಿಡಿವಮೆಂದು ನುಡಿವ ಮಾತನನಾಗತಮತಿ ಕೇಳ್ದು ಮತ್ತಿನ ಮತ್ಸ್ಯದ್ವಯದಲ್ಲಿಗೆ ಬಂದು ತತ್ಪ್ರಪಂಚಮನೆಲ್ಲಮಂ ಪೇೞ್ದು ನಮಗಿಲ್ಲಿರಲ್ಬಾರದು ಪೆಱತೊಂದು ಮಡುವಿಗೆ ಪೋಪಂ ಬನ್ನಿಮೆಂದೊಡುತ್ಪನ್ನ ಮತಿ—ಮುನ್ನಮೆ ಪೋಗದೊಡೇಂ, ಅವರ್ಬಂದಾಗಳ್ ಬಗೆದು ಕೊಳಲ್‌ಬರ್ಕುಮೆಂಬುದುಂ; ಯದ್ಭವಿಷ್ಯಂ—ಇಂತು ಟಪ್ಪೆಡೆಯನೆಲ್ಲಿಯುಂ ಪಡೆಯಲ್ಬಾರದು, ತನ್ನಪ್ಪುದಕ್ಕೆ ಇಲ್ಲಿಂದಂ ಪೋಗಲ್ವೇಡೆಂದೊಡೆ: ಅವರನೊಡಂಬಡಿಸಲಾಱದನಾಗತಮತಿ ತನ್ನ ಸಮೂಹಂ ಬೆರಸು ಪೆಱತೊಂದೆಡೆಗೆ ಪೋಪುದುಂ; ಮಱುದೆವಸಮಾ ಜಾಲಗಾಱರ್ ಬಂದು ಜಾಲಮಂ ಬೀಸವುದುಂ ಆ ಬಲೆಯೊಳುತ್ಪನ್ನಮತಿ ತೊಡರ್ದು ತನ್ನ ಪೆಸರಂ ನೆನೆದುಸಿರನೊಳತೆಗೆದಸುಪೋದಂತೆ ಮಿಸುಕದಿರ್ಪುದುಂ; ಮೀಂಗುಲಿಗರ್ ಬಲೆಯಂ ತೆಗೆದು ನೋಡಿ ಮುನ್ನಮೆ ಸತ್ತಿಂತಿರ್ದುತ್ಪನ್ನಮತಿಯಂ ಕಂಡು ಬಲೆಯಂ ತೆಗೆದು ನೆಲದೊಳಿರಿಸುವುದುಮದು ಪೊಳೆದು ಜಲದೊಳ್ ಮುೞುಂಗಿ ಪೋದುದು. ಯದ್ಭವಿಷ್ಯಂ ಮತ್ತೊಂದು ಬಲೆಯೊಳ್‌ಸಿಲ್ಕಿ ತಲೆಯಂ ಬಡಿಯುತ್ತಿರ್ದುದಂ ಮೀಂಗುಲಿಗಂ ಕಂಡು ನೆಲದೊಳಪ್ಪಳಿಸಿ ಕೊಂದಂ.

ಅದಱಿಂ

ಶ್ಲೋ ॥ ಅನಾಗತವಿಧಾತಾ ಚ ಪ್ರತ್ಯುತ್ಪನ್ನಮತಿ ಸ್ತಥಾ ।
ದ್ವಾವಿಮೌ ಸುಖಮೇಧೇತೇ ಯದ್ಭವಿಷ್ಯೋ ವಿನಶ್ಯತಿ ॥

(ಟೀಕು – ಮುಂದೆ ಬಹದನಱಿವವನುಂ ಬಂದುದರ್ಕೆ ತಕ್ಕುದಂ ನಿಶ್ಚೈಸಬಲ್ಲವನುಂ ಈಯಿರ್ಬರೇ ಸುಖಂಬಡುವರ್ ಬಂದುದಂ ಬರಲಿಯೆಂದಿರ್ದವಂ ಕಿಡುವಂ.)

೨

ಉಜ್ಜಯಿನಿಯೆಂಬ ಪೊೞಲೊಳ್ ಸುಬ್ರಹ್ಮಣ್ಯನೆಂಬ ಬ್ರಾಹ್ಮಣನಿರ್ಪಂ. ಆತಂಗೆರಡಾವನಾರಾನುಂ ದಾನಂಗೊಟ್ಟಡವಂ ಕಳಲೆಂದೊರ್ಬ ಕಳ್ಳಂಬರುತ್ತಿರ್ದೆಡೆಯೊಳೊಂದು ನಿಡಿದಪ್ಪರೂಪಂ ಕಂಡು ನೀನಾರ್ಗೆಂದು ಬೆಸಗೊಂಡೊಡೆ, ಆಂ ಬ್ರಹ್ಮ

ರಾಕ್ಷಸಂ, ನೀನಾರೆಂದು ಕೇಳ್ದೊಡಾಂ ಕಳ್ಳನೆಂದೊಡೆಲ್ಲಿಗೆ ಪೋದಪ್ಪೆಯೆಂದು ಬೆಸಗೊಳ್ವುದುಂ; ಸುಬ್ರಹ್ಮಣ್ಯಭಟ್ಟಂಗೆರಡವಾವುಳ್ಳಿನಂ ಕಳಲ್ವೋದಪ್ಪೆನೆಂಬುದುಂ; ನಾನಾ ಬ್ರಾಹ್ಮಣನಂ ಪಿಡಿಯಲೆಂದು ಪೋಗಲಿರ್ದೆನದಱಿಂದೊಡನೆ ಪೋಪಂ ನಡೆಯೆಂದಿರ್ಬರುಂ ಬ್ರಾಹ್ಮಣನ ಮನೆಯನೆಯ್ದೆವಂದು ಕಳ್ಳನಿಂತೆಂದಂ; ನಾನಾ ಪಸುವನುಯ್ವನ್ನೆವರಂ ನೀನುಸಿರದಿರೆನೆ ರಕ್ಕಸನಿಂತೆಂದಂ; ನೀನಾಪಸುವಂ ಬಿಡುವ ಪೊಡೆವ ಕಳಕಳಮಂ ಕೇಳ್ದು ಪಾರ್ವನೆಚ್ಚೆತ್ತೊಡೆನ್ನ ಕಾರ್ಯಂ ಕಿಡುಗುಂ; ಮುನ್ನಂ ನಾಂ ಪಿಡಿದಪೆಂ; ಬೞಿಕ್ಕ ನೀಂ ಪಸುವಂ ಕೊಂಡುಪೋಗೆಂದೊಡೆ— ಕಳ್ಳನೆಂದ ನಂತಪ್ಪೊಡೆ ಬ್ರಹ್ಮರಾಕ್ಷಸಂ ಪಿಡಿಯಲ್ ಬಂದಿರ್ದಪಂ, ಬೇಗಮೇೞೆಂದು ಪೇೞ್ದಪೆಂ ನೋಡೆನೆ; ಬ್ರಹ್ಮರಾಕ್ಷಸಂ— ನಿನ್ನಿಂದೆ ಮುನ್ನಮೆ ನಾಂ ಪೇೞ್ದಪೆನೆಂದು ಪಾರ್ವನ ಪಟ್ಟೆಯ ಸಮೀಪಕ್ಕೆ ಬಂದೆಲೆ ಬ್ರಾಹ್ಮಣಾ! ನಿನ್ನ ಪಸುವಂ ಕಳ್ದುಕೊಂಡು ಪೋಗಲೆಂದೊರ್ವಂ ಕಳ್ಳಂ ಬಂದಿರ್ದಪಂ ಬೇಗಮೇೞೆನಲೊಡಂ; ಕಳ್ಳಂ— ಎಲೆ ಬ್ರಾಹ್ಮಣಾ! ನಿನ್ನಂ ಬ್ರಹ್ಮರಾಕ್ಷಸಂ ಪಿಡಿಯಲ್ಬಂದಿರ್ದಪಂ ಬೇಗಮೇೞೆಂಬುದು ಮದಂ ಕೇಳ್ದು ಬ್ರಾಹ್ಮಣನೆಚ್ಚತ್ತದಾರೆಲವೋ! ಎಂದದ್ದರಿಸಿ ಬರಲೊಡಂ ತಸ್ಕರಮಂ ಬ್ರಹ್ಮರಾಕ್ಷಸನುಮೋಡಿಪೋದರ್.

ಅದಱಿಂ

ಶ್ಲೋ॥ ಶತ್ರೋರಪಿ ಹಿತಂ ಶ್ರೇಯೋ ವಿವದೇತೇ ಪರಸ್ಪರಂ।
ಚೋರೇಣ ಜೀವಿತಂ ದತ್ತಂ ರಾಕ್ಷಸೇನ ತು ಗೋಯುಗಂ॥

[ಟೀಕು— ಶತ್ರುಗಳಾಗಿರ್ದವರ್ ತಮ್ಮೊಳ್ ವಿವಾದಂ ಮಾಡಿದ ದೆಸೆಯಿಂ, ಕಳ್ಳನದೆಸೆಯಿಂ ಬ್ರಾಹ್ಮಣನ ಸಾವು ಉಳಿಯಲ್ಪಟ್ಟಿತು; ರಾಕ್ಷಸನಿಂ ಗೋವುಗ ಳೆರಡುಮುೞಿಯಲ್ಪಟ್ಟುವು.]

ಮಱುದಿವಸಂ ಚೈತ್ಯಾಲಯಕ್ಕೆ ಬಂದು ಭಕ್ತಿಯಿಂ ವರಧರ್ಮ ಭಟ್ಟಾರಕರಂ ವಂದಿಸಿ, ತನ್ನ ವೃತ್ತಾಂತವೆಲ್ಲಮಂ ಪೇೞ್ದಿನಗಿನ್ನೊಂದು ವ್ರತಮಂ ಕರುಣಂಗೆಯ್ಯಿಮೆಂದು ಪ್ರಾರ್ಥಿಸುವುದುಂ, ನೀನಾವ ಪ್ರಾಣಿಗಾದೊಡಂ ಮುನಿವಲ್ಲಿ ಪೆಱಗೇೞಡಿಯಂ ಪಿಂಗಿ ಬೞಿಕ್ಕಂ ನಿನ್ನ ಮೆಚ್ಚಿದಂತೆ ಮಾಡೆಂಬುದುಮಂತೆಗೆಯ್ವೆನೆಂದು ಕಳಿಂಗದೇಶಕ್ಕೆ ಪೋಗಿ ಕಳ್ತಾರು ತಿಂಗಳ್ವರಮಿರ್ದು ಬರುತ್ತುಂ, ಪೆಱರ ಪೆಂಡಿರ್ಗಮರ್ಥಕ್ಕಮಳಿಪಿ ಕಾಲಂ ಪೋದುದೆನಗೆ, ಎನ್ನ ಪೆಂಡಿರ್ಗಮರ್ಥಕ್ಕ ಮೆಳಸುವರಾರಾನುಮೊಳರೋ ಮೇಣಿಲ್ಲವೋ ಚೋದ್ಯಮನಿದನಾರಯಲ್ವೇೞ್ಕು ಮೆಂದು ನಾಲ್ಕೆಂಟುದಿನಮಂ ಮನ್ನಿಸಿ ಗಜಪುರಮಂ ಪೊಕ್ಕು ವಿಳಾಸದಿನಿರ್ದೊಂದು ದಿನಂ ಪಯಣಂ ಬೋಪೆನೆಂದುಸಿರ್ದು ಪೊೞಮಟ್ಟುಪೋಗಿ, ಜಿನಮಂದಿರದೊಳ್ ನಡುವಿರುಳಪ್ಪಿನಂ ಪೂಜಾವೈಭವಮಂ ನೋಡುತ್ತಿರ್ದು ತನ್ನ ಮನೆಗೆ ಬಂದು ಕವಾಟೋದ್ಘಾಟನ ವಿದ್ಯೆಯಿಂ ಪಡಿಯಂ ತೆಗೆದು ಮೆಲ್ಲನೊಳಪೊಕ್ಕು ನೋೞ್ಪಾಗಳ್, ಪಾಸಿನಮೇಲೆ ಪಟ್ಟಿರ್ದ ತಾಯುಮಂ ಪೆಂಡತಿಯುಮಂ ಕಂಡು ಪಾದರಿಗನೆಂದಿಱಿಯ ಬಂದು ವ್ರತಮಂ ನನೆದೇೞಡಿಯಂ ಪಿಂಗುವಿನಮೆಚ್ಚತ್ತರ್ುಬ್ಬಸಮುಪ್ಪದತ್ತೆಯತ್ತತ್ತ ಸಾರಿಮೆಂದು ಗರ್ಭಿಣಿಯಪ್ಪ ತನ್ನ ಪೆಂಡತಿ ಪೊದೆದ ಸೀರೆಯಂ ಕಳೆವುದುಮಿರ್ವರುಮಂ ಕಂಡು ಬೆಱಗಾಗಿ.

೨

[ ಎನ್ನ ಭರ್ತಾರಿಯು ಮಾವಿನ ಪಣ್ಣನೇಕೆ ಬಯಸಿದಳಿರ್ತಾನುಂ ವಸ್ತುನಿಕರ ಮಿರ್ದುಂ ತಿನಿಸಂ ] ಎಂದು ಬೆಸಗೊಳ್ವುದುಂ

ಸುಮತಿಭಟ್ಟಾರಕರಾಕೆಯ ಗರ್ಭದ ಕೂಸು ಜಿನಸಮಯಪ್ರಾಕಾರನುಂ ವಾತ್ಸಲ್ಯ ರತ್ನಾಕರನುಂ ಕರ್ಮಾಜಲವಜ್ರನುಂ ಮುನಿಜನಹೃದಯಾನಂದನುಂ ದಿಗಂಬರ ಸರೋಜರಾಜಹಂಸನುಂ ಸುಕವಿನಿಕರಪಿಕಮಾಕಂದನುಂ ಸಹಜಕವಿಜನ ಮನೋಹರೋದ್ಯಾನ ವನಕಲಕಂಠನುಂ ಆಸನ್ನಭವ್ಯನುಂ ಸುಜನಮನೋ ರಂಜನನುಂ ಸಮ್ಯಕ್ತ್ವ ಚೂಡಾಮಣಿಯುಂ ವಿದ್ಯಾಧರಾನತ ಪಾದಪಲ್ಲವನು ಮಪ್ಪುದಱಿಂದವನ ಬಯಕೆ ನಿನ್ನ ಪೆಂಡತಿಯಪ್ಪ ಯಜ್ಞದತ್ತೆಗೆ ಬಯಕೆಯಾಗೆ ಜಿನೇಂದ್ರಾಭಿಷೇಕಮಂ ಮಾಡಲುಂ ಜಿನಮಹಾಮಹಿಮೆಗಳಂ ನೋಡಲುಂ ಚರಿತಪುರಾಣಂಗಳಂ ಪೆಱರ್ಗೆ ಪೇೞಲುಂ ಜಿನಾಗಮಮನಾಗಳುಂ ಕೇಳಲುಂ ಶ್ರಾವಕರೊಡನಾಡಲುಂ ಶ್ರಾವಕರ್ಗುಡಲುಂ ತೊಡಲುಂ ಕುಡಲುಂ ಚಾತುರ್ವರ್ಣ್ಯಕ್ಕಂ ವಿನಯದಿಂ ಬೆಸಕೆಯ್ಯಲುಂ ಚತುರ್ವಿಧಮಪ್ಪ ಮಹಾದಾನಮಂ ಮಾಡಲುಂ ಮುನಿವೃಂದಾರಕರ ಸಮೀಪದೊಳಿರಲುಂ ಮನಮಾಗೆ ನಿಮಗಾ

ಬಯಕೆಯಂ ಪೇೞಲಣ್ಮದೆ ನಿಮ್ಮನಿಪ್ಪಕ್ಕೆ ಮಾವಿನಪಣ್ಣಂ ಬಯಸಿದೆನೆಂದು ಪೇೞ್ವಿಳೆಂದು ಪೇೞ್ವುದುಂ ಸೋಮದತ್ತಂ ಬೆಱಗಾಗಿ|

೩

ಆ ಧರ್ಮದೊಳ್ ನೆಗೞ್ದ ಭವ್ಯನೆಂತಪ್ಪನೆಂದೊಡೆ, ಕುದುರೆಯಂತೆ ಕೀೞಂ ಕೈಕೊಳ್ಳದೆ, ಗ್ರಹದಂತೆ ಮಂತ್ರಕ್ಕೆೞಗದೆ, ಕಟ್ಟರಸನಂತೆ ತಂತ್ರಕಾಸೆಗೈಯದೆ, ಮಾಸದಂತೆ ಪಕ್ಷಮಿಲ್ಲದೆ, ದೀಪವರ್ತಿಯಂತೆ ಪೊಂಗೆರಗದೆ, ಅಱೞಚಾಗಿಯಂತೆ ಪೊಗೞ್ತೆಗಾಸೆಗೆಯ್ಯದೆ, ಬೆಸದವರಂತೆ ಮುಯ್ಪಂ ನೋಡದೆ, ತೇರಂಬೆಯಂತೆ ಕುಮತಕ್ಕೆ ಸೂರುಳದೆ, ಒನಲಿಯಂತೆ ಪೊಲ್ಲಮೆಯಂ ಪಿಡಿಯದೆ, ತೊೞಿ ಯಂತೊರ್ಮೆ ಪೆರ್ಚಿ ಮತ್ತೊರ್ಮೆ ಕುಂದದೆ, ಚಂದ್ರನಂತೆ ಕಳಂಕನಾಗದೆ, ಪಕ್ಕಿ ಳಂತೆ ಕಂಡಕಂಡವಕ್ಕೆಱಗದೆ, ಗಿಳಿಯಂತೆ ಪಂಜರ ಶಿಕ್ಷೆಯಂ ಕಲಿಯದೆ, ಕೋಗಿಲೆ ಯಂತೊರ್ಮೆ ನುಡಿದೊರ್ಮೆ ಮಾಣದೆ, ಬಹುರೂಪಿಯಂತೆ ಪೊತ್ತಿಂಗೊಂದಂದ ಮಾಗದೆ, ಕಬ್ಬಿನ ತೋಂಟದಂತೆ ನಿಸ್ಸಾರನಾಗದೆ, ಪಾದರಿಗನಂತೆ ಪಲರ ಮುಂದೆ ನಾಣ್ದದೆ, ಲೋಭಿಯಪ್ಪರಸಿನಂತವಿಚಾರಿಯಾಗದೆ, ಶ್ರುತಮಿಲ್ಲದ ಲಿಂಗಿಯಂತೆ ಮೂರ್ಖನಾಗದೆ, ದೂರವಂಡೆಯಂತೆ ತಲ್ಲಣಿಸದೆ, ತುಂಬಿಯಂತೆ ರಸಜ್ಞನುಂ, ಭಂಪಾರದ ಪೊನ್ನಂತೆ ಶುದ್ಧನುಂ, ಬೆಟ್ಟನಂತೆ ಸ್ಥಿರನುಂ, ಮದದಾನೆಯಂತೆ ಮಹಾ ದಾನಿಯುಂ, ಸ್ಫಟಿಕದಂತೆ ನಿರ್ಮಳನುಂ, ಬಿಲ್ಲಂತೆ ಗುಣಧರನುಂ, ಸುಕವಿಯಂತೆ ಕುಮಾರ್ಗ ದೂರನುಂ, ಮಾಣಿಕಭಟ್ಟನಂತೆ ಪರೀಕ್ಷಕನುಂ, ಮಹಾಕ್ಷತ್ರಿಯನಂತೆ ವಿಚಾರಪರನುಂ, ದೇವರಂತೆ ಸುಮನನುಂ, ಪಾರ್ಥನಂತೆ ಧರ್ಮಪ್ರಿಯನುಂ, ಸಂಯಮಿಯಂತೆ ದಯಾಪರನುಂ, ಕವಿಯಂತೆ ಯತಿಪ್ರಿಯನುಂ, ಸಾಗರದಂತೆ ನಿಸ್ಸಾರದೂರನುಂ, ನಿಚ್ಚಗಲಿಯಂತೆ ಧರ್ಮದೊಳ್ ನಿಶ್ಶಂಕನುಮಪ್ಪುದು.

ಎಂಬಿನಂ ನಯನಸರೋಜಭಾವಳಂಬನಂಗಳಾದ ಬನಂಗಳೊಳ್ ವಿರಹಿಜನ ಮನೋದಾರುವಿದಾರಣದಕ್ಷ ಕಾಮತಕ್ಷಕಕ್ರಕಚನಿಚಯದಂತಗುರ್ವುವೆತ್ತೆಲೆಯು ಪರ್ವಿನಿಂ ಸುರ್ವುಗೊಂಡು ಬಾಟಕ್ಕೆಲಿಯಾಗಿ ಬಳಸಿದ ಕೇತಕೀ ಪಙ್ಕ್ತಿಗಳುಂ ಪಥಿಕಮೃಗಮೃಗಯಾಪರಿಶ್ರಾನ್ತಕಂತುರಾಜತೃಷಾಪಕರ್ಷಣಾರ್ಥಂ ವನ ದೇವತೆಯರಮೃತಸಾರವಾರಿಯಂ ಪಚ್ಚೆವರಲ ಕರಗಂಗಳೊಳ್ ತೀವಿತಂದೆಳ ಪೊಯ್ಲಿನಿಂ ತಣ್ಪುವಡೆಯಲೆಂದು ನೆಱಿಸಿದಂತಿರ್ದ ನೀರ್ಗಾಯ ತುಱುಗಲಿಂದೆಱಗಿದ ನಾಳಿಕೇರಭೂರುಹಂಗಳುಂ ವಿವಿಧ ನಿಜಕುಳವ್ರಜದ ಬೆಳಸಿಂಗೆಡೆಯಾದ ಗಗನ ಲಕ್ಷ್ಮಿಗೆತ್ತಿದುದ್ದಂಡ ಚಂದ್ರಕಚ್ಛತ್ರಷಂಡದಂತೆ ಸಂದಣಿಸಿ ಬಳ್ಪಳ ಬೆಳೆದೆಳಗೌಂಗಿನ ಸಸಿಯ ಸಾಲ್ಗಳುಂ ತಳಿರ ಕಳಿಕೆಯ ಮಿಡಿಯ ಪೂಗುಡಿಯ ಪಣ್ಣ ದೋರೆವಣ್ಣ ಬೆರಕೆವಣ್ಣ ದೊಳ್ದಲರ ಪುದುವಿನಿಂ ಬೆಡಂಗುವಡೆದು ಕಾಮುಕಮಿಥುನತತಿಗಪೂರ್ವ ಶ್ರೀಷ್ಮಿಯಾಗಿ ಮದನಂ ಸಮೆದ ನಂದನ ಭೋಗಭೂಮಿಯ ರತ್ನಮಯಭೂಷ ಣಾಂಗ ತರುಗಳಂತಿರ್ದ ಮಾಕಂದಾನೋಕಹಂಗಳುಂ, ಮಂಜೀರಿಕಾಪುಂಜಮಂಜು ಶಿಂಜಾನಮೊದವುವಿನಮೊದೆವ ಪದದೊಳೊಳಕೆಯ್ದು ಸುದತಿಯರ ಮೃದುಪದಾಲಕ್ತ ಕರಸವಿಸರಮಂ ತಳಿರ ಬೆಳಗೆಂಬ ನೆಪದಿಂ ಮಗುಳುಗುಟ್ಟಿಂತೆ ಕೆಂಕಮಾದ ಕಂಕೆಲ್ಲೀವಲ್ಲರಿಗಳುಂ, ಮದನಮಂಗಳಶಾತಕುಂಭಕುಂಭಂಗಳಂತಳವಿಗಗ್ಗಳಮಾಗಿ ಬೆಳೆದೊಳಗೆ ತೀವಿದ ಸರಸಕೇಸರಪ್ರಸರಭಾರದಿಂ ತೂಗಿ ನೆಲನಂ ತಾಗುವ ತೋರ ಗಾಯ್ಗಳಿಂ ಜನನಿಯಪ್ಪವನಿಯುಂ ಮುದ್ದಿಂ ಮುಂಡಾಡುವಂತಿರಿರ್ದ ಮಾತುಲುಂಗ ಸಂಘಾತಂಗಳುಂ, ಪರಿಮಳಾತಿಲಂಪಟ ಷಟ್ಚರಣಪಟಲಪಾಟಿತಕುಟ್ಮಲಾವಳೀ ಸ್ಯಂದಮಾನ ಮಕರಂದಬಿಂದುಸಂದೋಹಜನಿತದುರ್ದಿನಂಗಳಿಂ ವಿರಹವಿಧುರ ಪೌರಸಸೌಂದರೀಬೃಂದವದನಾರವಿಂದಗಳಂ ಕಂದಿಸುವ ವಿಕಟಪಾಟಲೀವಿಟಪಿ ಗಳುಂ, ಚಾತಕಪೋತಕಪ್ರತಾನಚೇತೋವೃತ್ತಿಯೊಳಪೂರ್ವಜಲಧರಕರ್ಬು ರಾಭ್ರವಿಭ್ರಮಮನೊಳಪೊಯ್ದು ಕತ್ತಲೆಯ ಕಾರಾಗಾರದಂತೆ ಬಿತ್ತರಂಬೆತ್ತು ಬಿಚ್ಚತಂ ಪರ್ವಿದ ತಮಾಳಮಾಳಾಪರಂಪರೆಗಳುಂ, ನಿಷ್ಪ್ರತ್ಯೂಹಮೋಹರಸಸರಸ ಶತೆಯಿಂ ನೆರೆವ ನಗರದಂಪತೀಶತೋತ್ತಾರರಣಿತ ಕುಹರಣಸೂತ್ರಮಂ ಕಲ್ತು ಪರಿವಿಡಿಗೆಯ್ವ ಪಾರಾವತಪ್ರಕರಕ್ಕೆ ಮಕರಕೇತುಶಾಸ್ತ್ರಾಭ್ಯಾಸಪ್ರಾಸಾದಂಗಳಾದ ಮಣಿಮಯಕೃತಕಗಿರಿಗಳುಂ, ಸಂಪನ್ನವನ ಮಹತ್ತರ ಕನ್ಯಕೆಯರಚ್ಚಿಯಿಂ ಸಮೆದೊಡೇಱಿಯಾದಕಿಂಜಲ್ಕಪುಂಜದಿರ್ತಡಿಯೊಳಂ ಮಡಲ್ತು ಮರುಗದ ಮಡಿಯು ಗಾಡಿಯನೊಳಕೆಯ್ದು ಮುತ್ತಿನ ಮಣಲ ಪುಳಿನದೊಳ್ ನಿರವಿಸಿದ ದೀವದಂಚಿ ವಱಿಯಿಂದಂಚಿರಮಲ್ಲದೆಸೆದು ವಾಸಿಸಲ್ಕೆ ಪಸರಿಸಿದ ಪಲವುಮಲರ ನೆರವಿಯ ನೀರ್ವೂಗಳೊಳಗೆ ಪರಿವ ಚಂದನರಸಪ್ರವಾಹಕೃತಕವಾಹಿನಿಗಳುಂ, ರತಿಯ

ಮದನನ ಮದುವೆಯೊಳ್ ಪೊಸಯಿಸಿದ ಪಸುರ್ವಂದರಂತೆ ಮಿಸುಪ ಪೃಥ್ವೀ ಕಾಲತೆಯ ನಾಗಲತೆಯ ನವಮಾಲಿಕಾಲತೆಯ ಜಾತೀಲತೆಯ ಯೂಥಿಕಾಲತೆಯ ವಿಚಕಿಳಲತೆಯ ಮಂಡಪಂಗಳುಂ ಮನೋಹರಂಗಳೆನಿಸಿರ್ದುವು.

# ರುದ್ರಭಟ್ಟ

ಆ ಮೇರುಗಿರಿಯ ದಕ್ಷಿಣದಿಶಾಭಾಗದೊಳನೇಕ ನಗರನಿಗಮಾಗ್ರಹಾರ ಗ್ರಾಮನಿಕರಖೇಟಖರ್ವಟಮಟಂಬಪತ್ತನದ್ರೋಣಾಮುಖಸಂವಾಹ ನಿಚಯ ನಿಚಿತಮುಂ ಹರಿಹರ ಹಿರಣ್ಯಗರ್ಭಾದಿ ಸಕಲಗೀರ್ವಾಣಮಣಿಭವನವಾಪೀಕೂಪ ದೀರ್ಘಿಕಾತಟಾಕತಟಿನೀನಿಕರಶೋಭಾಕರಮುಂ, ಅಗಣ್ಯ ಪುಣ್ಯಾರಣ್ಯಪುಣ್ಯಾಶ್ರಮ ಪುಣ್ಯಶೈಲ ಪುಣ್ಯಹ್ರದ ಸಮಾಜ ವಿಭ್ರಾಜಿತಮುಂ, ಸಿತಾಸಿತೇಕ್ಷುವಾಟಿ ನಾನಾ ಪುಷ್ಪ ವಾಟಬಹುವಿಧಸುಗಂಧ ಬಂಧುರಗಂಧಶಾಲಿವನಮನೋಹರಮುಮೆನಿಸಿದ ಭರತಕ್ಷೇತ್ರದ ಮಧ್ಯದೊಳ್ ಮಧ್ಯದೇಶಮುಂಟು. ಅದರ ಪೆಂಪನಭಿವರ್ಣಿಸುವೊಡೆ ವರ್ಣಸಂಕರಂ ಚಿತ್ರದೊಳ್, ದೋಷಾಭಿಸಂಧಿ ದಿವಸವಿರಾಮದೊಳ್, ಅವ್ಯವಸ್ಥೆ ಜಡಾಶ್ರಯದೊಳ್, ಪರಾಭವಂ ಸಂವತ್ಸರದೊಳ್, ಆಕ್ರೋಶಂಪಥ ಪ್ರಮಾಣಂಗಳೊಳ್, ಉಪಪ್ಲವಂ ಚಂದ್ರಾರ್ಕಬಿಂಬಂಗಳೊಳ್, ಉತ್ತುಂಗಭಂಗಂ ಕಡಲೊಳ್, ವಿಶ್ವಾಸಘಾತಂ ವನದ್ರುಮನೀಡದೊಳ್, ಸ್ವಾಮಿವಿರೋಧಂ ತಾರಕ ಚಿತ್ರ ಕಥೆಯೊಳ್, ಪರಾರ್ಥಸ್ಪೃಹೆ ಗುಣವಿಶೇಷದೊಳ್, ಅಸತ್ಕಾರಂ ನೀರಸಕ್ಷೇತ್ರದೊಳ್, ಪವಮಾನವಿಸ್ತಾರಂ ವ್ಯೋಮದೊಳ್, ಕೃತಘ್ನಭಾವಂ ಕ್ರೀತಾಪ್ರವೇಶದೊಳ್, ವಕ್ರವಾಕ್ಯಂ ಕೋಕಿಳಂಗಳೊಳ್, ಉತ್ಕಂಠತೆ ಮಯೂರಂಗಳೊಳ್, ಆಜಡಿ ತುಂಬಿಯೊಳ್, ಅಭಿಮಾನಹಾನಿ ವಿರಹಿಗಳೊಳ್, ಹಾಹಾಕಾರಂ ಹೋಮಮನ್ತ್ರಾಕ್ಷರಾಂತ್ಯದೊಳ್, ವಂಶಚ್ಛೇದಂ ಮೇದರೊಳ್, ನಿಷ್ಕಾರುಣ್ಯಂ ಭೂಷಣಂಗಳೊಳ್, ನಿರ್ಗುಣತ್ವಂ ಬಿಡುವೂಗಳೊಳ್, ಅಗ್ರಹಾರಪೀಡೆ ಯುವತೀಕುಚಂಗಳೊಳ್, ನಿಗಳನಿರೋಧಂ ಮದಗಜಂಗಳೊಳ್, ಉನ್ಮಾರ್ಗತೆ ಜಾತ್ಯಶ್ವಂಗಳೊಳ್, ವಕ್ರಪ್ರಚಾರಂ ಸರ್ಪಂಗಳೊಳ್, ಪಙ್ಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ.

ಮತ್ತಮಾ ಬನಂ ಮುಗಿಲೆಡೆಯೊಳೆಡೆವಿಡದೆಡೆಯಾಡಿ ಬಟಲ್ದ ಬಿಜ್ಜೋದರಿಂಯ ಕರ್ಳಟವಟ್ಟಿಗೆ ದಾಣಮೆಂಬಂತೆಸೆವೆಳನೀರ್ಗಳಂ ಪೊತ್ತಾಗಸದೆಡೆಗಡರ್ವ ಜೆಂಡೆಂಗಿನ ಮರಂಗಳೊಳಂ, ಎಸಗುವೆಲರಿನೊಡೆದೊಸರ್ವ ಪೊಸವಣ್ಣ ಪಸರದಿನೆಸೆವಸಿಯ ಕೊಂಬನಿಂಬುಮಾಡಿ ಸುೞಿದು ಗೞಿಪುವೆಳಗಿಳಿಯ ಬಳಗಕ್ಕೆ ತಮರ್ಮನೆಯಾದಿ ಮ್ಮಾವಿನ ಪೊದೞಿಳೊಳಂ ಒೞಲ್ದಿೞಗುವ ಪೞಮೆವೞಿಗಳಂ ತುೞುಸೆೞಿವಿಡಿವ ನಱುಗಂಪಿನ ಸೊಂಪುಗಳ್ಗಿಂಬಾದ ಪೊಂಬಾೞೆಗಳಿಂ ಬಳ್ಕುವಡಕೆಯಸಾಲ್ಗಳೊಳಂ, ಓಯ್ಯನೊಯ್ಯನೆ ರಯ್ಯಮಾಗಿ ಮೆಯ್ಯೞಯದುಯ್ಯಲಾಡುವ ಸೊಂದಿಗೋಡಗಂ ಗಳಿಂದೋರೋರ್ಮೆ ನೆಲಕ್ಕೆ ಜೋಲ್ವ ತಿಂತಿಣಿವಣ್ಣನಾಂತ ಸಣ್ಣ ಗೊಂಬಿಂದಿಂಬು ವಡೆದ ದಾಳಿಂಬಗಳೊಳಂ, ಬಂದು ಬಂದು ನಟ್ಟನಡುವಗಲೊಳೋಕುೞಿಯಾಡು ನೆಳವೆಂಡಿರ ಮೆಯ್ಯ ಕುಂಕುಮದಿಂದೊಂದಿದ ಕೆಂದಾವರೆವೂಗಳಂ ತಳೆದು ಸೊಂಪ ನೊಳಕೊಂಡ ತಾವರೆಗೊಳಂಗಳೊಳಂ ಬಸಂತಂಗೆ ನೆಲೆವೀಡಾಗಿರ್ದುದಂತುಮಲ್ಲ ದೆಯುಂ

೨

ಮತ್ತಮಾ ಪಟ್ಟಣಮಿಟ್ಟಣಂ ಬಡೆದು ಮೆೞೆವ ಪೊಂಜೆಸದುಪ್ಪರಿಗೆಯ ಬಿಸವಂದಮಾದ ಚುಂಚು ಲೋವೆಗಳೊಳಗೆ ಬಳಸಿ ನಲಿದುಲಿವ ಪಾರಿವಂಗಳ ಕೊರಲುಲಿಯೊಳಂ, ಪುಲ್ಲವಡಿಗಿತಿಯರೆತ್ತಿಪಿಡಿದ ಮಾಲೆವೂವಿನ ನಱುಗಂಪಿಗೆ ಕಪ್ಪರಿಗೊಂಡು ಮುತ್ತಿ ಮುಸುಱಿ ಮೊರೆವ ಮಱಿದುಂಬಿಗಳಿಂಚರದೊಳಂ ಜೂದಿನ ದಿಣ್ಣೆಯೊಳ್ ಜೂಪಾಡಿ ಗೆಲ್ದು ಕೈಕೊಂಡ ಪೊನ್ನರಾಸಿಗಳ ವಾರುವಂಗಳ ಪೇರಾನೆ ಗಳ ತೇರ್ಗಳ ವಂಗಡಮಂ ತಂಡತಂಡದಿಂ ಬೀಯಂಗೆಯ್ವರಸುಮಕ್ಕಳ ಮುಂದೋದಿ ಮೆಚ್ಚಂಕೊಳ್ವಕ್ಕಗರಿಬ್ಬರದೊಳಂ ಓಲಗದವಸಮನಱದರ ಮನೆಗೆ ಪೋಪ ಬರ್ಪ ಮನ್ನೆಯರ ಮಾಸಾವಂತರ ಪಸಾಯ್ತರ ಬೞಿಸಲ್ವ ತುೞಿಲಾಳ್ಗಳಡ್ಡಣದೊಳೆಡ್ಡ ಮಾಗೆ ಕೀಲಿಸಿದ ಕಿಱುಗೆಜ್ಜೆಯ ದನಿಗಳೊಳಂ, ನೀರುಣಲೆಂದು ಪೊಱಮಟ್ಟು ಕೆಂದೂಳಿಯನೊಟ್ಟಿಕೊಳಲೆಂದು ನಿಂದು ನಿಂದು ನೆಲದ ಸೊವಡನಾರಯ್ದು ಮಸಗಿ ದೆಸೆದೆಸೆಗೆ ವಿಸಟಂಬರಿದು ಮನ್ನಣೆಯ ಮಾವಂತರುಮನಾರೆಕಾಱರುಮಂ ಮೀಱಿ ಗೆಂಟಱೊಳ್ ನಿಂದು ನೋಡುವ ನುಡಿಗೆ ಗಿಱ್ರನೆಯ್ದುವ ಸೊರ್ಕಾನೆಗಳ ಕಾಲ ಸಂಕಲೆಯ ಗೋಸದೊಳಂ ಇಂದಿರನ ಪೊೞಲ ಸಿರಿಯ ಸಡಗರಮಂ ಪಿಡಿಯು ತಿರ್ಪುದುಮಂತುಮಲ್ಲದೆಯುಂ—

ಮತ್ತಮಾ ಮಹೇಶ್ವರಂ ವ್ಯೋಮದಂತೆ ವೀತಕ್ಷಣರುಚಿಮಹಾಧ್ವನಿಯುಕ್ತ
ಘನಗಣಸಮೇತನುಂ, ಸದಾರಾಜಹರಿಸಮಂಚಿತನುಂ, ವನದಂತೆ ಸಮುನ್ಮೀಲಿತ
ವಿಶಾಖಾಂಕನಗಜಾತಾನ್ವಿತನುಂ, ಮಧುರಸಾರೋಜ್ವಲಸುಮನೋವಿರಾಜಿತನುಂ,
ವಿಪಿನದಂತನೇಕಪಾರಿಜಾತಾಚ್ಛಪುನ್ನಾಗಕದಂಬಾಕಲಿತಪದನುಂ, ಸುರಸಭಾಸ
ಮಾನಸಶಕ್ತಿಶರಭವಾರಚಿತವಿಭ್ರಮನುಂ ಸಮುದ್ರದಂತೆ ನಿಜಸದಾಶ್ರಿತಾಹೀನ
ಭೋಗಸ್ವಪದಚ್ಯುತಶ್ರೀಸುಖಪ್ರದನುಂ, ಅನಂತಾಚಲಾತಿವ್ಯಾಪ್ತಸ್ವಪ್ರಭಾವ
ಮುಕ್ತಾಳಿಪರಿಮಿಳಿತನುಂ—

ವಿಷಧರನಾಗಿಯುಂ ಚಿರಪ್ರಭಾತಸಂಗತನುಂ, ಭುವನಪತಿಯಾಗಿಯುಮಜ
ಡಾಶ್ರಯನುಂ, ನರಗರ್ವಸರ್ವಾಪಕನಾಗಿಯುಮರ್ಜುನರುಚಿಯುಂ, ಸಾಮಜಪ
ಪ್ರಿಯನಾಗಿಯಂ ಪಂಚಾನನಪ್ರಥಿತನುಂ, ಸದ್ಯೋಜಾತನಾಗಿಯುಂ ಭವ
ರಹಿತನುಂ, ಸವ್ಯೋಮಾಂಗವಿಶಿಷ್ಟನಾಗಿಯುಂ ಜಾತರೂಪರುಚಿಮದ್ವಿಗ್ರಹನುಂ,
ಅಜಾತಶತ್ರುವಾಗಿಯುಮನಂತಾರಿಪುರಾರಾತಿಯುಂ, ಸದಾಲೋಕ ಭರಿತ
ನಾಗಿಯುಮಂಧಕಾರಾತಿಪ್ರಥಿತನುಂ, ಸಕಲಾದಿತ್ಯ ಗ್ರಹಣೋಪಯುಕ್ತನಾಗಿಯು
ಮಧಿಕೋಪರಾಗರಹಿತನುಂ, ಶುಕಾಮೃತಫಲಪ್ರದನಾಗಿಯುಮವನಸ್ವಭಾನುಂ,
ಕಾಮದೇಹೋಪೇತನಾಗಿಯುಂ ದರ್ಪಕೋಪಗತವಿಗ್ರಹವಿದಾರಣನುಮೆನಿಸಿರ್ದ
ನಂತು ಮಲ್ಲದೆಯುಂ—

ಸಕಲದೇವವಲ್ಲಭನಪ್ಪ ಸರ್ಪಾಭರಣನಂ ದರ್ಪಕದ್ವಂಸಿಯಂ ಕೂರ್ಪರ ಕುಲದೈವಮಂ ನೋಳ್ಪರ ಕಣ್ಣಮಣಿಯಂ ಬೇಳ್ಪರ ಭಾಗ್ಯ ನಿಧಿಯಂ ಚಿಂತಿಸುವರ ಚಿಂತಾರತ್ನವೆನಿಪ ಸಂಗಮೇಶ್ವರನಂ ಕಪ್ಪಡಿಯ ಸಂಗಮದೊಳೊಪ್ಪದಿಂದರ್ಚಿ ಸುತ್ತಮಿಪ್ಪ ಸಮಯದೊಳು ಒಂದು ದಿವಸಂ ಬಸವರಾಜಂ ಸಂಧ್ಯಾಸಮಯದವಸರ ಸೌರಭ್ಯಸಂಯುಕ್ತಶೀತಳಸಲಿಲ ನೂತನಮಳಯಜ ನವ್ಯಪ್ರಸೂನ ನಾನಾವಿಧ ಪೂಜಾಸಮರ್ಪಿತ ಷಡುರಸಾಯನನೈವೇದಿತ ಸರ್ವಾಂಗಶರೀರ ಪ್ರಣತನಾಗಿ ಸಂಗಪ್ರಸಾದಮಂ ಸಾದರಂ ಕೈಕೊಂಡು ರಂಗಮಂಟಪದೊಳು ಸಂಗಮ ಧ್ಯಾನ ನಿದ್ರಾಮುದ್ರೆಯೊಳಿಪ್ಪಲ್ಲಿ;

ಕನಸಿನೊಳು ಜೆಳೆದು ಕವಲಿಱಿದು ನೀಳ್ದ ಪ್ರವಾಳಜಾಳದಂತೆ ಜೆಂಬಳಿವಿಡಿ ದಿಳಿದ ಕೆಂಜೆಡೆಗಳಿಂ, ಸುತ್ತಿದ ಜಟಾಬಂಧದೊಳಗಣ ಸುರನದಿಯೆಂಬ ಸರೋ ಜಿನೀ ತಟದೊಳಗಿರ್ದ ಬಿಸಕಂದದಂಕುರದಂತಿರ್ದ ಚಂದ್ರಕಳೆಯಿಂ, ವಿದ್ಯುಲ್ಲತಾ ಗರ್ಭೀಕೃತ ಶಾರದಾವಿಭ್ರಮದಂತೆ ಭಸಿತಂ ಮುಸುಂಕಿದ ಬಿಸುಗಣ್ಣಿಂ ಮೆಱೆವ ಲಲಾಟಪಟ್ಟದಿಂ, ಶೃಂಗಾರದ ತವರ್ಮನೆಯಂತಿರ್ದ ಮುಖಮಂಡಲದಿಂ, ನಯಮಂ ಕೞೆವ ನಾಗಕುಂಡಲದಿಂ ಹರನೊಳ್ ನೆರೆಯಲ್ ಬಂದ ಕಾಳಿಂದೀ ನದಿ ಸುರನದಿಗೆ ಸೋಲ್ತಿಳಿದಂತಿರ್ದ ಕೊರಳ ಗರಳದಿಂ, ಕಲ್ಪಕುಜದ ಶಾಖೆ ಗಳಂತಿರ್ದ ದಶಭುಜಂಗಳ ತುಱುಗಲಿಂ, ವೇದಂಗಳ್ ತನ್ನ ಕಾಣದಂತೆ ಮುಸುಂ ಕಿದ ಮಾಯಾಪಟಲವೆನಿಪ ಗಜಚರ್ಮದಿಂ, ಎಳವಿಸಿಲ ಬೆಳಗಂ ತರುಣ ತರಣಿಗೆ ಕಡಂಗೊಡುವ ಪ್ರಭಾದುಕೂಲದಂತಿರ್ದ ಪುಲಿದೊಗಲಿಂದೊಪ್ಪಿ, ಪಶುಪತಿ ಬಸವನ ಮನದ ಮೊನೆಯೊಳೊಪ್ಪೆ ಮೂರ್ತಿಗೊಂಡು;

ಎಲೆ ಮಗನೆ ಬಸವ ಬಸವಣ್ಣ ಬಸವಿದೇವ, ನಿನ್ನಂ ಮಹೀತಳದೊಳು ಮೆಱೆದಪೆವು. ನೀಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು——ಎಂಬ ನುಡಿಯೊಡನೆ ಕನಸಿನ ಮಾತು ಮನವನಿಮ್ಮೈಗಂಡು, ನಿದ್ರೆ ತಿಳಿದು ಕಣ್ದೆಱೆದು ಕೆಲಬಲನಂ ನೋಡಿ ಬೆಚ್ಚಿ ಬೆಗಡುಗೊಂಡು ಅನುತಾಪವೇಱೆ ವಿರಹಂ ಹೊಮ್ಮಿ ಕಣ್ಗೆಟ್ಟಗಲಲಾಱದೆ ರಂಗಮಂಟಪದ ಕಂಭಮಂ ಘಳಿಲನೆ ಹಾಯ್ದು——ದೇವದೇವ ಸಂಗ, ಕಂಡೈ. ಕೆಟ್ಟೆಂ ಕೆಟ್ಟೆಂ. ತೊಟ್ಟನಿಂತು ಕಣ್ನೋಡದೆ ಹುಣ್ಣನೋಡದೆ ಹೋಗೆಂಬರೆ? ಗಗನದಿಂದಿಳಿವಂಗಾಧಾರವಾಗುತ್ತೆ ತಪ್ಪುವರೆ? ಕಾಳ್ಕಿಚ್ಚಿನಿಂ ಬೇವಂಗೆ ತಂಪಿನ ಸೋನೆಯ ಮಳೆಯಾಗುತ್ತೆ ಮಾಣ್ಬರೆ? ಇಂತು ನಡುಗಡಲೊ ಳಾಳುವಂಗೆ ತೆಪ್ಪವಾಗುತ್ತೆ ಪಿಂಗುವರೆ? ನರಕದೊಳಾಳಲೀಯದೆ ಚಂಡಿಕೆವಿಡಿ ದುದ್ಧರಿಸಲೆಂದಾಳ್ಗೊಂಡ ಗುರುವೆ ಪರಮಬಂಧುವೆ ಪ್ರಾಣವೆ, ಬೆಳುದಿಂಗಳೇಕೆ

ಬಿಸುಪೇಕೆ ? ಅಮೃತವೇಕೆ ವಿಷವೇಕೆ ? ಬೆಳಗೇಕೆ ತಮವೇಕೆ? ನೀನೇಕೆ ಈ ನುಡಿಯೇಕೆ, ಹೊದ್ದಿದರಂ ಹೋಗೆಂಬರೆ? ಸಾರ್ದರಂ ಸ್ಥೈರಿಸೆಂಬರೆ? ನಂಬಿದವರ ಗೋಣಂ ಕೊಯ್ವರೆ ? ಶಿಶುವನಿರಿವರೆ ! ಪಶುವಂ ಕೊಲುವರೆ ? ಎನ್ನಂ ಬಿಡುವರೆ? ಕರುಣಿ ಕರುಣಿ, ಕರುಣಂ ಲೇಸಾಯ್ತು. ಅರ್ಚಿಸತಕ್ಕೆ ಫಲವಾಯ್ತು. ಇನ್ನೇನು ಇನ್ನೇನು ? ಎಂದೊಟ್ಟೈ ಒಱಲಿ ಪರಿತಂದು ಸಂಗನಂ ತಕ್ಕೈಸಿ ಪಳವಿಸಿ ಪಲುಂಬಿ ಗೋಳಿಟ್ಟು ಅಲಿಟ್ಟು ಸಿವದಿಟ್ಟು ಮೊಱೆಯಿಟ್ಟು ಮೂರ್ಛೆಸುತ್ತಿಂತಕ್ಕೆಚ್ಚತ್ತು ಮೆಲ್ಲಮೆಲ್ಲನಾಲಿಂಗನಮಂ ಸಡಿಲ್ಚಿ ನಡೆತಂದು ;

ಮನವಲ್ಲದ ಮನದೊಳಗ್ಘವಣಿ ಹೂಗಳಂ ಬೇಗಂ ತಂದಂತಂತೆ ಪೂಜೆಗೆಯ್ದಾ ರೋಗಣೆಗಿತ್ತು, ಮೋಹದ ಮುನಿಸು ಮನದೊಳ್ ತೀವಿ ಪ್ರಣಯ ಕಲಹಂ ಬಲಿದು ಪ್ರಸಾದಮನೊಲ್ಲದೆ ಬಸವಂ ಮುಸುಂಕಿಟ್ಟು ಪಶುಪತಿಯ ಪದದ ಕೆಳಗೆ ನಿರ್ವೇಗದಿಂ ಪಟ್ಟಿರ್ದಿರೆ ; ರಾತ್ರಿಯೊಳು ನೇತ್ರತ್ರಯಂ ಭಕ್ತನಿರವಂ ನೋಡಿ ಕೊರಗಿ ಮೋಹದ ಮಹಿಮೆಗೆ ಮರವಟ್ಟು ಭಕ್ತಿಯ ಭರಕ್ಕೆ ಕೌತುಕಂಗೊಂಡಗಲಲಾಱದ ಮಗಂಗೆ ಮಿಗೆ ಕರುಣಿಸಿ, ಮತ್ತೆ ಕನಸಿನೊಳು ಬಂದು—ಎಲೆ ಮಗನೆ ಎಲೆ ಕಂದ ಎಲೆ ಬಸವ, ನಿನ್ನನಗಲಿ ನಾನಿರಲಾಱೆ. ನಿನಗಿನಿತು ನಿರೋಧವೇಕೆ? ಬೇಡಯ್ಯ ಬೇಡೆನ್ನರಸ, ಬೇಡೆನ್ನ ಭಕ್ತನಿಧಿಯೆ. ನಿನ್ನೊಡನೊಡನೆ ಬಿಡದೆ ಬಪ್ಪೆಂ, ನಾಳೆ ಮಧ್ಯಾಹ್ನದೊಳು ಶುದ್ಧಾಂಗನಾಗಿ ಬಂದು ನಂದಿಕೇಶ್ವರನ ಮುಂದೆನ್ನಂ ನೆನವುತ್ತಂ ಕುಳ್ಳಿರೆ, ವೃಷಭನ ಮುಖಾಂತರದಿಂದಾವೆ ಬಂದಪೆವು. ಆತಂ ನಿನಗೆ ಸದ್ಗುರು. ಅಲ್ಲಿಂ ಬಳಿಕ್ಕಂ ಎಮ್ಮನರ್ಚಿಸುತ್ತೆ ಭಕ್ತರ ಬಂಧುವಾಗಿ ಶರಣರ ಪರುಷದ ಕಣಿ ಯಾಗಿ ನಿತ್ಯ ಸುಖಿಯಾಗಿ ಪರಸಮಯದ ಗರ್ವಮಂ ನಿಲಿಸಿ ಭಕ್ತರಂ ಗೆಲಿಸಿ ಪ್ರತ್ಯಕ್ಷಂಗಳಂ ತೋಱಿ ಲೌಕಿಕಧರ್ಮಮಂ ಮೀಱಿ ಕಡುನಿಷ್ಠೆಯಂ ಹೇಱಿ ಪರಮ ಸುಖದಿಂದಿರ್ಪುದು—ಎಂದು ಬೆಸಸಿ ಬಿಜಯಂಗೆಯ್ಯೆ ;

ಹರಕರುಣೋದಯಮಾದಂತರುಣೋದಯವಾಗೆ, ನಿದ್ರೆ ತಿಳಿದೆದ್ದು ಸಾಲ್ಗೊಂಡ ಪುಳಕಂಗಳಂ ಸಂತೈಸಿಕೊಂಡಾನಂದಾಶ್ರುಗಳಂ ಮುಂದುಗೊಳಿಸಿ ಸಂತಸಮು ಸ್ಥೈತಿಟ್ಟು ಪರಿಕಿಸಿ ನೋಡಿ ಹರನ ಕರುಣಕ್ಕೆ ಹಾರೈಸಿ ಭಕ್ತಿಭರದಿಂ ಭಾರೈಸಿ ಮನದ ಮೊನೆಯಂ ಕೋರೈಸಿ ಬುದ್ಧಿಯೊಳಗಂ ಸಾರೈಸಿ ಅಹಂಕಾರಮಂ ತೀರೈಸಿ ಚಿತ್ತದೊಳು ಪೂರೈಸಿ, ಭೋಂಕನೆದ್ದು ಸಂಗಂಗೆ ಪೊಡಮಟ್ಟು ತದನುಜ್ಞೆಯಂ ಕೈಕೊಂಡು, ಪುಣ್ಯದ ಬಿತ್ತಂ ಬೆಳಗುವಂತೆ ದಂತಪಂಕ್ತಿಯಂ ಕಾಂತಿಯಿಟ್ಟು, ಏಕನಿಷ್ಠೆಯ ವಜ್ರಾಂಗಿಯಂ ತೊಡುವಂತೆ ಭಸಿತೋದ್ಧೂಳನಂ ಮಾಡಿ, ಸುಕೃತ ಮನಪ್ಪುವಂತೆ ದವಳವಸ್ತ್ರಮನುಟ್ಟು ಹೊದೆದು, ಪುಣ್ಯದ ಫಲಂಗಳನಲಂಕರಿಸಿ ಕೊಂಬಂತೆ ರುದ್ರಾಕ್ಷೆಗಳಂ ತೊಟ್ಟು, ಸಂಗಮೇಶ್ವರಂಗೆ ಮಜ್ಜನ ಪೂಜೆ ಆರೋಗಣೆ ಗಳನೇಕಚಿತ್ತದೊಳು ಕೈಕೊಳಿಸಿ ಪೊಡಮಟ್ಟು ನಡೆತಂದು—

ರಂಗಮಂಟಪದೊಳು ಕುಳ್ಳಿರ್ದ ದೃಷ್ಟಿವಾರಿಯ ದೃಢಚಿತ್ತಂಗೆ ಕರ್ಣದ್ವಯದ

ಕಮನೀಯಂಗೆ ಶೃಂಗಯುಗಳದಭಂಗಂಗೆ ಕಕುದ್ವಳಯದ ಪ್ರಕೃತಿರಹಿತಂಗೆ ವಾಳ ದಂಡದ ಜೋಳಿಯಂಗೆ ಬಸವಣ್ಣಂ ವ್ಯೆಯಿಕ್ಕಿ ಕುಳ್ಳಿರ್ದು, ಸುಲಿಪಲ್ಲ ಬೆಳಗುಂ ಕಣ್ಗಳ ಕಾಂತಿಯುಂ ಮುಖದ ಶಾಂತಿಯ ಪೊಳಪುಂ ದುಕೂಲದ ಧವಳ ಮರೀಚಿಯುಂ ಭಸಿತದ ಪ್ರಭೆಯುಂ ದಟ್ಟೈಸಿ ಮೆಙ್ಕೆಯೆ ಮುಸುಂಕಿ ಗಂಗೆಯೊಳ ವಗಾಹಮಿಪ್ಪ ಪುಣ್ಯಪುರುಷನಂತೊಪ್ಪಿ, ಹೃದಯ ಕಮಳಮಧ್ಯಸ್ಥಿತ ಸಂಗಮೇಶ್ವರ ಧ್ಯಾನಾರೂಢನಾಗಿರ್ಪ ಸಮಯದೊಳು; ಪಶುಪತಿ ವೃಷಭೇಂದ್ರಂಗೆ ಮನದೊಳು ಸೂಚಿಸೆ, ಹಸಾದವೆಂದು ನಂದಿಕೇಶ್ವರಂ ಸಂಗಮೇಶ್ವರ ಲಿಂಗಮಂ ನೆನೆಯೆ ಧ್ಯಾನಂ ಬಲಿದು ಶಿವಲಿಂಗಂ ಮೂರ್ತಿಗೊಂಡು ನಂದಿಯ ಹೃದಯಕಮಳಮನೊತ್ತರಿಸಿ ಪೊಜಮಟ್ಟು ಸದ್ಯೋಜಾತಮುಖಂ ಮುಂತಿಟ್ಟೊಳಗೊಳಗೆ ಗಳಗಳನೆ ನಡೆದು ಬರೆ; ಧರ್ಮಮುಖವರಳ್ವಂತೆ ಮುಕ್ತಿಯ ಸೆಜ್ಜೆ ತೆಗೆವಂತೆ ವೃಷಭನ ಮುಖಂ ವಿಕಾಸಮ ನೆಯ್ದೆ, ಜಿಹ್ವೆ ಸಿಂಹಾಸನಂಗೊಂಡು ನಂದಿಯ ಮುಖದಿಂದೊಗೆತಪ್ಪ ದಿವ್ಯ ಲಿಂಗಮಂ ಸಂಗನಬಸವಂ ಸ್ನೇಹರಸಭರಿತ ಸಾತ್ವಿಕ ದೃಷ್ಟಿಯಿಂದಾಲಿಂಗಿಸುವಂತೆ ನೋಡಿ ನೋಡಿ ಮನದೊಳೋವಿ, ಹೃತ್ಕಮಳದೊಳು ಬೆಳೆದ ಲಿಂಗಕ್ಕೆ ಕರ ಕಮಳಮನಾಂತು ನಂದಿಯ ನಾಲಗೆಯ ತುದಿಗಂ ತನ್ನ ಕರಪಲ್ಲವಕಂ ಸಂದಿಲ್ಲದಂತೆ ಕ್ಯೆಯೊಡ್ಡಿರೆ;

ವೃಷಭರಾಜಂ ಪತಿಯನುಜ್ಞೆಯೊಡನೆ ಬಸವಣ್ಣನ ಹಸ್ತದೊಳು ಸಂಗ ಮೇಶ್ವರಲಿಂಗಮಂ ಭೋಂಕನೆ ಬಿಜಯಂಗೆಯ್ಸಿ, ಮೃದುಮೃದಂಗಪಟಹಕಹಳಾ ನಿನಾದ ಸುಮನಸವೃಷ್ಟಿಗಳ ನಡುವೆ ಸುಪುತ್ರನಂ ನಿಜಜನಕಂ ಮೂರ್ಧ್ನಿ ಘ್ರಾಣಮಂ ಮಾಡುವಂತೆ ವೃಷಭರಾಜಂ ಮುಖಮಂಡಲಮಂ ಬಸವನ ಮಸ್ತಕ ದೊಳಿಟ್ಟು, ಪಂಚಾಕ್ಷರಿಯ ಸಂಚಮನಙಪಿ ಅಮೃತಮಯ ಲಾಲಾಜಳದೊಳಭಿ ಷೇಕಮನಲಂಕರಿಸಿ ಸತ್ಯೋಪದೇಶಮಂ ಶಾಂತಮಯಂಗೆ ಮಾಡಿ ನೋಡಿ ಕಾರುಣ್ಯಮಂ ನೀಡಿ ಸಾಮರ್ಥ್ಯಮಂ ಕೂಡಿ, ನಂದೀಶ್ವರಂ ನೇಹದಿಂ ಸಂಗಮೇಶ್ವ ರಂಗೆಱಗಿ ಮುನ್ನಿನಂತೆ ಶಿವಲಿಂಗ ಶ್ರೀಪಾದ ನಿರಂತರಾವಳೋಕನಾಗಿರೆ;

ಸಂಗನಬಸವಂ ಬಸವಿದೇವಂ ಸದ್ಗುರೂಪದೇಶಲಭ್ಯಮಾನ ಕರಕಮಳಸ್ಥಿತ ಶಿವಲಿಂಗೋತ್ಪನ್ನ ಹರುಷಪುಳಕಶರೀರ ಸುಖಜಳಬಿಂದು ಸಂದಷ್ಟನಯನಪುಷ್ಪ ಸಂಯುತ ಶೈವಸಾಮ್ರಾಜ್ಯ ಪೂಜ್ಯನಾಗಿ, ರಂಗಮಂಟಪಂ ವಿವಾಹಮಂಟಪವಾಗೆ ಪರಿವಾರ ದೇವರುಂ ನಿಬ್ಬಣಿಗರಾಗೆ ಕರಣಂಗಳೆ ಸುವಾಸಿನಿಯರಾಗೆ ಸಕಳೇಂದ್ರಿಯಂ ಗಳಾರತಿಯನೆತ್ತೆ, ಭಕ್ತಿರಸಂ ಕ್ಯೆದಾರೆಯಾಗೆ ಗುರುಕಾರುಣ್ಯಮುಹೂರ್ತಕ್ಕೆ ಜನನ ಮರಣಂಗಳೆಂಬ ತೆರೆಯರ್ ಪಿಡಿದ ಸಂಸಾರದ ತೆರೆ ಸರಿಯೆ, ನಂದಿಯ ಮುಖದ ಮದವಣಿಗನಂ ಕಂಡು ನಿಷ್ಠೆನೇಮಂಗಳ ಜೀರಿಗೆಬೆಲ್ಲಂಗಳಂ ತಳಿದು ಪ್ರಾಣೇಶ್ವರನಂ ಪರಮಪ್ರೀತಿಯೊಳಪ್ಪಿಕೊಂಡು, ಸಂಗಂ ಪತಿಯಾಗಿ ಬಸವಂ ಸತಿಯಾಗಿ ಪಂಚಾ ಕ್ಷರಿಯೆ ಗತಿಯಾಗೆ ಸದ್ಭಕ್ತಿಯೆ ಮತಿಯಾಗಿ, ಸಂಗನಬಸವಂ ಗುರುಲಿಂಗ ಶ್ರೀಚರಣ

ನಖಮಯೂಖಚಂದ್ರಿಕಾಚಕೋರಾಯಮಾನಂ ಶೈವಾನುರಾಗ ಸಂಪತ್ಸುಖ ತರಂಗಿಣೀನಿಮಗ್ನಚಿತ್ತಂ ಮಾಯಾನಿರುಹರಣಂ ನಿರಾವರಣನಿರ್ಮಳನಿಜಾನಂದ ನಿರುಪಾಧಿಕಜ್ಯೋತಿರ್ಲಿಂಗಹರುಷಪುಳಕಿತ ಶರೀರನಾಗುತಂ ಕಪ್ಪಡಿಯ ಸಂಗಮ ದೊಳಿರೆಯಿರೆ ||

೨

ಕುಮಾರ ವಿದ್ರಾವಣಂ ಭದ್ರಾಸನದ ಮೇಲೊಪ್ಪಿ ಕವಿಗಳ ಗಮಕಿಗಳ ವಾದಿಗಳ ವಾಗ್ಮಿಗಳ ಮಂತ್ರಿಗಳ ನಾಯಕರ ಗಾಯಕರ ನರ್ತಕರ ವರ್ತಕರ ನಾಟಕರ ಪಾಠಕರ ಭೂಮಿಪರ ಸಾಮಂತರ ರಾಜಪುತ್ರರ ಮಕುಟವರ್ಧನರ ರಾಯರಾವುತರ ಅತಿರಥರ ಮಹಾರಥರ ಅರ್ಧರಥರ ಸಮರಥರ ಫಳಕಾರರ ಆರೆಕಾಜರ ವೀರರ ಯೋಧರ ವಿಳಾಸಿನಿಯರ ವಿವಿಧ ವಿಸ್ತರದ ನಡುವೆ ಇಕ್ಕುವ ಸೀಗುರಿಯ ಬೀಸುವ ಚಾಮರದ ವಿಚಿತ್ರವಿಭ್ರಮದಿಂ ಸೌಂದರಪೆರುಮಾಳಿ ಬಿಜಯಂಗೆಯ್ದಿರಲಾ ಸಮಯದೊಳು ಮಂತ್ರಿಮುಖ್ಯನಪ್ಪ ಸಕಳಕಳಾಕೋವಿದನಪ್ಪ ತುಂಬುರ ದಂಡ ನಾಥಂ ನಂಬಿಯಣ್ಣನೇಜುಂ ಜವ್ವನದುರವಣೆಯುಮಂ ಸ್ವರೂಪ ಸೌಂದರ್ಯದ ನಳನಳಿಕೆಯುಮಂ ಮನದಲಲ್ಲೆಯುಮಂ ವಚನದ ಬಜೀಯ ಬಲ್ಪುಮಂ ನೋಟದ ವಕ್ರತೆಯುಮಂ ಮುಖದ ಕಾಮಕಾರ್ಪಣ್ಯಮುಮಂ ದೃಷ್ಟಿಯ ದೈನ್ಯಮುಮ ನಱಿದು ಏನಾನುಮೊಂದು ನೆವಂಬಡೆದೆದ್ದು ಪುತ್ರವಿವಾಹಚಿಂತಾಸಕ್ತನಾಗಿ ಪರಿಮಿತದೊಳಿರ್ದ ನರಸಿಂಗಮೊನೆಯರ ಸಮೀಪಕ್ಕೆ ಬಂದು ಮಯ್ಯಿಕ್ಕಿ ನಿಂದು ಕೈಮುಗಿದು ತುಂಬುರನಿಂತೆಂದಂ

ದೇವದೇವ ಸುಕುಮಾರ ಸಾರ್ವಭೌಮನಪ್ಪ ಸೌಂದರ ಪೆರುಮಾಳೆಯಿರವ ನವಧರಿಪುದು ದೇವ ಕಲ್ಪಲತೆಯನೆಳಸಿರ್ಪ ಸುರತರುವಿನಂತೆ ರಾತ್ರಿಯಂ ಬೆಳಗ ಲಿರ್ದ ಪೂರ್ಣೇಂದುವಿನಂತೆ ಧವಳಿಸಲಿರ್ದ ದಿವಮಂ ಸಹಸ್ರಕರನಂತೆ ಇರ್ದಪನದಲ್ಲ ದೆಯುಂ ದೇವದೇವ ರಾಜಕುಲದೀಪಕನ ರೂಪು ಸೌಂದರ್ಯಮನೇನೆಂದು ಬಣ್ಣಿಪೆಂ—ಎಂತು ಪೊಗಳ್ದಪೆಂ ಶಿವಶಿವಾ ಭೀತಿಯಾದಪ್ಪುದು —ಒಂದು ಮಾಹೇಶ್ವರ ತೇಜಶ್ಶಲಾಕೆಯಂತಿರ್ದಪುದಾದೊಡಂ ಕೇಶಾದಿ ಪಾದಪರಿಯಂತಂ ಬಲ್ಲಂತೆ ಬಿನ್ನವಿಪೆಂ ಚಿತ್ತೈಸುವುದು—ಎಂತೆಂದೊಡೆ ದೇವ ಕಪ್ಪಿನ ಕಾಂತಿಯಿಂ ಕುರು ಳ್ಗೊಂಡು ದಟ್ಟೈಸಿ ಕವಲಿಱಿದ ಕುಂತಳಂ ಗಂಗಾಧರನೊಳ್ ಪುರುಡಿಸಿ ತೆರೆಮಸಗಿದ ಕಾಳಿಂದೀನದಿಯಂ ಶಿರೋಗ್ರದೊಳ್ ಧರಿಸಿದಂತಿರ್ದಪುದು ದೇವ ಭಾಳಸ್ಥಳದೊಳ್ ಭರಿತಮಾಗಿ ಬೆಳಗುವ ಭಸಿತವಳಯಂ ಮೃಡಂ ಮುಡಿಯೊಳ್ ಧರಿಸಿದಡೆ ತಾಂ ಶಶಿಕಳೆಯಂ ನೊಸಲೊಳಿಟ್ಟಂತಿರ್ದಪುದು ಮತ್ತಂ ಕರ್ಣದೊಳ್ ಕೈಕೊಳಿಸಿ ಮೊತ್ತದೊಳೆಳಲ್ದು ಬಿತ್ತರಿಸುವುತ್ತಮದ ಮುತ್ತಿನ ಕಡುಕುಗಳು ಮುಂದೆ ನೀಂ ಭೋಗಿಸುವ ಸಕಳಭಾಗ್ಯಕ್ಕೆ ಬೀಜಭೂತಮಾಗಿರಲ್ಕೆ ಚಂದ್ರಧರನೆಮ್ಮುವಂ

ಕಳುಪಿದನೆಂದಿಕ್ಕೆಲದೊಳೇಕಾಂತಮಂ ಪೇಳ್ವ ಪುಣ್ಯದುರುಳಿಗಳಂತಿರ್ದಪವು ಅದಲ್ಲದೆಯುಂ ದೇವ ಬೆಳತಿಗೆಗಂಗಳ ಮೆಱೆವ ನಾಸಿಕದ ತೊಳಗುವ ಸುಲಿಪಲ್ಗಳ ವಿಳಾಸಮಂ ತಳೆದ ಮುಖಮಂಡಲಂ ಶಿವಸ್ತೋತ್ರಗೀತಾಮೃತ ರಸಾಸ್ವಾದಕ್ಕೆ ತೀವಿರ್ಪ ರತ್ನಖಚಿತ ಮಾಣಿಕ್ಯಕರಂಡಗೆಯಂತಿರ್ದಪುದು ಮತ್ತಂ ಪೇರುರದೊಳೊಪ್ಪುವ ಹೀರಾವಳಿ ಪದಕಪ್ರಕರಂ ಸರ್ಪಾಭರಣದಂತೆ ತೋಱುತ್ತಿರ್ದಪುದು ಹೊದೆದ ಹೊದಕೆ ಗಜಚರ್ಮಂ ಸಪುರಬಿಳಿದಾದಂತಿರ್ದಪುದು ಹಸ್ತಕಟಕಂ ಫಣಿಕಂಕಣದಂತಿರ್ಪುದು ಉಟ್ಟಪಟ್ಟಾವಳಿ ಪುಲಿದೊಗಲಂತಿರ್ದಪುದು ಮೃದುಪದತಳದ ಲಾವಣ್ಯಕ್ಕೆನಗೆತನಗೆನುತೆ ನಟ್ಟುನೋಡುವ ನಾಯಕಿಯರ ದಿಟ್ಟಿಗಳಿಂ ಚರಣತಳಂ ಕಣ್ಬೆತ್ತಂತಿರ್ದಪುದು ದೇವ ಮೆಯ್ವೆಳಗಿನ ಕಾಂತಿಯ ಬೆಳಗು ಭಸಿತೋದ್ಧೂಳನದಂತಿರ್ದಪುದು ಏಱುಂ ಜವ್ವನಂ ಶಿವಪೂಜೆಗೆಂದರಳಲಿರ್ದ ಪರಿಮಳದ ಮೊಗ್ಗೆಯಂತಿರ್ದಪುದು—ಈ ಕುಮಾರಂ ಮರ್ತ್ಯನಲ್ಲ—ಏನಾನುಮೊಂದು ಕಾರಣದಿಂ ಬಂದ ಗಣೇಶ್ವರನಾಗಲೆವೇಳ್ಕುಂ ನಿಮ್ಮಡಿಗಳ ಭಾಗ್ಯವನೇನೆಂಬೆನದಂತಿರ್ಕೆ ನಾಂ ಬಿನ್ನೈಸಲ್ ಬಂದ ಬಿನ್ನಪಂ ಕುಮಾರಂಗೆ ಯೌವನೋದಯಭ್ಯಗ್ರಂ—ಈಗಳು ಪ್ರಸ್ತುತಪ್ರಸ್ತಾವಂ ವಿವಾಹಮೆಂದು ಬಿನ್ನೈಸಿದ ತುಂಬುರಂಗೆ ನರಸಿಂಗ ಮೊನೆಯರ್ ಮೆಚ್ಚಿ ಪಸಾಯಮನಿತ್ತು—ಎನ್ನ ಮನಂ ನೆನೆಯಿತ್ತಂ ನಿನ್ನ ನಾಲಗೆ ನುಡಿಯಿತ್ತಿಂತಿದನಱಿಪಿ ಸಂತಸಂ ಮಾಡಿದೆಯೆಂದಾ ತುಂಬುರಂ ಮೊದಲಾದ ನಾಲ್ವರಿರ್ವರ್ ಮಂತ್ರಿಗಳೊಡನಾಳೋಚನಂ ಮಾಡಿ ಎಮ್ಮ ಕುಲಕ್ಕನುಕೂಲ ಮಾದ ಕನ್ಯಾರತ್ನಮನೀ ಪಟ್ಟಣಪ್ರಾಂತ ಪುರಂಗಳೊಳ್ ಪರಿಭಾವಿಸಿ ಬರ್ಪುದೆಂದು ಬೆಸಸೆ

ಹಸಾದವೆಂದು ತುಂಬುರಂ ಬೀಳ್ಕೊಂಡೇಳ್ವವಸರದೊಳೊರ್ವ ಮಾಹೇಶ್ವರಂ ಮುಂತೆ ಸೀಂತೊಡೆ ಎಂತಪ್ಪುದೊ ಎಂದು ತುಂಬುರಂ ಬಂದು ನಾಲ್ಕೆರಡು ಪಟ್ಟಣಮಂ ನೋಡುತ್ತೆಲ್ಲಿಯುಂ ಕಾಣದೆ ಮಣಮುಂದ ಪುತ್ತೂರೆಂಬ ಪುರಮಂ ಪುಗುತರ್ಪಾಗಳ್—ಒರ್ವ ಬಾಲೆ ಮುಗ್ಧೆ ಹರಯಂ ಕಿಱಿದು ಯೌವನಂ ಪಿರಿದಾಗಿ ಮುಖವೆಲ್ಲಂ ಕಣ್ಣು ಬೆನ್ನೆಲ್ಲಂ ಮುಡಿ ಉರವೆಲ್ಲಂ ಮೊಲೆ ಪಿಂತೆಲ್ಲಂ ನಿತಂಬಂ ನಡೆಯೆಲ್ಲಂ ಮೃದು ನುಡಿಯೆಲ್ಲಂ ನೋಟ ನೋಟವೆಲ್ಲಂ ಬೇಟವೆನಿಸಿ ಕೆಲಬರ್ ಬಾಲೆಯರೊಡನುಪ್ಪರಿಗೆಯೊಳಿರ್ದನರ್ಘ್ಯರತ್ನಮಂ ಕಂಡು ಮನದೊಳೆಳಸುತ್ತವರ ಮನೆಗೆ ಬಂದು ತುಂಬುರಂ ಮಾತೆಪಿತರೊಡನೆ ಮಾತಾಡುವಲ್ಲಿಂ ಮುನ್ನ ಕುಲಂ ಸತ್ಕುಲಮಾಗಿ ರೂಪು ಯೌವನ ವಿಲಾಸಂ ಪಾಸಟಿಯಾಗಿರೆ ಸಂತಸಂಬಟ್ಟು ನರಸಿಂಗ ಮೊನೆಯರ ಕುಮಾರ ಸೌಂದರ ಪೆರುಮಾಳೆಗೀ ಕನ್ಯಾರತ್ನಮನೀವುದೆಂದು ಬೇಡಲ್—ಅವರ್ ಬೆಳುದಿಂಗಳಿದಿರ್ವಂದ ಚಕೋರಿಗಳಂತೆ ವಸಂತನಿದಿರ್ವಂದ ಕೋಕಿಲಂಗಳಂತೆ ಪರಮಾನುರಾಗಂಬಡೆದು ಕೊಟ್ಟೆವೆಂದು ನೆಟ್ಟನೆ ನುಡಿವುದುಂ ನಿಟ್ಟೈಸಿ ಕೇಳ್ವುತ್ಸವಂದಾಳ್ದು ತುಂಬುರನುಂ ತಾನುಂ ಕೂಡಿಕೊಂಡು ಮುಹೂರ್ತಿ

ಕನಂ ಕರಸಿ ಬಂದ ಜೋಯಿಸಂಗಾಸನಮನಿತ್ತು ತಾಂಬೂಲಮಂ ಕೊಟ್ಟು ಕುಮಾರಂಗಮೀ ಕನ್ನಿಕೆಗಂ ವಿವಾಹಕ್ಕೆ ಮುಹೂರ್ತಮಂ ನೋಡೆಂದು ಪೇಳಲ್— ಆತಂ ಗಣನೆಯಿಂ ಗುಣಿಸಿ ನೋಡಲೆಲ್ಲಿಯುಮಾಯಿರ್ವರ್ಗಂ ಕೂಟಮಿಲ್ಲದೆ ಬೇಱೊಂದು ಮಹಾ ಕೂಟಕ್ಕೆ ಲಗ್ನಮಾಗಿರಲದಂ ಕಂಡು ನಕ್ಷತ್ರಪಾತಕಂ ಕೌತುಕಂಬಟ್ಟು ಆವುದಕ್ಕೆ ಲಗ್ನಮಂ ಕೊಡುವೆನೆಂದಿಂತೆಂದಂ ಈ ದಿನಂ ಮೊದಲಾಗಿ ಮಾಸಾರ್ಧದೊಳೊಂದು ಮಹಾಲಗ್ನಮೊಳ್ಳಿತ್ತೆಂದು ಪೇಳ್ದಾತಂ ಪೋಗಲ್–ಅದಂ ಕೈಕೊಂಡು ವಿವಾಹಮಂಟಪಂ ಮೊದಲಾದ ಮಂಗಳ ವ್ಯಯ ಕ್ಕೊಂದೆರಡುಸಾವಿರ ಪೊನ್ನಂ ಮನ್ನಿಸಿಕೊಟ್ಟು.

ತುಂಬುರಂ ತಿರುನಾವಲೂರ್ಗೆ ಮರಳ್ದು ಬಂದರಮನೆಯಂ ಪೊಕ್ಕು ಮುಂದೆ ಸಿಂಹಾಸನದ ಮೇಲೆ ಕುಮಾರಂ ಬೆರಸಿ ಕೋಟಿ ಮಕುಟವರ್ಧನರಿಂ ಬಹಳ ಗೊಂದಣಾಸ್ಥಾನನಾಗಿರ್ದ ನರಸಿಂಗಮೊನೆಯರ್ಗೆ ಸಾದರದಿಂ ಮಯ್ಯಿಕ್ಕಿ ಕಯ್ಯಂ ಮುಗಿದು ದೇವದೇವ ಸುಕುಮಾರ ಮಕರಪತಾಕನ ಸೌಭಾಗ್ಯವನೇನಂ ಬಿನ್ನವಿಪೆಂ– ಈ ಪುರದ ಯೋಜನಾಂತರದ ಮಣಮುಂದಪೂತ್ತೂರೊಳತ್ಯಂತದುರ್ಲಭಮಪ್ಪ ದೊಂದು ಸ್ತ್ರೀರತ್ನವಿರ್ದಪುದು ಈ ಲೋಕಕ್ಕಾ ಮಾನಿನಿಯ ಕುಲಂ ಮಿಗಿಲಾ ಕುಲಕ್ಕಂ ರೂಪು ರೂಪಿಂದಂ ಯೌವನಂ ಯೌವನದಿಂ ಗುಣಂ ಗುಣದಿಂದಭಿಮಾನ ವಭಿಮಾನದಿಂ ಚಾರಿತ್ರಂ ಮಿಗಿಲೆನಿಸಿ ಮೂಲೋಕದ ಕಣ್ಣಪುಣ್ಯದಂತಿರಲ್– ಅಲ್ಲಿಗೆ ನಡೆತಂದವರ ತಾಯ್ತಂದೆಗಳನೊಡಂಬಡಿಸಿ ಶುಭಲಗ್ನಮಂ ವಿಭವದಿಂ ಕೈಕೊಂಡು ಬಂದೆಂ ಶುಕ್ಲಪಕ್ಷದ ಚತುರ್ದಶೀ ಸೋಮವಾರದೊಳು ವೃಷಭರಾಶಿ ಆರ್ದ್ರಾ ನಕ್ಷತ್ರಂ ಭದ್ರಕರಣಂ ಶಿವಯೋಗಮುತ್ತಮವೆಂದು ಬಿನ್ನೈಸಲ್–ಅಂದಿನ ದಿನ ವಿಂದೇಕಾಗದೆಂಬಂತೆ ಲೌಲ್ಯದೃಷ್ಟಿಯಿಂ ನೋಡುವ ನಂಬಿಯಣ್ಣನ ಮುಗ್ಧಭಾವಕ್ಕೆ ಮುಯ್ಯಾನುತುಂ ನರಸಿಂಗಮೊನೆಯರ್ ತುಂಬುರಂಗೆ ಸಂಭ್ರಮದಿಂ ಮೆಚ್ಚಿ ಸಂತಸಂಬಟ್ಟಾಸ್ಥಾನಮಂ ಪರೆಯವೇಳ್ದು ವಿವಾಹಸಂಭ್ರಮೋದ್ಯುಕ್ತನಾಗಿರಲ್–

ಇತ್ತಲು ಕುಮಾರಂ ತನ್ನ ಮನದನ್ನರಪ್ಪ ಹತ್ತೈದು ಸಖಿಗಳಂ ಕೂಡಿಕೊಂಡು ತುಂಬುರನಂ ಕರಯಿಸಿ ನೀನಾಗಳು ಬೊಪ್ಪದೇವಂಗೇನಂ ಬಿನ್ನೈಸುತಿರ್ದೆ ಅದೆಂ ತೆನುತೆ ಕಠಾರಿಯ ಕೋಲಿಂ ಮುಂದಣ ರತ್ನಸ್ತಂಭಮಂ ಕಿಱಿಹಿ ಸೋಂಕುತುಂ ಒಂದೆರಡು ಲಾಗಿಂ ಜಂಗಳಮಂ ಸರಳಿಸುತುಂ ಮೌಳಿಕಾಜಿತನದಿಂದೊಮ್ಮೊಮ್ಮೆ ತನ್ನ ಭುಜಾದಂಡಮಂ ತಿರುಗಿ ನೋಡುತುಂ ನೇಹದಿಂದಾ ಮಾತಂ ಪೇಳ್ದ ತುಂಬುರನ ಪೆಗಲೊಳ್ ಕಯ್ಯಿಕ್ಕಿ ಪುಳಕಿಸುತ್ತುಂ ಇಂತು ಕನ್ಯಾಗುಣ ಕೀರ್ತನ ಮನಾಕರ್ಣಿಸುತ್ತುಂ ಮನ್ಮಥವಿಕಾರದಿಂ ಕುಮಾರಕಂಠೀರವನಿರೆಯಿರೆ ||

# ದೇವರ ದಾಸಿಮಯ್ಯ

ಕರಿಯನಿತ್ತಡೆ ಒಲ್ಲೆ. ಸಿರಿಯನಿತ್ತಡೆ ಒಲ್ಲೆ. ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ. ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥಾ.

ಹಸಿವೆಂಬ ಹೆಬ್ಬಾವು ಬಸಿರ ಬಂದು ಹಿಡಿದಡೆ ವಿಷವೇರಿತ್ತಯ್ಯ. ಆಪಾದಮಸ್ತಕಕ್ಕೆ ಹಸಿವಿಗನ್ನವನಿಕ್ಕಿ ವಿಷವನಿಳುಹಬಲ್ಲಡೆ ವಸುಧೆಯೊಳಗಾತನೇ ಗಾರುಡಿಗ ಕಾಣಾ ರಾಮನಾಥಾ.

ನೆರೆ ನಂಬಿ ಕರೆದರೆ ನರಿ ಕುದುರೆಯಾಗಿ ಹರಿಯದೆ? ಜಗವೆಲ್ಲ ಅರಿಯಲು ತೊರೆಯೊಳಗೆ ಬಿದ್ದ ಲಿಂಗ ಕರೆದರೆ ಬಂದುದು ಕರಸ್ಥಲಕ್ಕೆ. ನಂಬದೆ ಕರೆದವರ ಹಂಬಲನೊಲ್ಲ ನಮ್ಮ ರಾಮನಾಥಾ.

ಮೆಳೆಯ ಮೇಲಣ ಕಲ್ಲು ಜಗದೆರೆಯನಾಗಬಲ್ಲುದೇ? ಮೆಳೆ ಶಿವಭಕ್ತನಾಗಬಲ್ಲುದೇ? ನಿಮ್ಮ ತನುಮನಧನವನರಿಯದಿರ್ದಡೆ ಸದುಭಕ್ತರಹರೇ ರಾಮನಾಥಾ?

ಎಳ್ಳು ಇಲ್ಲದ ಗಾಣದಲ್ಲಿ ಎಣ್ಣೆಯುಂಟೇ? ಜೊಳ್ಳು ತೂರಿದಲ್ಲಿ ಬತ್ತ ಉಂಟೇ? ಕಳ್ಳ ಹಾದರಿಗರ ಸಂಪಾದನೆ ಹೊಳ್ಳ ಕುಟ್ಟಿ ಕೈ ಹೊಟ್ಟಾದಂತೆ ಕಾಣಾ ರಾಮನಾಥಾ.

ಅನುಭಾವವಿಲ್ಲದೆ ಈ ತನು ಎಳತಟವಾದುದಯ್ಯ! ಅನುಭಾವವೇ ತನುವಿಂಗೆ ಆಧಾರ. ಅನುಭಾವಿಗಳ ಅನುಭಾವ ಮನವಾರೆ ವೇಧಿಸಿದವರಿಗೆ ಜನನವಿಲ್ಲ ಕಾಣಾ ರಾಮನಾಥಾ.

ಹರಿದ ಗೋಣಿಯಲೊಬ್ಬ ಕಳವೆಯ ತುಂಬಿದ. ಇರುಳೆಲ್ಲ ನಡೆದನಾ ಸುಂಕಕ್ಕಂಜಿ. ಕಳವೆ ಎಲ್ಲ ಹೋಗಿ ಬರಿಯ ಗೋಣಿ ಉಳಿಯಿತ್ತು. ಅಳಿಮನದವನ ಭಕ್ತಿ ಇಂತಾಯಿತ್ತು ರಾಮನಾಥಾ.

ಒರತೆಗಳ ಕಂಡಿಂತು ಕೆಲರು ಬಾವಿಯ ತೋಡೆಂಬರು. ಅರವಟಿಗೆ ಛತ್ರವು ತಮ್ಮದೆಂಬರು. ಪಯಿರ್ಬೆಳೆದಿರೆ, ಸುರಿವ ಮಳೆಯು ಸುರಿಸದಿದ್ದರೆ, ಅವರೇತರಲ್ಲಿ ನೀಡುವರಯ್ಯಾ ರಾಮನಾಥಾ?

ಇಳೆ ನಿಮ್ಮ ದಾನ. ಬೆಳೆ ನಿಮ್ಮ ದಾನ. ಸುಳಿದು ಬೀಸುವ ವಾಯು ನಿಮ್ಮ ದಾನ. ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ರಾಮನಾಥಾ ?

ನಿಷ್ಠೆಯುಳ್ಳ ಭಕ್ತ ನಟ್ಟಡವಿಯಲ್ಲಿರ್ದಡೇನು ? ಅದು ಪಟ್ಟಣವೆಂದೆನ್ನಿಸುವದು. ನಿಷ್ಠೆ ಇಲ್ಲದ ಭಕ್ತ ಪಟ್ಟಣದಲ್ಲಿದ್ದರೂ ಅದು ನಟ್ಟಡವಿ ಕಾಣಾ ರಾಮನಾಥಾ ?

ಹರ ತನ್ನ ಭಕ್ತರ ತಿರಿವಂತೆ ಮಾಡುವ. ಒರೆದು ನೋಡುವ, ಸುವರ್ಣದ ಚಿನ್ನದಂತೆ. ಅರೆದು ನೋಡುವ, ಚಂದನದಂತೆ. ಅರಿದು ನೋಡುವ, ಕಬ್ಬಿನ ಕೋಲಿನಂತೆ. ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದೆತ್ತಿಕೊಂಬ ನಮ್ಮ ರಾಮನಾಥನು.

ಇಂದಿಗೆಂತು ನಾಳಿಗೆಂತೆಂದು ಚಿಂತಿಸಲೇಕೆ ? ತಂದಿಕ್ಕುವ ಶಿವಂಗೆ ಬಡತನವೇ ರಾಮನಾಥಾ ?

ಹೂವಿನೊಳಗಣ ಕಂಪ ಹೊರಸೂಸಿ ಸುಳಿವ ಅನಿಲನಂತೆ, ಅಮೃತದೊಳಗಣ ರುಚಿಯ ನಾಲಿಗೆಯ ತುದಿಯಲ್ಲಿ ಅರಿವನ ಚೇತನದಂತೆ, ನಿಲವಿಲ್ಲದ ರೂಪ ಕಳೆಯಲ್ಲಿ ವೇಧಿಸುವವನ ಪರಿ ರಾಮನಾಥಾ.

ತನು ತನ್ನ ಹೊರೆಯಲಿದ್ದರೇನು ಎಷ್ಟುದಿನ ? ಮನ ತನ್ನ ಹರಿದತ್ತ ಹರಿದ ಬಳಿಕ ಕೆನೆ ಇಲ್ಲದ ಮೊಸರ ಕಡೆದರೆ ಅಲ್ಲಿ ಒಂದು ಹನಿ ತುಪ್ಪವಿಲ್ಲ ಕಾಣಾ ರಾಮನಾಥಾ.

ಹಸಿವಿಲ್ಲದ ಬೊಂಬೆಗೆ ತೃಷೆಯಿಲ್ಲದ ನೀರೆರೆದು ಮಸಕವಿಲ್ಲದ ಮಾತ ಮನದಲ್ಲಿ ಹೇಳಿ ಹೆಸರಿಲ್ಲದೆ ಕರೆದೊಡೆ, ಓ ಎಂಬವ ನಾನೋ ನೀನೋ ರಾಮನಾಥಾ ?

ಮೊಲೆಮುಡಿ ಬಂದರೆ ಹೆಣ್ಣೆಂಬರು. ಗಡ್ಡಮೀಸೆ ಬಂದರೆ ಗಂಡೆಂಬರು. ನಡುವೆ ಸುಳಿವಾತ್ಮನು ಗಂಡೂ ಅಲ್ಲ, ಹೆಣ್ಣೂ ಅಲ್ಲ ಕಾಣಾ ರಾಮನಾಥಾ.

## ಸಕಳೇಶ ಮಾದರಸ

ಜನಮೆಚ್ಚು ಶುದ್ಧನಲ್ಲದೆ ಮನಮೆಚ್ಚು ಶುದ್ಧನಲ್ಲವಯ್ಯ? ನುಡಿಯಲ್ಲಿ ಜಾಣನಲ್ಲದೆ ನಡೆಯಲ್ಲಿ ಜಾಣನಲ್ಲವಯ್ಯ! ವೇಷದಲ್ಲಿ ಅಧಿಕನಲ್ಲದೆ ಭಾಷೆಯಲ್ಲಿ ಅಧಿಕನಲ್ಲವಯ್ಯ! ಧನ ದೊರಕದೆ ನಿಸ್ಪೃಹನಲ್ಲದೆ ಧನ ದೊರಕಿ ನಿಸ್ಪೃಹನಲ್ಲವಯ್ಯ! ಏಕಾಂತದ್ರೋಹಿ ಗುಪ್ತಪಾತಕಿ ಯುಕ್ತಿಶ್ಶೂನ್ಯನಂಗೆ ಸಕಳೇಶ್ವರ ದೇವರು ಒಲಿ ಒಲಿ ಎಂದರೆ ಎಂತೊಲಿವನಯ್ಯಾ?

ಗರ ಹೊಡೆದಂತೆ ಬೆರೆತುಕೊಂಡಿಪ್ಪರು. ಮರನನೇರಿ ಬಿದ್ದಂತೆ ಹಮ್ಮಿದಂ ಬೋಗಿಪ್ಪರು. ಉರಗನ ವಿಷವಾವರಿಸಿದಂತೆ, ನಾಲಿಗೆ ಹೊರಳದಂತೆ, ಕಂಗಾಣ ದಂತೆ, ನಿಮ್ಮ ಕರುಣವೆ ಕರ ಚಲುವ ಸಕಳೇಶ್ವರಯ್ಯ ಸೊಕ್ಕಿನವನ ಪರಿ ಬೇರೆ ತಂದೆ.

ಹೊಯಿದ ಹರೆಗೆ ಕುಣಿವಾಡುವರೆಲ್ಲ. ಹಾಡಿದ ಗೀತಕ್ಕೆ ತಲೆದೂಗುವರೆಲ್ಲ. ಪಂಜರದೊಳಗಣರಗಿಳಿಯಂತೆ, ಅದು ಆಡುವುದು ಹಾಡುವುದು. ಸಕಳೇಶ್ವರ ದೇವರಲ್ಲಿ ಅಭ್ಯಾಸಕ್ಕೆ ಮಜ್ಜನಕ್ಕೆರೆವರೆಲ್ಲ ಭಕ್ತರೆ?

ಗಿರಿಯ ಕರದಿಂದೆತ್ತಿದಡೇನು? ಪರಿವ ವಾರುಧಿಯನಾಪೋಷಣವ ಮಾಡಿದ ಡೇನು? ಗಗನ ಗಮನದಲ್ಲಿ ಸುಳಿದಡೇನು? ಇವರೆಲ್ಲರು ಪವನದ ಬಳಿಯಲಭ್ಯಾಸಿ ಗಳು. ಅರ್ಚಿಸಿ ಪೂಜಿಸುವ ಮರ್ತ್ಯದ ಲೌಕಿಕರ ಮೆಚ್ಚು ಸಕಳೇಶ್ವರದೇವ ವೇಷ ಡಂಭಕರಾ.

ದೇಶ ದೇಶಾಂತರವ ತೊಳಲಿ ಬಳಲಿ, ಕೆಲರ ಹಳಿದು ಕೆಲರ ಹೊಗಳಿ, ವೃಥಾ ಹೋಯಿತ್ತೆನ್ನ ಸಂಸಾರ. ಗಿರಿಯ ಶಿಖರದ ಮೇಲೆ ಲಿಂಗಧ್ಯಾನದಲ್ಲಿ ಮೌನಿಯಾ ಗಿರಿಸು ಸಕಳೇಶ್ವರಾ.

ಆಚಾರವ ನುಡಿವೆ. ಅನಾಚಾರವ ನುಡಿವೆ. ನಮಗೆ ನಿಮಗೆ ಪ್ರಸಾದ ಸ್ವಾಯತ ನೋಡಾ! ನಾನು ಭಕ್ತನೆಂಬ ನುಡಿಗೆ ಸಕಳೇಶ್ವರ ದೇವ ನಗುವ.

ಮೃತ್ತಿಕೆ ಒಂದರಲಾದ ಭಾಂಡದಂತೆ, ಚಿನ್ನ ಒಂದರಲಾದ ಬಂಗಾರದಂತೆ, ಉದಕ ಒಂದರಲಾದ ವಾರಿಕಲ್ಲಂತೆ, ಬ್ರಹ್ಮದಿಂದಲಾದ ಜಗವು ಭಿನ್ನವೆಲ್ಲಿಯದು ಸಕಳೇಶ್ವರಯ್ಯಾ?

# ಅಕ್ಕಮಹಾದೇವಿ

ನೆಲದ ಮರೆಯ ನಿಧಾನದಂತೆ
ಫಲದ ಮರೆಯ ರುಚಿಯಂತೆ
ಶಿಲೆಯ ಮರೆಯ ಹೇಮದಂತೆ
ತಿಲದ ಮರೆಯ ತೈಲದಂತೆ
ಮರದ ಮರೆಯ ತೇಜದಂತೆ
ಭಾವದ ಮರೆಯ ಬ್ರಹ್ಮವಾಗಿಪ್ಪ
ಚೆನ್ನಮಲ್ಲಿಕಾರ್ಜುನನ ನಿಲವನಾರೂ ಅರಿಯಬಾರದು !

ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯ ನೀನು !
ಮನ ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯ ನೀನು !
ಹದುಳಿಗರಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯ ನೀನು !
ಅರಿವು ಕಣ್ದೆರೆಯದವರಲ್ಲಿ ಆರತಿಯನೊಲ್ಲೆಯಯ್ಯ ನೀನು !
ಭಾವಶುದ್ಧವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯ ನೀನು !
ಪರಿಣಾಮಿಗಳಲ್ಲದವರಲ್ಲಿ ನೈವೇದ್ಯವನೊಲ್ಲೆಯಯ್ಯ ನೀನು !
ತ್ರಿಕರಣಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯ ನೀನು !
ಹೃದಯಕಮಲ ಅರಳದವರಲ್ಲಿ ಇರಲೊಲ್ಲೆಯಯ್ಯ ನೀನು !
ಎನ್ನಲ್ಲಿ ಏನುಂಟೆಂದು ಕರಸ್ಥಲವನಿಂಬುಗೊಂಡೆ ಹೇಳಾ
ಚೆನ್ನಮಲ್ಲಿಕಾರ್ಜುನಯ್ಯ.

ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ
ತನ್ನ ನೂಲು ತನ್ನನ್ನೇ ಸುತ್ತಿ-ಸುತ್ತಿ ಸಾವ ತೆರನಂತೆ !
ಮನ ಬಂದುದ ಬಯಸಿ ಬಯಸಿ ಬೇವುತ್ತಿರುವೆನಯ್ಯ :
ಅಯ್ಯ, ಎನ್ನ ಮನದ ದುರಾಶೆಯ ಮಾಣಿಸಿ
ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನ.

ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ !
ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ !
ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ !
ನೆನಹಿಂಗೆ ಅರಿವಾಗಿ ಕಾಡಿತ್ತು ಮಾಯೆ !
ಜಗಸ ಜಂಗುಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ !
ಚೆನ್ನಮಲ್ಲಿಕಾರ್ಜುನ, ನೀನೊಡ್ಡಿದ ಮಾಯೆಯನಾರೂ ಗೆಲಬಾರದು !

ಬಿಟ್ಟೆನೆಂದರೆ ಬಿಡದೀ ಮಾಯೆ !
ಬಿಡದಿದ್ದರೆ ಬೆಂಬತ್ತಿತ್ತು ಮಾಯೆ !
ಯೋಗಿಗೆ ಯೋಗಿಣಿಯಾಯಿತ್ತು ಮಾಯೆ !
ಸವಣಂಗೆ ಸವಣಿಯಾಯಿತ್ತು ಮಾಯೆ !
ಯತಿಗೆ ಪರಾಕಿಯಾಯಿತ್ತು ಮಾಯೆ !
ನಿನ್ನ ಮಾಯೆಗೆ ನಾನಂಜುವಳಲ್ಲ
ಚೆನ್ನಮಲ್ಲಿಕಾರ್ಜುನ ದೇವ, ನಿಮ್ಮಾಣೆ.

ಊರ ಸೀರೆಗೆ ಅಸಗ ತಡಬಡಗೊಂಬಂತೆ
ಹೊನ್ನೆನ್ನದು, ಹೆಣ್ಣೆನ್ನದು ಮಣ್ಣೆನ್ನದು ಎಂದು ನೆನೆನೆನೆದು
ನಿಮ್ಮನರಿಯದ ಕಾರಣ ಕೆಮ್ಮನೆ ಕೆಟ್ಟೆನಯ್ಯ
ಚೆನ್ನಮಲ್ಲಿಕಾರ್ಜುನಯ್ಯ.

ಹರನೇ ನೀನೆನಗೆ ಗಂಡನಾಗಬೇಕೆಂದು
ಅನಂತಕಾಲ ತಪಿಸಿದ್ದೆ ನೋಡಾ !
ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ
ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು !
ಭಸ್ಮವನೇ ಪೂಸಿ ಕಂಕಣವನೆ ಕಟ್ಟಿದರು
ಚೆನ್ನಮಲ್ಲಿಕಾರ್ಜುನ, ತನಗೆ ನಾನಾಗ ಬೇಕೆಂದು !

ಚಿಲಿಮಿಲಿ ಎಂದೋದುವ ಗಿಳಿಗಳಿರಾ !
ನೀವು ಕಾಣಿರೇ ? ನೀವು ಕಾಣಿರೇ ? ?
ಸರವರದೊಳಗಾಡುವ ಹಂಸೆಗಳಿರಾ !
ನೀವು ಕಾಣಿರೇ ? ನೀವು ಕಾಣಿರೇ ? ?
ಸರವೆತ್ತಿ ಪಾಡುವ ಕೋಗಿಲೆಗಳಿರಾ !
ನೀವು ಕಾಣಿರೇ ? ನೀವು ಕಾಣಿರೇ ? ?
ಎರಗಿ ಬಂದಾಡುವ ತುಂಬಿಗಳಿರಾ !
ನೀವು ಕಾಣಿರೇ ? ನೀವು ಕಾಣಿರೇ ? ?
ಗಿರಿಗಹ್ವರದೊಳಗಾಡುವ ನವಿಲುಗಳಿರಾ ?
ನೀವು ಕಾಣಿರೇ ? ನೀವು ಕಾಣಿರೇ ? ?
ಚೆನ್ನಮಲ್ಲಿಕಾರ್ಜುನದೇವನೆಲ್ಲಿದ್ದಾನೆಂಬುದಂ ಬಲ್ಲಡೆ
ನೀವು ಹೇಳಿರೇ ? !

ಅಳಿಸಂಕುಳವೇ ಮಾಮರನೇ, ಬೆಳುದಿಂಗಳೇ, ಕೋಗಿಲೆಯೇ
ನಿಮ್ಮೆಲ್ಲರನು ಒಂದ ಬೇಡುವೆನು !
ಎನ್ನೊಡೆಯ ಚೆನ್ನಮಲ್ಲಿಕಾರ್ಜುನದೇವರ ಕಂಡರೆ, ಕರೆದು ತೋರಿರೆ !

ವನವೆಲ್ಲ ನೀವೆ !
ವನದೊಳಗಣ ದೇವತರುವೆಲ್ಲ ನೀವೆ ! !
ತರುವಿನೊಳಗಾಡುವ ಖಗಮೃಗವೆಲ್ಲ ನೀವೆ ! ! !
ಚೆನ್ನಮಲ್ಲಿಕಾರ್ಜುನ, ಸರ್ವಭರಿತನಾಗಿ
ಎನಗೇಕೆ ಮುಖದೋರೆ ?

ಅಯ್ಯ, ನೀ ಕೇಳಿದರೆ ಕೇಳು, ಕೇಳದಿದ್ದರೆ ಮಾಣು ;
ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯ !
ಅಯ್ಯ, ನೀನೊಲಿದರೆ ಒಲಿ,ಒಲಿಯದಿದ್ದರೆ ಮಾಣು ;
ನಾ ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯ !
ಅಯ್ಯ, ನೀ ಮೆಚ್ಚಿದರೆ ಮೆಚ್ಚು, ಮೆಚ್ಚದಿದ್ದರೆ ಮಾಣು ;
ನಾ ನಿನ್ನನಪ್ಪಿದಲ್ಲದೆ ಸೈರಿಸಲಾರೆನಯ್ಯ !
ಅಯ್ಯ, ನೀ ನೋಡಿದರೆ ನೋಡು, ನೋಡದಿದ್ದರೆ ಮಾಣು ;
ನಾ ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯ !
ಚೆನ್ನಮಲ್ಲಿಕಾರ್ಜುನಯ್ಯ, ನಾ ನಿಮ್ಮ ಪೂಜಿಸಿ
ಹರುಷದಲೋಲಾಡುವೆನಯ್ಯ ! !

ತೆರಣಿಯ ಹುಳು ತನ್ನ ಸ್ನೇಹಕ್ಕೆ ಮನೆಯ ಮಾಡಿ
ತನ್ನ ನೂಲು ತನ್ನನೇ ಸುತ್ತಿ ಸಾವಂತೆ—
ಎನಗೂ ಮನೆಯೆ ? ಎನಗೂ ಧನವೆ ?
ಎನ್ನ ಮನೆಮಠ ಕನಸ ಕಂಡು ಕಣ್ದೆರೆದಂತಾಯಿತ್ತು !
ಎನ್ನ ಮನದ ಸಂಸಾರವ ಮಾಣಿಸಾ ಚೆನ್ನಮಲ್ಲಿಕಾರ್ಜುನ

ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಂಗಳಿಗಂಜಿದಡೆಂತಯ್ಯ ?
ಸಮುದ್ರದ ತಡಿಯಲೊಂದು ಮನೆಯ ಮಾಡಿ
ನೊರೆತೆರೆಗಳಿಗಂಜಿದಡೆಂತಯ್ಯ ?
ಸಂತೆಯೊಳಗೊಂದು ಮನೆಯಮಾಡಿ
ಶಬ್ದಕ್ಕೆ ನಾಚಿದಡೆಂತಯ್ಯ ?
ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯ

ಲೋಕದೊಳಗೆ ಹುಟ್ಟಿದ ಬಳಿಕ
ಸ್ತುತಿ-ನಿಂದೆಗಳು ಬಂದರೆ
ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು !

ಹಣ್ಣು ಮೆದ್ದ ಬಳಿಕ, ಆ ಮರನ ಆರು ತರಿದರೇನು ?
ಹೆಣ್ಣು ಬಿಟ್ಟ ಬಳಿಕ, ಆಕೆಯನಾರು ಕೂಡಿಕೊಂಡರೇನು ?
ಮಣ್ಣು ಬಿಟ್ಟ ಬಳಿಕ ಆ ಕೆಯ್ಯನಾರುತ್ತರೇನು?
ಚೆನ್ನಮಲ್ಲಿಕಾರ್ಜುನನ ಅರಿದ ಬಳಿಕ
ಆ ಕಾಯವ ನಾಯಿ ತಿಂದರೇನು ನೀರ ಕುಡಿದರೇನು ? !

ನಾಳೆ ಬರುವುದು ನಮಗಿಂದೇ ಬರಲಿ
ಇಂದು ಬರುವುದು ನಮಗೀಗಲೇ ಬರಲಿ !
ಆಗೀಗಲೆನ್ನದಿರೋ ಚೆನ್ನಮಲ್ಲಿಕಾರ್ಜುನ

ಮರವಿದ್ದು ಫಲವೇನು? ನೆಳಲಿಲ್ಲದನ್ನಕ !
ಧನವಿದ್ದು ಫಲವೇನು ದಯವಿಲ್ಲದನ್ನಕ ?
ಹಸುವಿದ್ದು ಫಲವೇನು ಹಯನಿಲ್ಲದನ್ನಕ ?
ರೂಪಿದ್ದು ಫಲವೇನು ಗುಣವಿಲ್ಲದನ್ನಕ?
ಅಗಲಿದ್ದು ಫಲವೇನು ಬಾನವಿಲ್ಲದನ್ನಕ ?
ನಾನಿದ್ದು ಫಲವೇನು ನಿಮ್ಮ ಜ್ಞಾನವಿಲ್ಲದನ್ನಕ?
ಚೆನ್ನಮಲ್ಲಿಕಾರ್ಜುನ !

ಹಾವಿನ ಬಾಯ ಹಲ್ಲ ಕಳೆದು
ಹಾವನಾಡಿಸಬಲ್ಲಡೆ
ಹಾವಿನ ಸಂಗವೇ ಲೇಸು ಕಂಡಯ್ಯ !
ಕಾಯದ ಸಂಗವ ವಿವರಿಸಬಲ್ಲಡೆ
ಕಾಯದ ಸಂಗವೇ ಲೇಸು ಕಂಡಯ್ಯ !
ತಾಯಿ ರಕ್ಕಸಿಯಾದಂತೆ ಕಾಯವಿಕಾರವು
ಚೆನ್ನಮಲ್ಲಿಕಾರ್ಜುನಯ್ಯ,
ನೀನೊಲಿದವರು ಕಾಯಗೊಂಡಿದ್ದರೆನಬೇಡ ! !

ಬಸವಣ್ಣನ ಭಕ್ತಿ, ಚೆನ್ನಬಸವಣ್ಣನ ಜ್ಞಾನ,
ಮಡಿವಾಳಯ್ಯನ ನಿಷ್ಠೆ, ಪ್ರಭುದೇವರ ಜಂಗಮಸ್ಥಲ,
ಅಜಗಣ್ಣನ ಐಕ್ಯಸ್ಥಲ, ನಿಜಗುಣನ ಆರೂಢಸ್ಥಲ,

ಸಿದ್ಧರಾಮಯ್ಯನ ಸಮಾಧಿಸ್ಥಲ—
ಇಂತಿವರ ಕರುಣಪ್ರಸಾದ ಎನಗಾಯಿತ್ತು, ಚೆನ್ನಮಲ್ಲಿಕಾರ್ಜುನಯ್ಯ !

ವನವೆಲ್ಲ ಕಲ್ಪತರು ! ಗಿಡುವೆಲ್ಲ ಮರುಜೇವಣಿ !
ಶಿಲೆಗಳೆಲ್ಲ ಪರುಷ ! ನೆಲವೆಲ್ಲ ಅವಿಮುಕ್ತ ಕ್ಷೇತ್ರ !
ಜಲವೆಲ್ಲ ನಿರ್ಜರಾಮೃತ ! ಮೃಗವೆಲ್ಲ ಪುರುಷಮೃಗ !
ಎಡರುವ ಹರಳೆಲ್ಲ ಚಿಂತಾಮಣಿ !
ಚೆನ್ನಮಲ್ಲಿಕಾರ್ಜುನಯ್ಯನ ನಚ್ಚಿನ ಗಿರಿಯ ಸುತ್ತಿ
ನೋಡುತ ಬಂದು, ಕದಳಿಯ ಬನವ ಕಂಡೆ ನಾನು !

ಸಾವಿಲ್ಲದ ಕೇಡಿಲ್ಲದ ಚೆಲುವಂಗಾನೊಲಿದೆನವ್ವ !
ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ
ಚೆಲುವಂಗಾನೊಲಿದೆನವ್ವ !
ಭವವಿಲ್ಲದ ಭಯವಿಲ್ಲದ ಚೆಲುವಂಗಾನೊಲಿದೆ !
ಕುಲಸೀಮೆಯಿಲ್ಲದ ನಿಸ್ಸೀಮ ಚೆಲುವಂಗಾನೊಲಿದೆ !
ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ !
ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ತಾಯೆ !

ಗಿರಿಯಲಲ್ಲದೇ
ಹುಲುಮೊರಡಿಯಲಾಡುವುದೇ ನವಿಲು ?
ಕೊಳನನಲ್ಲದೆ ಕಿರಿವಳ್ಳಕೆಳಸುವುದೇ ಹಂಸೆ ?
ಮಾಮರ ತಳಿತಲ್ಲದೆ ಸ್ವರಗೈವುದೇ ಕೋಗಿಲೆ ?
ಪರಿಮಳವಿಲ್ಲದ ಪುಷ್ಪಕೆಳಸುವುದೇ ಭ್ರಮರ ?
ಎನ್ನ ದೇವ ಚೆನ್ನಮಲ್ಲಿಕಾರ್ಜುನಗಲ್ಲದೆ
ಅನ್ಯಕೆಳಸುವುದೇ ಎನ್ನ ಮನ ಕೇಳಿರೇ ಕೆಳದಿಯರಿರಾ ? !

ಬಂಜೆ ಬೇನೆಯನರಿವಳೇ ?
ಬಲಡಾಯಿ ಮುದ್ದ ಬಲ್ಲಳೆ ?
ನೊಂದ ನೋವ ನೋಯದವರೆತ್ತ ಬಲ್ಲರು ?
ಚೆನ್ನಮಲ್ಲಿಕಾರ್ಜುನನಿರಿದಲಗು ಒಡಲಲ್ಲಿ ಮುರಿದು
ಹೊರಳುವೆನ್ನಳಲನು ನೀವೆತ್ತ ಬಲ್ಲಿರೇ, ಎಲೆ ತಾಯಿಗಳಿರಾ !

ಅರಿಸಿನವನೆ ಮಿಂದು, ಹೊಂದೊಡಿಗೆಯನೆ ತೊಟ್ಟು !
ದೇವಾಂಗವನುಟ್ಟು ಪುರುಷ ಬಾರಾ, ಪುಣ್ಯರತ್ನವೇ ನೀ ಬಾ

ನಿನ್ನ ಬರವೆನ್ನಸುವಿನ ಬರವು ಬಾರಯ್ಯ !
ಚೆನ್ನಮಲ್ಲಿಕಾರ್ಜುನಯ್ಯ ಬಂದಾನೆಂದು
ಬಟ್ಟೆಗಳ ನೋಡಿ ಬಾಯಾರುತ್ತಿಹೆನು.

ಸಾವಿಲ್ಲದ ಸಹಜಂಗೆ, ರೂಹಿಲ್ಲದ ಚೆಲುವಂಗೆ
ಭವವಿಲ್ಲದ ಅಭವಂಗೆ, ಭಯವಿಲ್ಲದ ನಿರ್ಭಯ ಚೆಲುವಂಗೆ
ನಾನೊಲಿದೆನಯ್ಯ. ಚೆನ್ನಮಲ್ಲಿಕಾರ್ಜುನ ಗಂಡನೆನಗೆ !
ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ !

## ಅಲ್ಲಮ ಪ್ರಭು

ಶಿಲೆಯೊಳಗಣ ಪಾವಕನಂತೆ, ಉದಕದೊಳಗಣ ಪ್ರತಿಬಿಂಬದಂತೆ, ಬೀಜದೊಳಗಣ ವೃಕ್ಷದಂತೆ, ಶಬ್ದದೊಳಗಣ ನಿಶ್ಶಬ್ದದಂತೆ, ಗುಹೇಶ್ವರ, ನಿಮ್ಮ ಶರಣ ಸಂಬಂಧ.

ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದವೆಂದೆನಯ್ಯ! ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದರೆ, ಆಗಲಿ ಮಹಾಪ್ರಸಾದವೆಂದೆನಯ್ಯ! ದ್ವಾಪರದಲ್ಲಿ ಶ್ರೀಗುರು ಶಿಷ್ಯಂಗೆ ಝಂಕಿಸಿ ಬುದ್ಧಿಯ ಕಲಿಸಿದರೆ, ಆಗಲಿ ಮಹಾಪ್ರಸಾದವೆಂದೆನಯ್ಯ! ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ, ಆಗಲಿ ಮಹಾಪ್ರಸಾದವೆಂದೆನಯ್ಯ! ಗುಹೇಶ್ವರ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾ ಬೆಱಗಾದೆನು.

ಎತ್ತಣ ಮಾಮರ? ಎತ್ತಣ ಕೋಗಿಲೆ? ಎತ್ತಣಿಂದೆತ್ತ ಸಂಬಂಧವಯ್ಯ? ಬೆಟ್ಟದ ನೆಲ್ಲಿಯಕಾಯಿ ಸಮುದ್ರದೊಳಗಣ ಉಪ್ಪು, ಎತ್ತಣಿಂದೆತ್ತ ಸಂಬಂಧವಯ್ಯ? ಗುಹೇಶ್ವರ ಲಿಂಗಕ್ಕೆಯು ಎನಗೆಯೂ ಎತ್ತಣಿಂದೆತ್ತ ಸಂಬಂಧವಯ್ಯ?

ಎಣ್ಣೆ ಬೇಱೆ, ಬತ್ತಿ ಬೇಱೆ; ಎರಡೂ ಕೂಡಿ ಸೊಡರಾಯಿತ್ತು! ಪುಣ್ಯ ಬೇಱೆ, ಪಾಪ ಬೇಱೆ; ಎರಡೂ ಕೂಡಿ ಒಡಲಾಯಿತ್ತು. ಮಿಗಬಾರದು, ಮಿಗದಿರಬಾರದು. ಒಡಲಿಚ್ಛೆಯ ಸಲಿಸದೆ ನಿಮಿಷವಿರಬಾರದು. ಕಾಯಗುಣವಳಿದು, ಮಾಯಾಜ್ಯೋತಿ ವಾಯುವ ಕೂಡದ ಮುನ್ನ, ಭಕ್ತಿಯ ಮಾಡಬಲ್ಲಾತನೇ ದೇವ, ಗುಹೇಶ್ವರ.

ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ. ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ. ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ. ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರ.

ಬೆಟ್ಟಕ್ಕೆ ಚಳಿಯಾದಡೆ ಏನ ಹೊದಿಸುವರಯ್ಯ? ಬಯಲು ಬತ್ತಲೆಯಿದ್ದರೆ ಏನನುಡಿಸುವರಯ್ಯ? ಭಕ್ತನು ಭವಿಯಾದಡೆ ಏನನುಪಮಿಸುವೆನಯ್ಯ, ಗುಹೇಶ್ವರ?

ದೇಹದೊಳಗೆ ದೇವಾಲಯವಿದ್ದು, ಮತ್ತೆ ಬೇಱೆ ದೇವಾಲಯವೇಕೆ? ಎರಡಕ್ಕೆ ಹೇಳಲಿಲ್ಲಯ್ಯ! ಗುಹೇಶ್ವರ, ನೀನು ಕಲ್ಲಾದರೆ ನಾನೇನಪ್ಪೆನು.

ಸುಖವ ಬಲ್ಲಾತ ಸುಖಿಯಲ್ಲ, ದುಃಖವ ಬಲ್ಲಾತ ದುಃಖಿಯಲ್ಲ, ಸುಖ ದುಃಖವೆರಡನೂ ಬಲ್ಲಾತ ಜ್ಞಾನಿಯಲ್ಲ, ಹುಟ್ಟದ ಮುನ್ನ ಸತ್ತವರ ಕುಱುಹ ಬಲ್ಲಡೆ ಬಲ್ಲ, ಗುಹೇಶ್ವರ.

ಮರಸೊಳಗಣ ಕಿಚ್ಚು ಮರನ ಸುಟ್ಟಂತಾದೆನಯ್ಯ! ಬಯಲ ಗಾಳಿಯ ಪರಿಮಳ ನಾಸಿಕವನಪ್ಪಿದಂತಾದೆನಯ್ಯ. ಕರುವಿನ ಬೊಂಬೆಯನುರಿಗೊಂಡು ನಿಂದಂತಾದೆನಯ್ಯ! ಗುಹೇಶ್ವರನೆಂಬ ಲಿಂಗವ ಪೂಜಿಸಿ ಭವಗೆಟ್ಟೆನಾನಯ್ಯ.

ಅಱಿದಱಿದು ಅಱಿವು ಬಂಜೆಯಾಯಿತ್ತು. ಮಱೆಮಱೆದು ಮಱಹು ಬಂಜೆಯಾಯಿತ್ತು. ಗುಹೇಶ್ವರನೆಂಬ ಶಬ್ದ ಸಿನೆ ಬಂಜೆಯಾಯಿತ್ತು.

ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು, ಬಯಲು ಬಯಲಾಗಿ ಬಯಲಾಯಿತ್ತಯ್ಯ. ಬಯಲ ಜೀವನ, ಬಯಲ ಭಾವನೆ, ಬಯಲು ಬಯಲಾಗಿ ಬಯಲಾಯಿತ್ತಯ್ಯ. ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು. ನಾ ನಿಮ್ಮ ನಂಬಿ ಬಯಲಾದೆ, ಗುಹೇಶ್ವರ.

ಪಾತಾಳದಿಂದತ್ತ ಮಾತ ಬಲ್ಲವರಿಲ್ಲ. ಗಗನದಿಂದ ಮೇಲೆ ಅನುಭಾವ ತಾನಿಲ್ಲ. ಒಳಗಣ ಜ್ಯೋತಿಯ ಬೆಳಗ ಬಲ್ಲವರಿಲ್ಲ. ಹೊಱಗಣ ಹೊಱಗನು ಅಱಿಯಬಲ್ಲವರಿಲ್ಲ. ಹಿಂದಣ ಹಿಂದನು, ಮುಂದಣ ಮುಂದನೂ, ತಂದೆ ತೋಱಿದನು ನಮ್ಮ ಗುಹೇಶ್ವರನು.

ಪಣಿತೆಯೂ ಇದೆ, ಬತ್ತಿಯೂ ಇದೆ. ಜ್ಯೋತಿಯು ಬೆಳಗುವಡೆ ತೈಲವಿಲ್ಲದೆ ಪ್ರಭೆ ತಾನೆಲ್ಲಿಯದೊ? ಗುರುವಿದೆ, ಲಿಂಗವಿದೆ; ಶಿಷ್ಯನ ಸುಜ್ಞಾನವಂಕುರಿಸದನ್ನಕ್ಕರ ಭಕ್ತಿಯೆಲ್ಲಿಯದೋ? ಸೋಹವೆಂಬುದ ಕೇಳಿ, ದಾಸೋಹವ ಮಾಡದಿದ್ದರೆ, ಅತಿಗಳೆವನು ಗುಹೇಶ್ವರ.

ಮನದ ಸುಖವ ಕಂಗಳಿಗೆ ತಂದರೆ, ಕಂಗಳ ಸುಖವ ಮನಕ್ಕೆ ತಂದರೆ, ನಾಚಿತ್ತು, ಮನ ನಾಚಿತ್ತು. ಸ್ಥಾನಪಲ್ಲಟವಾದಡೆ ವ್ರತಕ್ಕೆ ಭಂಗ ಗುಹೇಶ್ವರ.

ವೇದವೆಂಬುದು ಓದಿನ ಮಾತು, ಶಾಸ್ತ್ರವೆಂಬುದು ಸಂತೆಯ ಸುದ್ದಿ, ಪುರಾಣವೆಂಬುದು ಪುಂಡರ ಗೋಷ್ಠಿ, ತರ್ಕವೆಂಬುದು ತಗರ ಹೋರಟೆ, ಭಕ್ತಿ ಎಂಬುದು ತೋಱುಂಬ ಲಾಭ, ಗುಹೇಶ್ವರನೆಂಬುದು ಮೀಱಿದ ಘನವು.

ನಾ ದೇವನಲ್ಲದೆ ನೀ ದೇವನೇ? ನೀ ದೇವನಾದರೆ ಎನ್ನನೇಕೆ ಸಲಹೆ? ಆರೈದು ಒಂದು ಕುಡಿತೆ ಉದಕವನೆಱೆವೆ. ಹಸಿದಾಗ ಒಂದು ತುತ್ತು ಓಗರವ ನಿಕ್ಕುವೆ, ನಾ ದೇವ ಕಾಣಾ, ಗುಹೇಶ್ವರ.

ಸತ್ತು ಹುಟ್ಟಿ, ಕೆಟ್ಟವರೆಲ್ಲರೂ ದೇವಲೋಕಕ್ಕೆ ಹೋದರೆಂಬ ಬಾಲಭಾಷೆಯ ಕೇಳಲಾಗದು. ಸಾಯದ ಮುನ್ನ ಸ್ವಯವನಱಿದಡೆ ದೇವನೊಲಿವ ನಮ್ಮ ಗುಹೇಶ್ವರ.

ಸಾಸವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ. ಘಳಿಗೆಯ ಜೇಟವ ಮಾಡಿಹೆನೆಂಬ ಪರಿಯ ನೋಡಾ! ತನ್ನನಿಕ್ಕಿ ನಿಧಾನವ ಸಾಧಿಸಿಹೆನೆಂದಡೆ ಬಿನ್ನಾಣ ತಪ್ಪಿತ್ತು ಗುಹೇಶ್ವರ.

ಒಳಗ ತೊಳೆಯಲಱಿಯದೆ ಹೊಱಗ ತೊಳೆದು ಕುಡಿವುತ್ತಿದ್ದರಯ್ಯ. ಪಾದೋದಕ ಪ್ರಸಾದವನಱಿಯದೆ ಬಂದ ಬಟ್ಟೆಯಲ್ಲಿ ಮುಳುಗುತ್ತೈದಾರೆ ಗುಹೇಶ್ವರ.

ಕಳ್ಳಗಂಜಿ ಕಾಡ ಹೊಕ್ಕಡೆ, ಹುಲಿ ತಿಂಬುದ ಮಾಬುದೆ? ಹುಲಿಗಂಜಿ ಹುತ್ತವ ಹೊಕ್ಕಡೆ, ಸರ್ಪ ತಿಂಬುದ ಮಾಬುದೆ? ಕಾಲಕ್ಕಂಜಿ ಭಕ್ತನಾದಡೆ, ಕರ್ಮ ತಿಂಬುದ ಮಾಬುದೆ? ಇಂತೀ ಮೃತ್ಯುವಿನ ಬಾಯ ತುತ್ತಾದ ವೇಷ ಡಂಬಕರನೇನೆಂಬೆ, ಗುಹೇಶ್ವರ?

ಕಲ್ಲೊಳಗಣ ಕಿಚ್ಚು ಉರಿಯಬಲ್ಲುದೆ? ಬೀಜದೊಳಗಣ ವೃಕ್ಷ ಉಲಿಯ ಬಲ್ಲುದೆ? ತೋಱಲಿಲ್ಲಾಗಿ ಬೀಱಲಿಲ್ಲಾರಿಗೆಯೂ. ಗುಹೇಶ್ವರ, ನಿಮ್ಮ ನಿಲವನನು ಭವಸುಖಿ ಬಲ್ಲ.

ಬ್ರಹ್ಮ ಘನವೆಂದಡೆ ಬ್ರಹ್ಮನ ನುಂಗಿತ್ತು ಮಾಯೆ! ವಿಷ್ಣು ಘನವೆಂದಡೆ ವಿಷ್ಣುವ ನುಂಗಿತ್ತು ಮಾಯೆ! ರುದ್ರ ಘನವೆಂದಡೆ ರುದ್ರನ ನುಂಗಿತ್ತು ಮಾಯೆ! ತಾ ಘನವೆಂದಡೆ ತನ್ನ ನುಂಗಿತ್ತು ಮಾಯೆ! ಸರ್ವವು ನಿನ್ನ ಮಾಯೆ! ಒಬ್ಬರ ನೊಳಕೊಂಡಿತ್ತೆ ಹೇಳಾ ಗುಹೇಶ್ವರ?

ಸುತ್ತಿ ಸುತ್ತಿ ಬಂದಡಿಲ್ಲ, ಲಕ್ಷಗಂಗೆಯ ಮಿಂದಡಿಲ್ಲ, ತುಟ್ಟತುದಿಯ ಮೇರು ಗಿರಿಯ ಮೆಟ್ಟಿ ಕೂಗಿದಡಿಲ್ಲ, ನಿತ್ಯ ನೇಮದಿಂದ ತನುವ ಮುಟ್ಟಿಕೊಂಡಡಿಲ್ಲ. ನಿಚ್ಚಕ್ಕೆ ನಿಚ್ಚ, ನೆನೆವ ಮನವ, ಅಂದಂದಿಗೆ ಅತ್ತಲಿತ್ತ ಹರಿವ ಮನವ, ಚಿತ್ರದಲ್ಲಿ ನಿಲಿಸಬಲ್ಲಡೆ, ಬಚ್ಚ ಬಱಿಯ ಬೆಳಗು ಗುಹೇಶ್ವರ ಲಿಂಗವು.

ಪರುಷಕ್ಕೆ ಬೆಲೆಯಿಲ್ಲ, ಪ್ರಾಣಕ್ಕೆ ನಿರ್ಮಾಲ್ಯವಿಲ್ಲ, ರುಚಿಗೆ ಎಂಜಲಿಲ್ಲ, ಸುಖಕ್ಕೆ ಅರೋಚಕವಿಲ್ಲ. ಗುಹೇಶ್ವರ, ನಿಮ್ಮ ಶರಣಂಗೆ ಭವವಿಲ್ಲ, ಬಂಧನ ವಿಲ್ಲಯ್ಯ.

# ಅಂಬಿಗರ ಚೌಡಯ್ಯ

ಅಡವಿಯೊಳಗರಸುವಡೆ ಸಿಡಿಗಂಟೆ ತಾನಲ್ಲ, ಮಡುವಿನೊಳಗರಸುವಡೆ ಮತ್ಸ್ಯ ಮಂಡುಕನಲ್ಲ. ಒಡಲ ದಂಡಿಸುವಡೆ ಕೊಡುವ ಸಾಲಿಗನಲ್ಲ. ಅಷ್ಟತನುವಿನೊಳಗೆ ಹುದುಗಿರ್ಪ ಲಿಂಗವ ಸಿಲುಕಿ ನೋಡಿಯೆ ಕಂಡನಂಬಿಗ ಚೌಡಯ್ಯ.

ಗಂಧವ ವಾಯು ಕೊಂಬಾಗ ಅದ ತಂದು ಊದಿದವರಾರು? ಮರಕ್ಕೆ ಸುಗಂಧ ನಿಂದುವಾಗ ಅದ ಬಂಧಿಸಿ ತಂದು ಇರಿಸಿದವರಾರು? ಅವು ತಮ್ಮ ಲಿಂಗದ ಭಾವದಂತೆ ನಿಂದ ನಿಜವೆ ತಾವಾಗಿ, ಬೇರೊಂದು ಸಂಧಿಸಲಿಲ್ಲೆಂದಾತ ನಮ್ಮ ಅಂಬಿಗರ ಚೌಡಯ್ಯನು.

ಅಡವಿಯ ಹೊಗಿಸಿತ್ತು; ನೀರಲದ್ದಿತ್ತು; ಜೆಡೆಗಟ್ಟಿ ಭಸ್ಮವ ತೊಡಿಸಿತ್ತು; ಹಿಡಿದೆತ್ತಿ ಕೇಶವ ಕೀಳಿಸಿತ್ತು; ಹುಡಿಹುಚ್ಚುಗೊಳಿಸಿತ್ತು ಊರೊಳಗೆಲ್ಲ. ಜೆಡಗಿನ ಮಾಯೆಗೆ ನಾಚುವೆನೆಂದನಂಬಿಗರ ಚೌಡಯ್ಯ.

ಕುಡಿವ ನೀರೆನ್ನಬಹುದೇ ನೀರಲದ್ದುವಾಗ? ಅಡುವ ಕಿಚ್ಚೆನ್ನಬಹುದೇ ಮನೆಯ ಸುಡುವಾಗ? ಒಡಲು ತನ್ನದೆನ್ನಬಹುದೇ ಪುಣ್ಯಪಾಪವನುಂಬಾಗ? ಜೀವ ತನ್ನದೆನ್ನಬಹುದೆ ಮಿಕ್ಕು ಹೋಹಾಗ? ಇವನೊಡೆ ಒಡಿದು ಕಳೆ ಎಂದಾತ ಅಂಬಿಗರ ಚೌಡಯ್ಯ.

ಓದಿ ಬೋಧಿಸಿ ಇದಿರಿಂಗೆ ಹೇಳುವನ್ನಬರ ಚದುರತೆಯಲ್ಲವೆ? ತಾ ತನ್ನನರಿದಲ್ಲಿ, ಅರಿಕೆ ಇದಿರಿಗೆ ತೋರದಲ್ಲಿ ಅದೇ ದೇವತ್ವವೆಂದನಂಬಿಗ ಚೌಡಯ್ಯ.

ತಟಾಕ ಒಡೆದಡೆ ಕಟ್ಟುವಡೆವುದಲ್ಲದೆ, ಅಂಬುಧಿ ತುಂಬಿ ಮೇರೆದಪ್ಪಿದಲ್ಲಿ ಕಟ್ಟೆಂಗೆ ಹಿಂಗಿ ನಿಂದುದುಂಟೆ? ಅರಿಯದವಂಗೆ ಅರಿಕೆಯ ಹೇಳಿದಡೆ ಅರಿವನಲ್ಲದೆ, ಅರಿದು ಮರೆದವಂಗೆ ಬೇರೊಂದೆಡೆಯ ಹೇಳಿಹೆನೆಂದಡೆ ಕಡೆ ನಡು ಮೊದಲಿಲ್ಲವೆಂದನಂಬಿಗ ಚೌಡಯ್ಯ.

ಅರಿಯದ ಗುರು ಅರಿಯದ ಶಿಷ್ಯ ಇವರಿಬ್ಬರಿಗೇನಪ್ಪುದೊ? ಕುರುಡ ಕುರುಡನ ಕೈಯ ಪಿಡಿದು ಪಥವ ನಡೆಯಬಲ್ಲರೆ? ತೊರೆಯಲದ್ದಿ ಹೋಹನ ಈಸಲರಿಯದವ ತೆಗೆದಂತಾಯಿತ್ತೆಂದನಂಬಿಗ ಚೌಡಯ್ಯ.

ಮಾಡುವ ಭಕ್ತಂಗೆ ಮನವೆ ಸಾಕ್ಷಿ. ಹೊರಹೊಮ್ಮಿ ಬಯಲ ಹೊರಲೇನು? ಹಮ್ಮಿಲ್ಲದೆ ಮಾಡಿ ಮನದಲ್ಲಿ ಮರುಗದಿರ್ದಡೆ, ಅಲ್ಲಿ ತಾ ಹೆರಹಿಂಗದಿರ್ಪ ಅಂಬಿಗರ ಚೌಡಯ್ಯ.

ಬ್ರಹ್ಮದ ಮಾತನಾಡಿ ಕನ್ನೆಯರ ಕಾಲದೆಸೆಯಲ್ಲಿ ಕುಳಿತಲ್ಲಿ ಪರಬೊಮ್ಮದ ಮಾತು ಅಲ್ಲಿ ನಿಂದಿತ್ತೆಂದನಂಬಿಗ ಚೌಡಯ್ಯ.

ಅಗ್ನಿ ದಿಟವೆಂದಡೆ, ತಾಹುಸಿ ಕಾಷ್ಠವಿಲ್ಲದೆ. ಕಾಷ ದಲ್ಲಡಗಿ ಸುಡದಿಪ್ಪ ಭೇದವನರಿತಡೆ ಪ್ರಾಣಲಿಂಗಿ ಎಂದೆಂಬೆನೆಂದನಂಬಿಗ ಚೌಡಯ್ಯ.

ಚನ್ನಬಸವಣ್ಣ

ಕಟಕ ಸೂತ್ರದ ಗೂಡ ಮಾಡಿಕೊಂಡಿಪ್ಪಲ್ಲಿ,
ಸೂತ್ರಕ್ಕೆ ನೂಲಸು ಅದೆಲ್ಲಿಂದ ತಂದಿತ್ತು?
ರಾಟೆ ಇಲ್ಲ, ಹಂಜಿ ಇಲ್ಲ ;
ತನ್ನಲ್ಲಿಯೇ ನೂಲ ಕಲ್ಪಿಸಿ, ತಾನದ ಮಾಡಿಕೊಂಡು
ಆಡಿ ಅಡಗಿಸಿಕೊಂಡು ಹೋಹಂತೆ,
ತನ್ನ ಲೀಲೆಗೆ ತಾನೇ ಮಾಡಿಕೊಂಡ ವಿಶ್ವಪ್ರಪಂಚ,
ತನ್ನಲ್ಲಿಯೇ ಲಯವನೈದಿಸಿಕೊಂಡು
ಕೂಡಲಚನ್ನಸಂಗಯ್ಯ ನಿರ್ವಯಲಾದನು.

ಗುಬ್ಬಿ ಹೆಜಿರ ಮನೆಯ ತನ್ನ ಮನೆ ಎಂಬಂತೆ,
ಧರೆ, ಧನ, ವನಿತೆಯರು ಎನ್ನವರು ತನ್ನವರೆಂದು
ಹೋರಿಹೋರಿ ಸಾಯುತ್ತಿದೆ ಜೀವ,
ಸರ್ವಕರ್ತೃ ಕೂಡಲಚನ್ನಸಂಗಯ್ಯನೆಂದರಿಯದೆ.

ಹೆಗ್ಗಣವನಿಕ್ಕಿ ನೆಲಗಟ್ಟ ಕಟ್ಟಿದಂತೆ ಆಯಿತೆನ್ನ ಕಾಯಗುಣ ;
ಅಹಂಕಾರ ಪ್ರಬೋಧೆಗಳೇಕಯ್ಯಾ?
ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳನಿಕ್ಕಿ ಎನ್ನ ಮಾಡಿದಿರಿ,
ಎನ್ನ ಬಾಧಿಸಲೆಂದು ಲಿಂಗಯ್ಯ ತಂದೆ !
ಆದಿವ್ಯಾಧಿಗಳೆಲ್ಲವ ಕಳೆದು, ನಿರ್ವಾಣವಪ್ಪ ಪದವ ಕರುಣಿಸಯ್ಯಾ
ಕೂಡಲಚನ್ನಸಂಗಮದೇವಾ.

ಅರಸಿನ ಭಕ್ತಿ ಅಹಂಕಾರದಲ್ಲಿ ಹೋಯಿತ್ತು ;
ಓಲೆಕಾಜನ ಭಕ್ತಿ ಅಲಗಿನ ಮೊನೆಯಲ್ಲಿ ಹೋಯಿತ್ತು ;
ಬಣಜಿಗನ ಭಕ್ತಿ ಬಳ್ಳದ ಮೊನೆಯಲ್ಲಿ ಹೋಯಿತ್ತು ;
ಅಕ್ಕಸಾಲೆಯ ಭಕ್ತಿ ಅಗ್ಗಿಷ್ಟಿಗೆಯಲ್ಲಿ ಹೋಯಿತ್ತು ;
ಶೀಲವಂತನ ಭಕ್ತಿ ಶಂಕೆಯಲ್ಲಿ ಹೋಯಿತ್ತು ;
ಮಾಟಕೂಟದವನ ಭಕ್ತಿ ಅಂಜಿಕೆಯಲ್ಲಿ ಹೋಯಿತತ್ತು ;
ವ್ರತಸ್ಥನ ಭಕ್ತಿ ಪ್ರಪಂಚಿನಲ್ಲಿ ಹೋಯಿತ್ತು.
ಇದು ಕಾರಣ ಕೂಡಲಚನ್ನಸಂಗಯ್ಯ,
ಕಿರಾತರು ಹುಟ್ಟಿ ಪುರಾತರು ಅಡಗಿದರು.

ಎನಗೆ ಜನನವಾಯಿತೆಂಬರು, ಎನಗೆ ಜನನವಿಲ್ಲವಯ್ಯಾ!
ಎನಗೆ ಮರಣವಾಯಿತ್ತೆಂಬರು, ಎನಗೆ ಮರಣವಿಲ್ಲವಯ್ಯಾ!
ಜನನವಾದಡೆ ನಿಮ್ಮ ಪಾದೋದಕಪ್ರಸಾದವ ಕೊಂಬೆ;
ಮರಣವಾದೊಡೆ ನಿಮ್ಮ ಶ್ರೀ ಚರಣವನೈದುವೆ.
ಚಾವನ್ನದ ವೃಕ್ಷ ಊರೊಳಗಿದ್ದಡೇನು, ಅಡವಿಯೊಳಗಿದ್ದಡೇನು?
ಪರಿಮಳವೊಂದೆ, ಕೂಡಲಚನ್ನಸಂಗಮದೇವಾ!

ಮಧುರದ ಗುಣವ ಇರುವೆ ಬಲ್ಲುದು.
ವೇಳೆಯ ಗುಣವ ಕೋಳಿ ಬಲ್ಲುದು.
ಗೋತ್ರದ ಗುಣವ ಕಾಗೆ ಬಲ್ಲುದು–
ಈ ಮನುಷ್ಯ ಜನ್ಮದಲ್ಲಿ ಹುಟ್ಟಿ,
ಶಿವಜ್ಞಾನಿಗಳ ಬರವನರಿಯದಿಪ್ಪಡೆ,
ಆ ಕೋಳಿ, ಕಾಗೆ, ಇರುವೆಗಿಂದಲು ಕರಕಷ್ಟ ಕಾಣಾ,
ಕೂಡಲಚನ್ನಸಂಗಮದೇವಾ.

ಆನೆಯನೇರಿದಡೇನಯ್ಯಾ, ಮಾನವರಿಗೆ ಕೈಯಾನುವಾತ?
ಬೇಡುವದ ಬೇಡಲಾರಿ,
ಏರಿ ಬರ್ಪ ಹೆಮ್ಮೆಯ ನೋಡಾ!
ಭವದ ಬಟ್ಟೆಯಲ್ಲಿ ಬಿದ್ದ ಬ್ರಹ್ಮಚಾರಿಯ ಕಂಡು,
ಕೂಡಲಚನ್ನಸಂಗಯ್ಯ ನಗುತಿರ್ದ.

ಜಂಗಮ ಭಕ್ತನು ಚಿನ್ನದಂತೆ, ಕಬ್ಬಿನಂತೆ, ಶ್ರೀಗಂಧದಂತೆ ಇರಬೇಕು.
ಅದು ಹೇಗೆಂದಡೆ:
ಚಿನ್ನವ ಕಾಸಿದಡೆ, ಕರಗಿಸಿದಡೆ, ಕಡಿದಡೆ, ನಿಗುಚಿದಡೆ
ಬಣ್ಣವಧಿಕವಪ್ಪುದಲ್ಲದೆ ಕಿರಿದಾಗದು;
ಇವರು ನನ್ನಗೇಕೆ ಗಾಸಿಮಾಡಿದರೆನ್ನದು.
ಕಬ್ಬ ಕಡಿದಡೆ, ಖಂಡಿಸಿದಡ್ಡೆ,
ಗಾಣದಲ್ಲಿಕ್ಕಿ ಹಿಂಡಿ ಹಿಳಿದು ಬಂದ ರಸವನಟ್ಟಡೆ,
ನಾನಾ ಪ್ರಕಾರದಲ್ಲಿ ಸಾಯಸಗೊಳಿಸಿದಡೆಯು
ಮಿಗೆ ಮಿಗೆ ಮಧುರವಾಗಿಪ್ಪುದಲ್ಲದೆ ವಿಷವಾಗದು;
ಎನ್ನನೇಕೆ ನೋಯಿಸಿದರೆನ್ನದು.
ಶ್ರೀಗಂಧವ ಕೊರೆದಿದಡೆ, ತರಿದಡೆ, ತೇದಡೆ, ಹೂಸಿದಡೆ,
ಬೆಂಕಿಯೊಳಗೆ ಹಾಕಿದಡೆ,

ಪರಿಮಳ ಘನವಾಗಿಪ್ಪುದಲ್ಲದೆ ದುರ್ಗಂಧವಾಗದು ;
ತನ್ನಲ್ಲಿ ದುಃಖಗೊಳ್ಳದು.

ಪ್ರಜರು ಪ್ರಧಾನಿಯ ಮುಂದೆ ಗಜವನೇಱಲಾಗದು.
ಪ್ರಧಾನಿ ಪಟ್ಟದವರ ಮುಂದೆ ತುರಂಗವನೇಱಲಾಗದು,
ಪಟ್ಟದಾತ ಕೂಡಲಚನ್ನಸಂಗನ ಶರಣರ ಮುಂದೆ ಆಂದೋಳನ
ವೇಱಲಾಗದು ಸಿದ್ಧರಾಮಯ್ಯಾ.

ಊರ ಮುಂದೆ ಸೊಣಕನ ಕಾಣಬಹುದಲ್ಲದೆ,
ಸಿಂಹನ ಕಾಣಬಾರದು.
ಸರದೊಳಗೆ ಕಾಜಿನ ಮಣಿಯ ಕಾಣಬಹುದಲ್ಲದೆ,
ರತ್ನವ ಕಾಣಬಾರದು.
ನದಿಯ ಮುಂದೆ ಬಕನ ಕಾಣಬಹುದಲ್ಲದೆ,
ಹಂಸನ ಕಾಣಬಾರದು.
ಧರೆಯ ಮೇಲೆ ವೇಷಧಾರಿಗಳ ಕಾಣಬಹುದಲ್ಲದೆ,
ಶಿವಜ್ಞಾನಿಗಳ ಕಾಣಬಾರದು
ಕೂಡಲಚನ್ನಸಂಗಮದೇವಾ.

ನಮ್ಮ ಗುರುಗಳ ಸನ್ನಿಧಿಯಲ್ಲಿ ನಿಮ್ಮ ಗುರುಗಳು ಪಲ್ಲಕ್ಕಿಯನೇಱುವರೆಂತು ?
ನಮ್ಮ ಗುರುಗಳ ಸನ್ನಿಧಿಯಲ್ಲಿ ನಿಮ್ಮ ಗುರುಗಳು ಮೆಱೆವರೆಂತು?
ಅವರ ಮೆಱೆವಣಿಗೆಯೆ ಎನ್ನ ಮೆಱೆವಣಿಗೆ,
ಅವರಾನಂದವೇ ಎನ್ನಾನಂದ ಕಾಣಾ,
ಕೂಡಲಚನ್ನಸಂಗನ ಶರಣ, ಸಿದ್ಧರಾಮಯ್ಯಾ !

ಗುರು ತನ್ನ ವಿನೋದಕ್ಕೆ ಸ್ಥಾವರವಾದ ;
ಗುರು ತನ್ನ ವಿನೋದಕ್ಕೆ ಜಂಗಮವಾದ ;
ಗುರು ತನ್ನ ವಿನೋದಕ್ಕೆ ಪ್ರಸಾದವಾದ ;
ಗುರು ತನ್ನ ವಿನೋದಕ್ಕೆ ಗುರುವಾದ ;
ಕೂಡಲಚನ್ನಸಂಗಯ್ಯನಲ್ಲಿ ಏಕಾರ್ಥವಾದ.

ಹೂ-ಮಿಡಿಯ ಹಱಿದು ಹಣ್ಣ ಮಾಡೆಹೆನೆಂದಡೆ, ಫಲಕಾರ್ಯಂ
ಗಳಪ್ಪುವೆ ದೇವಾ?
ಶಶಿಧರನಟ್ಟಿದ ಬೆಸನದೊಳಗೆ ಎವೆಮಾತ್ರ ಪ್ರಮಾಣವೆ ಪೂರೈಸಲು ?
ಲಿಂಗಪ್ರಾಣ ಪ್ರಾಣಲಿಂಗದ ಭೇದವ ನೆಟ್ಟನೆ ತಿಳಿದಲ್ಲದೆ,

ಸಂಗಮನಾಥ 'ನೀ ಬಾರೆ'ಂದೆತ್ತಿಕೊಳ್ಳನು.
ಕೂಡಲಚನ್ನಸಂಗಯ್ಯಂಗೆ ಸವೆಯದೆ ಮುನ್ನೆ ಸಯವಾಗಲುಂಟೆ,
ಹೇಳಾ, ಸಂಗನಬಸವಣ್ಣಾ!

ಬೀಜದಿಂದಾಯಿತ್ತು ಅಂಕುರವೆಂದೆಂಬರು ;
ಆ ಬೀಜಕ್ಕೆ ಅಂಕುರವೆ ಪ್ರಾಣವೆಂದರಿಯರು,
ಲಿಂಗದಿಂದಾಯಿತ್ತು ಜಂಗಮವೆಂದೆಂಬರು,
ಆ ಲಿಂಗಕ್ಕೆ ಜಂಗಮವ ಪ್ರಾಣವೆಂದರಿಯರು, ಕಾಣಾ,
ಕೂಡಲಚನ್ನಸಂಗಮದೇವಾ.

ಭೂಮಿಯೊಳಗೆ ಬೀಜ ಬಿದ್ದಲ್ಲಿ ಕೆಟ್ಟಿತ್ತೆನಬೇಡ;
ಮುಂದಣ ಫಲದೊಳಗರಸಿಕೊ !
ಕಾಸಿ ಕರಗಿಸಿದ ಬಂಗಾರ ಕೆಟ್ಟಿತ್ತೆನಬೇಡ;
ಮುಂದಣ ಬಣ್ಣದೊಳಗರಸಿಕೊ !
ಹೊತ್ತಿಸಿದ ದೀಪ್ತಿ ಕೆಟ್ಟಿತ್ತೆನಬೇಡ,
ಮುಂದಣ ಅಗ್ನಿಯೊಳಗರಸಿಕೊ !
ಲಿಂಗದೊಳಗೆ ಪ್ರಾಣ, ಪ್ರಾಣದೊಳಗೆ ಲಿಂಗ.
ಇದು ಕಾರಣ, ಕೂಡಲಚನ್ನಸಂಗನ ಶರಣರ
ಪಾದಪ್ರತಿಬಿಂಬದೊಳಗರಸಿಕೊ ಸಂಗನ ಬಸವಣ್ಣಾ !

ಅಂದಲಾತನು ಲಿಂಗಸಾಹಿತ್ಯವಾಗಿದ್ದೆ ನಾನು ;
ಪರಮಸುಖಪರಿಣಾಮಿಯಾಗಿದ್ದೆ ನಾನು !
ಸ್ವಾನುಭೂತೌ ನಿವಿಷ್ಟಾಯ ಪ್ರಸನ್ನಃ ಸ್ಯಾತ್‌ಸದಾಶಿವಃ || ಎಂಬುದಾಗಿ
ಸ್ಥಾವರ ಜಂಗಮ ಲಿಂಗ ಉಭಯ ಒಂದಾಗಿ, ಬೇರೆ ಭಿನ್ನಭಾವ
ವಿಚಾರಿಸಲಿಲ್ಲ ;
ಕೂಡಲಚನ್ನಸಂಗಯ್ಯನಲ್ಲಿ ಸ್ವತಂತ್ರವಾಗಿದ್ದೆ ಸಹಜ.

ಉಂಬ ಬಾಯೊಳು ಊಡಿಸಿಕೊಂಬ ಬಾಯಿಯಿದೇನಯ್ಯಾ ?
ನೋಡುವ ನಯನದೊಳು ನೋಡಿಸಿಕೊಂಬ ನಯನವಿದೇನಯ್ಯಾ ?
ಕೇಳುವ ಶ್ರೋತ್ರದೊಳು ಕೇಳಿಸಿಕೊಂಬ ಶ್ರೋತ್ರವಿದೇನಯ್ಯಾ ?
ವಾಸಿಸುವ ಘ್ರಾಣದೊಳು ವಾಸನೆಯ ಕೊಂಬ ಘ್ರಾಣವಿದೇನಯ್ಯಾ ?
ಮುಟ್ಟುವ ಸ್ಪರ್ಶನದೊಳು ಮುಟ್ಟಿಸಿಕೊಂಬ ಸ್ಪರ್ಶನವಿದೇನಯ್ಯಾ ?
ಇಂತಿವರೊಳಗೆ ನೀನಿಪ್ಪ ಅನುವನಾರು ಬಲ್ಲರು,
ಕೂಡಲಚನ್ನಸಂಗಮದೇವಾ ?

ಆರಾದಡೆಯೂ ನಿಮ್ಮ ನೆನೆವರಯ್ಯಾ, ನಾ ನಿಮ್ಮ ನೆನೆವನಲ್ಲ,
ಅದೇನು ಕಾರಣವೆಂದಡೆ, ನೆನೆವ ಎನ್ನ ಮನ ನೀವೆಯಾದಿರಾಗಿ,
ಆರಾದಡೆಯೂ ನಿಮ್ಮ ಪೂಜಿಸುವರಯ್ಯಾ, ನಾ ನಿಮ್ಮ ಪೂಜಿಸುವನಲ್ಲ.
ಅದೇನು ಕಾರಣವೆಂದಡೆ, ಎನ್ನ ತನುವಿಂಗೆ ನೀವೆ ಪೂಜೆಯಾದಿರಾಗಿ.
ಆರಾದಡೆಯೂ ನಿಮಗರ್ಪಿಸುವರಯ್ಯಾ, ನಾ ನಿಮಗರ್ಪಿಸುವನಲ್ಲ,
ಅದೇನು ಕಾರಣವೆಂದಡೆ, ಎನ್ನ ಸರ್ವಾಂಗವೂ ನಿಮಗರ್ಪಿತವಾಯಿತ್ತಾಗಿ.
ಇದು ಕಾರಣ, ಭಕ್ತದೇಹಿಕದೇವ, ದೇವದೇಹಿಕಭಕ್ತನೆಂಬ ಶ್ರುತಿಯನಱಿದು,
ನಿಮ್ಮ ಮುಟ್ಟಿ ಅಭಿನ್ನನಾದೆನು, ಕೂಡಲಚನ್ನಸಂಗಮದೇವಾ.

ಊಹಿಸಲಱಿಯೆ, ಉತ್ತರವನಱಿಯೆ,
ದೇವನನಱಿಯೆ, ದೇಹಿಕನನಱಿಯೆ,
ನಾನೆನ್ನಲಱಿಯೆ, ನೀನೆನ್ನಲಱಿಯೆ,
ಕೂಡಲಚನ್ನಸಂಗಮದೇವಾ ಎನ್ನಲಱಿಯೆ !

ಅಱಿಯಲಿಲ್ಲದ ಅಱಿವು, ಮಱೆಯಲಿಲ್ಲದ ಮಱಹು,
ನೋಡಲಿಲ್ಲದ ನೋಟ ಬೆರಸಲಿಲ್ಲದ ಬೆಱಗು ನಿಂದುದು
ಕೂಡಲಚನ್ನಸಂಗಯ್ಯನಲ್ಲಿ ಲಿಂಗೈಕ್ಯನು.

ಬಸವಣ್ಣ

ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜತುಂಬಿ,
ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?
ತನುವಿನೊಳಗೆ ಹುಸಿತುಂಬಿ, ಮನದೊಳಗೆ ವಿಷಯ ತುಂಬಿ,
ಮನೆಯೊಳಗೆ ಮನೆಯೊಡೆಯನಿಲ್ಲಾ–ಕೂಡಲಸಂಗಮದೇವ !

ನಂಬರು, ನೆಚ್ಚರು, ಬರಿದೆ ಕರೆವರು ;
ನಂಬಲರಿಯರು ಲೋಕದ ಮನುಜರು
ನಂಬಿ ಕರೆದೊಡೆ 'ಓ' ಎನ್ನನೆ ಶಿವನು ?
'ನಂಬದೆ ನಚ್ಚದೆ ಬರಿದೆ ಕರೆವರ
ಕೊಂಬ ಮೆಟ್ಟಿ ಕೂಗೆಂ'ದ ನಮ್ಮ ಕೂಡಲಸಂಗಮದೇವ !

ಲೋಕದ ಡೊಂಕ ನೀವೇಕೆ ತಿದ್ದುವಿರಿ ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ !
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ !
ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ
ಕೂಡಲಸಂಗಮದೇವ

ಹಾವಿನ ಬಾಯ ಕಪ್ಪೆ ಹಸಿದು
ಹಾರುವ ನೊಣಕ್ಕೆ ಆಸೆಮಾಡುವಂತೆ
ಶೂಲವನೇರುವ ಕಳ್ಳನು ಹಾಲುತುಪ್ಪವ ಕುಡಿದು
ಮೇಲೇಸುಕಾಲ ಬದುಕುವನೊ ?
ಕೆಡವೊಡಲ ನಚ್ಚಿ, ಕಡುಹುಸಿಯನೆ ಹುಸಿದು, ಒಡಲ ಹೊರೆವರ
ಕೂಡಲಸಂಗಮದೇವನವರನೊಲ್ಲ, ಕಾಣಿರಣ್ಣಾ !

ಹಾವು ತಿಂದವರ ನುಡಿಸಬಹುದು ;
ಗರಹೊಡೆದವರ ನುಡಿಸಬಹುದು ;
ಸಿರಿಗರ ಹೊಡೆದವರ ನುಡಿಸಲು ಬಾರದು, ನೋಡಯ್ಯಾ !
ಬಡತನವೆಂಬ ಮಂತ್ರವಾದಿ ಹೊಗಲು ಒಡನೆ ನುಡಿವರು ,
ಕೂಡಲಸಂಗಮದೇವಾ !

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ !
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ.
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ,
ಕೂಡಲಸಂಗಮದೇವಾ !

ನಾದಪ್ರಿಯ ಶಿವನೆಂಬರು—ನಾದಪ್ರಿಯ ಶಿವನಲ್ಲವಯ್ಯಾ !
ವೇದಪ್ರಿಯ ಶಿವನೆಂಬರು—ವೇದಪ್ರಿಯ ಶಿವನಲ್ಲವಯ್ಯಾ :
ನಾದವಮಾಡಿದ ರಾವಳಂಗೆ ಅರೆ ಆಯುಷ್ಯವಾಯಿತ್ತು
ವೇದವನೋದಿದ ಬ್ರಹ್ಮಂಗೆ ಶಿರಹೋಯಿತ್ತು !
ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ ;
ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ.

ಕಲ್ಲನಾಗರ ಕಂಡರೆ ಹಾಲನೆರೆಯೆಂಬರು :
ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ !
ಉಂಬ ಜಂಗಮ ಬಂದರೆ ನಡೆಯೆಂಬರು :
ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ !
ನಮ್ಮ ಕೂಡಲಸಂಗಮನ ಶರಣರ ಕಂಡುದಾಸೀನ ಮಾಡಿದರೆ
ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ !

ಭಕ್ತಿಎಂಬುದ ಮಾಡಬಾರದು :
ಕರಗಸದಂತೆ ಹೋಗುತ್ತ ಕೊಯ್ವುದು, ಬರುತ್ತಕೊಯ್ವುದು !
ಘಟಸರ್ಪನಲ್ಲಿ ಕೈದುಡುಕಿದರೆ ಹಿಡಿವುದ ಮಾಣ್ಬುದೆ
ಕೂಡಲಸಂಗಮದೇವಾ !

ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ.
ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ,
ಇದೇ ಅಂತರಂಗಶುದ್ಧಿ ಇದೇ ಬಹಿರಂಗಶುದ್ಧಿ !
ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ !

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ !
ಸತ್ಯವ ನುಡಿವುದೆ ದೇವಲೋಕ ;
ಮಿಥ್ಯವ ನುಡಿವುದೆ ಮರ್ತ್ಯಲೋಕ

ಆಚಾರವೇ ಸ್ವರ್ಗ, ಅನಾಚಾರವೇ ನರಕ;
ಕೂಡಲಸಂಗಮದೇವಾ, ನೀವೇ ಪ್ರಮಾಣು!

ದಯವಿಲ್ಲದ ಧರ್ಮವದೇವುದಯ್ಯಾ?
ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿಯೂ;
ದಯವೇ ಧರ್ಮದ ಮೂಲವಯ್ಯ:
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ!

ಪುಣ್ಯ ಪಾಪವೆಂಬುವು ತಮ್ಮಿಷ್ಟ ಕಂಡಿರೇ:
'ಅಯ್ಯಾ' ಎಂದಡೆ ಸ್ವರ್ಗ: ' ಎಲವೋ ' ಎಂದಡೆ ನರಕ!
'ದೇವಾ', ಭಕ್ತಜಯಾ, ಜೀಯಾ ಎಂಬ ನುಡಿಯೊಳಗೆ
ಕೈಲಾಸವಿದ್ದುದೇ, ಕೂಡಲಸಂಗಮದೇವಾ.

ಬೆಲ್ಲವ ತಿಂದ ಕೋಡಗದಂತೆ ಸಿಹಿಯ ನೆನೆಯದಿರಾ, ಮನವೇ
ಕಬ್ಬುತಿಂದ ನರಿಯಂತೆ ಹಿಂದಕ್ಕೆಳಸದಿರಾ, ಮನವೇ!
ಗಗನವನಡರಿದ ಕಾಗೆಯಂತೆ ದೆಸೆದೆಸೆಗೆ ಹಂಬಲಿಸದಿರಾ, ಮನವೇ!
ಕೂಡಲಸಂಗನ ಶರಣರಕಂಡು ಲಿಂಗವೆಂದೇ ನಂಬು ಮನವೇ.

ಊರಸೀರೆಗೆ ಅಸಗ ತಡಬಡಿ ಹಡೆದಂತೆ
ಹೊನ್ನೆನ್ನದು, ಹೆಣ್ಣೆನ್ನದು ಮಣ್ಣೆನ್ನದೆಂದು ಮರುಳಾದೆ:
ನಿಮ್ಮನರಿಯದ ಕಾರಣ ಕೆಮ್ಮನೆ ಕೆಟ್ಟೆ,
ಕೂಡಲಸಂಗಮದೇವಾ.

ಎನ್ನಿಂದ ಕಿರಿಯರಿಲ್ಲ; ಶಿವಭಕ್ತರಿಂದ ಹಿರಿಯರಿಲ್ಲಾ,
ನಿಮ್ಮ ಪಾದಸಾಕ್ಷಿ, ಎನ್ನ ಮನಸಾಕ್ಷಿ,
ಕೂಡಲಸಂಗಮದೇವಾ, ಎನಗಿದೇ ದಿಬ್ಯ.

ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ಮೂರುತಿ ತುಂಬಿ,
ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ಕೀರುತಿ ತುಂಬಿ,
ಕೂಡಲಸಂಗಮದೇವಾ, ನಿಮ್ಮ ಚರಣಕಮಲದಲಾನು ತುಂಬಿ.

ಎನ್ನ ಕಾಯುವ ದಂಡಿಗೆಯ ಮಾಡಯ್ಯ.
ಎನ್ನ ಶಿರವ ಸೋರೆಯ ಮಾಡಯ್ಯ,
ಎನ್ನ ನರವ ತಂತಿಯ ಮಾಡಯ್ಯ,
ಎನ್ನ ಬೆರಳ ಕಡ್ಡಿಯ ಮಾಡಯ್ಯ,

ಬತ್ತೀಸ ರಾಗವ ಹಾಡಯ್ಯ
ಉರದಲೊತ್ತಿ ಬಾರಿಸು ಕೂಡಲಸಂಗಮದೇವಾ.

ಮಾರಿ ಮಸಣಿಯೆಂಬುವು ಬೇರಿಲ್ಲ ಕಾಣಿರೋ !
ಮಾರಿಯೆಂಬುದೇನು ? ಕಂಗಳು ತಪ್ಪಿನೋಡಿದರೆ ಮಾರಿ
ನಾಲಗೆ ತಪ್ಪಿ ನುಡಿದರೆ ಮಾರಿ,
ನಮ್ಮ ಕೂಡಲಸಂಗಮದೇವರ ನೆನಹ ಮರೆದರೆ ಮಾರಿ.

ಮಾಡುವಾತ ನಾನಲ್ಲಯ್ಯ, ನೀಡುವಾತ ನಾನಲ್ಲಯ್ಯ
ಬೇಡುವಾತ ನಾನಲ್ಲಯ್ಯ, ನಿಮ್ಮ ಕಾರುಣ್ಯವಲ್ಲದೆ ; ಎಲೆ ದೇವಾ !
ಮನೆಯ ತೊತ್ತಲಸಿದರೆ ಒಡತಿ ಮಾಡಿಕೊಂಬಂತೆ
ನಿನಗೆ ನೀ ಮಾಡಿಕೋ ಕೂಡಲಸಂಗಮದೇವಾ.

ಕಣ್ಗಳು ತುಂಬಿದ ಬಳಿಕ ನೋಡಲಿಲ್ಲ,
ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ,
ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ,
ಮನ ತುಂಬಿದ ಬಳಿಕ ನೆನೆಯಲಿಲ್ಲ,
ಮಹಂತ ಕೂಡಲಸಂಗಮದೇವನ.

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ;
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮಕುಟ,
ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ,
ಕೂಡಲಸಂಗಮದೇವಯ್ಯ,
ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ.

ನುಡಿದರೆ ಮುತ್ತಿನ ಹಾರದಂತಿರಬೇಕು,
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು,
ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು,
ನುಡಿದರೆ ಲಿಂಗಮೆಚ್ಚಿ 'ಅಹುದಹುದೆ'ನಬೇಕು,
ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲಸಂಗಮದೇವನೆಂತೊಲಿವನಯ್ಯ !

ಉಳ್ಳವರು ಶಿವಾಲಯವ ಮಾಡುವರು,
ನಾನೇನಮಾಡುವೆ? ಬಡವನಯ್ಯ,
ಎನ್ನ ಕಾಲೇ ಕಂಭ, ದೇಹವೇ ದೇಗುಲ,
ಸಿರ ಹೊನ್ನ ಕಳಶವಯ್ಯ,
ಕೂಡಲಸಂಗಮದೇವ, ಕೇಳಯ್ಯ,
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ !

"ಬಸವ ಬಾರೈ, ಮರ್ತ್ಯಲೋಕದೊಳಗೆ
ಭಕ್ತರುಂಟೇ? ಹೇಳಯ್ಯ"
ಮತ್ತಾರೂ ಇಲ್ಲಯ್ಯ, ಮತ್ತಾರೂ ಇಲ್ಲಯ್ಯ,
ಮತ್ತಾರೂ ಇಲ್ಲಯ್ಯ, ನಾನೊಬ್ಬನೇ ಭಕ್ತನು
ಮರ್ತ್ಯಲೋಕದೊಳಗಣ ಭಕ್ತರೆಲ್ಲರೂ ಜಂಗಮಲಿಂಗ !
ನೀನೇ ! ಅಯ್ಯ ಕೂಡಲಸಂಗಮದೇವಾ.

ಬಯಲ ರೂಪ ಮಾಡಬಲ್ಲಾತನೇ ಶರಣನು ;
ಆ ರೂಪ ಬಯಲ ಮಾಡಬಲ್ಲಾತನೇ ಲಿಂಗಾನುಭಾವಿ.
ಬಯಲರೂಪ ಮಾಡಲರಿಯದಿದ್ದರೆ ಎಂತು ಶರಣನೆಂಬೆ?
ಆ ರೂಪ ಬಯಲ ಮಾಡಲರಿಯದಿದ್ದರೆ
ಎಂತು ಲಿಂಗಾನುಭಾವಿಯೆಂಬೆ ?
ಈ ಉಭಯವೊಂದಾದರೆ ನಿಮ್ಮಲ್ಲಿ ತೆರಹುಂಟೇ
ಕೂಡಲಸಂಗಮದೇವಾ.

## ಮಡಿವಾಳ ಮಾಚಯ್ಯ

ಎತ್ತೆತ್ತ ನೋಡಿದಡೆ ಅತ್ತತ್ತ ಬಸವನೆಂಬ ಬಳ್ಳಿ. ಎತ್ತಿ ನೋಡಿದಡೆ ಲಿಂಗ ವೆಂಬ ಗೊಂಚಲು. ಒತ್ತಿ ಹಿಂಡಿದಡೆ ಭಕ್ತಿಯೆಂಬ ರಸವಯ್ಯ. ಆಯತವು, ಸ್ವಾಯತವು, ಸನ್ನಿಹಿತವು ಬಸವಣ್ಣನಿಂದ. ಇದ ಬಲ್ಲರೆ ನೀವು ಹೇಳಿರೆ, ಇತ್ತ ಬಲ್ಲರೇ ನೀವು ಕೇಳಿರೇ. ಬಸವಾ ಬಸವಾ ಎಂದವನ ಭಕ್ತಿ ಶೂನ್ಯ ಕಾಣಾ ಕಲಿದೇವರದೇವಾ.

ದಾಸೋಹವೆಂಬನ್ನಬರ ಈಶ್ವರ ಪೂಜೆಯಲಾಚಾರದಲ್ಲಿರಬೇಕು. ಮಾಡೆ ನೆಂಬ ನೇಮಬೇಡ. ಮಾಡಿಹೆನೆಂಬ ಕೃತ್ಯಬೇಡ. ಭಾವವಳವಟ್ಟಲ್ಲಿ ಭಾವ ಶುದ್ಧವಾಯಿತ್ತು.

ಅರಿಸಿನ ಭಕ್ತಿ ಅಹಂಕಾರದಲ್ಲಿ ಹೋಯಿತ್ತು. ಬ್ರಾಹ್ಮಣನ ಭಕ್ತಿ ಮುಟ್ಟು ತಟ್ಟಿನಲ್ಲಿ ಹೋಯಿತ್ತು. ಶೀಲವಂತನ ಭಕ್ತಿ ಪ್ರಪಂಚಿನಲ್ಲಿ ಹೋಯಿತ್ತು. ಸೆಟ್ಟಿಯ ಭಕ್ತಿ ಕುಟಿಲ ವ್ಯಾಪಾರದಲ್ಲಿ ಹೋಯಿತ್ತು. ನೀವು ಕೇಳಿರೋ. ಇಂಥವರ ಭಕ್ತಿಗೆ ಊರಿಂದ ಹೊರಗಣ ಡೊಂಬನೇ ಸಾಕ್ಷಿ ಕಾಣಾ ಕಲಿದೇವರದೇವಾ.

ಹುಟ್ಟದ ಬೀಜವಿದ್ದಡೇನು ಧರೆಯೊಳಗೆ? ಅಟ್ಟುಣಬಾರದ ಮಡಿಕೆ ಇದ್ದಡೇ ನಯ್ಯಾ ಮನೆಯೊಳಗೆ? ಶಿವ ನಿಮ್ಮ ಮುಟ್ಟದ ಮನವಿದ್ದಡೇನಯ್ಯಾ ತನುವಿ ನೊಳಗೆ? ಕೆಚ್ಚಲ ಕಚ್ಚಿದ ಉಣ್ಣೆ ಬಲ್ಲುದೇ ಕ್ಷೀರದ ರುಚಿಯನು? ಬಚ್ಚಲೊಳಗಣ ಬಾಲಹುಳು ಬಲ್ಲುದೇ ನಿಚ್ಚಳದ ನೀರಿನನುಭವವ? ನಿಚ್ಚ ನಿಚ್ಚಲೋದುವ ಗಿಳಿ ಬಲ್ಲುದೇ ತನಗೆ ಬಹ ಬೆಕ್ಕಿನ ಬಾಧೆಯ? ಪುಚ್ಚಗೊಂಡ ನಾಯಿ ಬಲ್ಲುದೇ ಸಾಕಿ ದೊಡೆಯನ? ಇದು ಕಾರಣ ಒಡಲ ಪಡೆದರೇನು? ಮಡದಿಯರ ನೆರಹಿದರೇನು? ಒಡವೆಯ ಗಳಿಸಿದರೇನು? ಶಿವನೇ ನಿಮ್ಮನರಿಯದ ಮನುಜನ ಒಡಲೆಂಬುದು ಹೊಲೆ ಜೋಗಿಯ ಕೈಯ ಒಡೆದ ಸೋರೆಯಂತೆ ಕಾಣಾ ಕಲಿದೇವರದೇವಾ.

ತನಗನ್ಯವಾದುದ ನೋಡಿದಡೆ ಭವಿಸಂಗ. ಸತ್ಯರು ಒಪ್ಪಿದುದನೊಪ್ಪದಿರ್ದಡೆ ಭವಿಸಂಗ. ಮಾಡಿಕೊಂಡ ವ್ರತವ ಮೀರಿದಡೆ ಭವಿಸಂಗ. ತಾ ಮಾಡಿದ ಭಕ್ತಿಯ ನಾಡಿಕೊಂಡಲ್ಲಿ ಭವಿಸಂಗ. ಇಂತಿವನರಿದಡೆ ಸದ್ಭಕ್ತಿ ಕಲಿದೇವರದೇವಾ.

ಉಂಡರೆ ಭೂತನೆಂಬರು, ಉಣದಿರ್ದಡೆ ಚಕೋರಿ ಎಂಬರು. ಊರೊಳಗಿ ರ್ದಡೆ ಸಂಸಾರಿ ಎಂಬರು, ಅಡವಿಯೊಳಗಿರ್ದಡೆ ಮರ್ಕಟನೆಂಬರು, ಮಾತನಾಡಿದರೆ ಪಾಪಕರ್ಮಿ ಎಂಬರು, ಮಾತನಾಡದಿರ್ದಡೆ ಮುಸುಕಕರ್ಮಿ ಎಂಬರು, ಮಲಗ

ದಿರ್ದಡೆ ಚೋರನೆಂಬರು, ಮಲಗಿರ್ದಡೆ ಜಡದೇಹಿ ಎಂಬರು. ಇಂತೀ ವಸುಧೆಯೊಳಗೆ ಎಂಟು ವಿಧದ ಕಳೆಯಲಳವಲ್ಲ ಕಾಣಾ ಕಲಿದೇವರದೇವಾ.

ವಾಯುಗುಣವ ಸರ್ಪ ಬಲ್ಲುದು. ಮಧುರ ಗುಣವನಿರುಹೆ ಬಲ್ಲದು. ಗೋತ್ರದ ಗುಣವ ಕಾಗೆ ಬಲ್ಲುದು. ವೇಳೆಯ ಗುಣವ ಕೋಳಿಬಲ್ಲುದು. ಇದು ಕಾರಣ ಮನುಷ್ಯ ಜನ್ಮದಲ್ಲಿ ಬಂದು ಶಿವಜ್ಞಾನವನರಿಯದಿದ್ದರೆ ಆ ಕಾಗೆ ಕೋಳಿಗಳಿಂದ ಕರಕಷ್ಟ ಕಾಣಾ ಕಲಿದೇವರದೇವಾ.

ಉಟ್ಟ ಸೀರೆಯ ಹರಿದು ಹೋದಾತ ನೀನಲ್ಲ ಬಸವಣ್ಣ. ಮೆಟ್ಟಿದ ಕೆರಹ ಕಳೆದು ಹೋದಾತ ನೀನಲ್ಲ ಬಸವಣ್ಣ. ಕಟ್ಟಿದ ಮುಡಿಯ ಬಿಟ್ಟುಹೋದಾತ ನೀನಲ್ಲ ಬಸವಣ್ಣ. ಸೀಮೆ ಸಂಬಂಧವ ತಪ್ಪಿಹೋದಾತ ನೀನಲ್ಲ ಬಸವಣ್ಣ. ಲಿಂಗಕ್ಕೆ ಮಾಡಿದುದ ಸೋಂಕದೆ ಹೋದೆಯಲ್ಲ ಬಸವಣ್ಣ. ಜಂಗಮಕ್ಕೆ ಮಾಡಿದ ಮಾಟವ ಕೈಯ್ಯಲ್ಲಿ ಹಿಡಿದುಕೊಂಡು ಹೋದೆಯಲ್ಲ ಬಸವಣ್ಣ. ಬೆಳಗನುಟ್ಟು ಬಯಲಾಗಿ ಹೋದೆಯಲ್ಲ ಬಸವಣ್ಣ. ಬಸವಣ್ಣಂಗೆ ಶರಣೆಂಬೆ. ಪಥವನೇ ತೋರು ಕಂಡಾ ಕಲಿದೇವರದೇವಾ.

ತನುವಳಿಯಿತ್ತು ; ಮನವಳಿಯಿತ್ತು ; ಭಾವವಳಿಯಿತ್ತು ; ಎನ್ನ ಬಯಕೆಯಳಿಯಿತ್ತು ; ನಿಜವೆಂಬುದುಳಿಯಿತ್ತು. ನಾಮ ಸೀಮೆ ಬಯಲಲ್ಲಿ ಬೆರಸಿ ಕಲಿದೇವರ ದೇವನಲ್ಲಿ ಬೇರಿಲ್ಲದಿರ್ದೆನು.

ಎನ್ನಾಯತ ಅವಧಾನ ಕೆಟ್ಟಿತ್ತಯ್ಯಾ. ಎನ್ನಸ್ವಾಯತ ಸಂದಳಿಯಿತ್ತಯ್ಯಾ. ಎನ್ನ ಸಮಾಧಾನ ತರಹರವಾಯಿತ್ತಯ್ಯಾ. ಎನ್ನರಿವು ನಿಜದಲ್ಲಿ ನಿಃಷ್ಪತ್ತಿಯಾಯಿತ್ತಯ್ಯಾ. ಕಲಿದೇವರದೇವಯ್ಯ, ನಿಮ್ಮಲ್ಲಿ ಶಬ್ದ ಮುಗ್ಧನಾಗಿರ್ದೆನು.

# ಉರಿಲಿಂಗದೇವ

ಎಮ್ಮ ನಲ್ಲನಪ್ಪ ನಲ್ಲರಿಗೆ ನಲ್ಲನು. ವಂಚನೆಗೆ ನೆರೆಯನು, ನಿಷ್ಪಂಚನೆಗೆ ನೆರೆವನು ಉರಿಲಿಂಗದೇವನು.

ಇನಿಯನೆನಗೆ ನೀನು. ಇನ್ನೇನನೊಂದ ನಾನಱಿಯೆ. ನೀ ನುಡಿಸಲು ನುಡಿವೆನು, ನಡಸಲು ನಡೆವೆನು. ನೀನಲ್ಲದಱಿಯೆನು ನಲ್ಲ ನೀ ಕೇಳಾ. ನೀನೇ ಗತಿ, ನೀನೇ ಮತಿ. ನಿನ್ನಾಣೆಯಯ್ಯ ಉರಿಲಿಂಗದೇವಾ.

ಎನ್ನ ನಲ್ಲನೆನ್ನನೊಲ್ಲದಿದ್ದಡೆ ನಾ ಎಲ್ಲಿ ಅಱಸುವೆನವ್ವಾ? ಗಂಗೆಯ ನೋನೆನು, ಗೌರಿಯ ನೋನೆನು, ಎಲ್ಲಿ ಅಱಸುವೆನವ್ವಾ? ಎನ್ನ ಅಂತರಂಗದ ಆತ್ಮಜ್ಯೋತಿ ಉರಿಲಿಂಗದೇವಾಯೆಂದು ಇಲ್ಲಿಯೇ ಅಱಸುವೆನವ್ವಾ.

ನಲ್ಲನ ಕೂಡುವ ಭರದಲ್ಲಿ ಎನ್ನುವನಿದಿರುವನೇನೆಂದಱಿಯೆನು. ನಲ್ಲನ ಕೂಡುವಾಗಳು ಎನ್ನುವ ನಲ್ಲನನೇನೆಂದಱಿಯೆನು. ಉರಿಲಿಂಗದೇವನ ಕೂಡಿದ ಬಳಿಕ ನಾನೊ ತಾನೊ ಏನೆಂದಱಿಯೆನು.

ಹಾಡುವೆ ನಲ್ಲನ, ಬೇಡುವೆ ನಲ್ಲನ ಕೂಡುವೆ ನಲ್ಲನ ನಿಚ್ಚ ನಿಚ್ಚ ನೋಡಾ. ಅವನೆ ಸಖನೆನಗೆ, ಅವನೆ ಸುಖವೆನಗೆ. ಅವನ ಪ್ರಾಣವು ಕೇಳೆಲೆ ಕೆಳದಿ. ಉರಿಲಿಂಗ ದೇವನೆನಗೆ ಸಂಜೀವನ ಕೆಳದಿ.

ನೆನಹಿನ ನಲ್ಲನು ಮನೆಗೆ ಬಂದಡೆ ನೆನೆವುದಿನ್ನಾರನು ಹೇಳವ್ವಾ? ನೆನವ ಕ್ರೀಯಲ್ಲಿ ನೆರದು ಸುಖಿಯಹುದಲ್ಲದೆನೆ ನೆವುದಿನ್ನಾರನು ಹೇಳವ್ವಾ? ನೆನಹಿನ ನಲ್ಲ ಉರಿಲಿಂಗದೇವನ ಕಂಡ ಬಳಿಕ ನೆನೆವುದಿನ್ನಾರನು ಹೇಳವ್ವಾ?

ಒಬ್ಬನೆ ಗರುವನಿವ, ಒಬ್ಬನೆ ಚೆಲುವನಿವ, ಒಬ್ಬನೆ ಧನಪತಿ ಕೇಳಾ ಕೆಳದಿ. ಇವಗೆ ಹಿರಿಯರಿಲ್ಲ, ಇವಗೆ ಒಡೆಯರಿಲ್ಲ. ಇಂತಪ್ಪ ನಲ್ಲನು ಲೇಸು ಕಾಣೆಲಗೆ, ನಾವೆಲ್ಲರೊಂದಾಗಿ ಹಿಡಿದು ಬಿಡದಿರೆ ಬಿಡಿಸುವರಿನ್ನಿಲ್ಲ ಉರಿಲಿಂಗದೇವನಾ.

ಆದಯ್ಯ

ಬಾಣತಿ ರಕ್ಕಸಿಯಾದರೆ, ಮಕ್ಕಳ ಕಾಯುವವರಿನ್ನಾರಯ್ಯಾ ?
ಸೋಜಿಗದ ಮಾಯೆ ಸಟೆಯಪ್ಪ ಜಗವ ಪಿಡಿದಿರಲು,
ಆ ಜಗವನಾಮಾಯೆಯ ಹಸ್ತದಿಂ
ತೊಲಗಿಸುವರಿನ್ನಾರಯ್ಯಾ ?
ನಾ ಬಲ್ಲೆ, ನಾ ಹಿರಿಯನೆಂಬವರೆಲ್ಲರು ಮಾಯೆಯ
ಅಣಲೊಳಗೆ ಸಿಕ್ಕಿದರು.
ಹರಿಹರ ಬ್ರಹ್ಮಾದಿಗಳೆಲ್ಲರು ಮಾಯೆಯ ಕೈಯ
ಶಿಶುವಾದರಯ್ಯಾ !
ಸೌರಾಷ್ಟ್ರ ಸೋಮೇಶ್ವರಾ' ನಿನ್ನ ಮಾಯೆ ಅಖಿಲಕ್ಕೆ
ತಾನರಸಿಯಾದಳಯ್ಯಾ !

ಬಲ್ಲೆನೆಂಬುದು ಮಾಯೆ, ಅರಿವೆನೆಂಬುದು ಮಾಯೆ,
ಒಲ್ಲೆನೆಂಬುದು ಮಾಯೆ, ಒಲಿವೆನೆಂಬುದು ಮಾಯೆ
ಜೀವನೆಂಬುದು ಮಾಯೆ, ಮುಕ್ತನೆಂಬುದು ಮಾಯೆ
ಸತಿ ಸುತ ಪಿತ ಮಾತೆಯವರೆಲ್ಲರು ಮಾಯೆ
ಭೃತ್ಯ ಭ್ರಾತ್ರಾದಿಗಳೆಲ್ಲರು ಮಾಯೆ
ಆನೆಂಬುದು ಮಾಯೆ, ನೀನೆಂಬುದು ಮಾಯೆ
ಸೌರಾಷ್ಟ್ರ ಸೋಮೇಶ್ವರ ತಾನೆಂಬುದು ಮಾಯೆ.

ಕನಸಿಂಗೆ ಕಲ್ಪನೆ ಇಲ್ಲ, ನೆನೆಹಿಂಗೆ ಸೂತಕವಿಲ್ಲ.
ಮನಸಿಂಗೆ ಪಾತಕವಿಲ್ಲ, ಕಾಯಕ್ಕೆ ಬಂಧನವಿಲ್ಲ,
ಜೀವಂಗೆ ಮೋಕ್ಷವಿಲ್ಲ.
ಇಲ್ಲದ ಜಗ ಇಲ್ಲವೆಯಿಂದ ತೋರುವದು ಅಡಗುವದು
ತೋರದೆ ಅಡಗದೆ ಇಪ್ಪ ಮಹಾಘನ ಸೌರಾಷ್ಟ್ರ
ಸೋಮೇಶ್ವರಲಿಂಗವ ಕಂಡೆ.

ತೆರೆಯಡಗಿದ ಸಾಗರದೊಳಗೆ ಆಕಾಶ ಬಿಂಬಿಸಿ,
ಅಂಬರದ ಜಲವನೊಳಕೊಂಡಂತೆ
ದಿನಮಣಿ, ಮಣಿ ಮುಖದಲ್ಲಿ ಹೊಳೆಯಲು,
ಮುಕುರವೇ ರವಿಯಾಗಿಪ್ಪಂತೆ,
ಗುರುಶಿಷ್ಯ ಸಂಬಂಧ ಅಭಿನ್ನ, ಸೇವ್ಯವಾದ ಬಳಿಕ

ಗುರುವೆಂದೆನಲುಂಟೆ ಶಿಷ್ಯಂಗೆ ?
ಗುರುವೆಂದೆನಲುಂಟೆ ಗುರುವಿಂಗೆ ?
ಇಂತು ಉಭಯನಾಸ್ತಿಯಾದ ಉಪದೇಶ,
ಸೌರಾಷ್ಟ್ರ ಸೋಮೇಶ್ವರಲಿಂಗದಲ್ಲಿ ಸ್ವಯವಾಗಿತ್ತು .

ಎತ್ತನೇರಿ ಎತ್ತನರಸುವಂತೆ,
ತಾನಿರ್ದು ತನ್ನ ನರಸಿಕೊಳ್ಳುವನಂತೆ,
ಹೊತ್ತ ನಿಜವನರಿಯದತ್ತಲಿತ್ತ ಸುತ್ತಿ ಬಳಲುವನಂತೆ,
ಹಿಡಿದಿರ್ದ ಲಿಂಗವ ಕಾಣದೆ ಮೂವಿಧಿಗಾಣ್ಬರನೇ ನೆಂಚೆನಯ್ಯಾ !
ತನ್ನಲ್ಲಿ ಗುರು ಲಿಂಗ ಜಂಗಮ ಪ್ರಸಾದವೊಂದೆಂದು ಅರಿಯದ,
ಅಜ್ಞಾನಬದ್ಧರೆನಗೆ ತೋರದಿರಯ್ಯಾ ಸೌರಾಷ್ಟ್ರ ಸೋಮೇಶ್ವರಾ !

ಹಿಂದಣ ಕಥೆಯ ಮುಂದೆ ಹೇಳುವ ಕಾವ್ಯವಲ್ಲ .
ಮುಂದಣ ಕಥೆಯನಿಂದು ಹೇಳುವ ನಾಟಕವಲ್ಲ .
ಬಂದ ಶಬ್ದವ ಸಂದಿಲ್ಲದುಸುರುವೆನೆಂಬ ಅಭ್ಯಾಸಿಯಲ್ಲ .
ಛಂದ ವಿಚ್ಛಂದವೆಂಬ ಸಂದೇಹಿಯಲ್ಲ
ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರ ಸ್ವಯಸುಭಾವದ ಪರಿ ಬೇರೆ.

ಮುತ್ತು ನೀರೊಳಗೆ ಹುಟ್ಟಿ ಮರಳಿ ನೀರಾಗದಂತೆ
ತಿಳಿಯ ಕಾಸಿದ ತುಪ್ಪ, ಕ್ಷೀರವಾಗದಂತೆ,
ತೊಟ್ಟುಬಿಟ್ಟ ಹಣ್ಣು, ಹೂ ಮಿಡಿಯಾಗದಂತೆ,
ಸಂಸಾರದಲ್ಲಿ ಹುಟ್ಟಿ, ಅದ ಹೊದ್ದದೆ
ಸ್ವಯಂಪ್ರಕಾಶ ಲಿಂಗದ ಬೆಳಗಿನಲ್ಲಿ ಬೆಳೆದು
ತಲ್ಲೀಯವಾಗಿರ್ದರಯ್ಯಾ ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರು !

ಶಿವಯೋಗಿಗೆ ಕರ್ಮವಿಲ್ಲ. ಶಿವಶರಣರ ಪಥ ಲಿಂಗಾಧೀನ.
ಮತ್ತಾ ಲಿಂಗವಶನಾಗಿ ಆಯತ ಸ್ವಾಯತದಲ್ಲಿ ಲಿಂಗಮಯವಾಗಿಪ್ಪ
ಶಿವಜ್ಞಾನಿಗಳಿಗೆ ಕರ್ಮವೆಡೆವೊಗಲೆಡೆಯಿಲ್ಲ .
ಹಿಂದಣ ಕರ್ಮ ನಿಂದೆ ವಂಚಕರಲ್ಲಿ ಅಳಿಯಿತ್ತು .
ಇಂದಿನ ಕರ್ಮ ನಿಸ್ಸಂದೇಹದಲ್ಲಿ ಕೆಟ್ಟಿತ್ತು.
ಜ್ಞಾನಾಗ್ನಿಸ್ಸರ್ವ ಕರ್ಮಾಣಿ ''ಭಸ್ಮಸಾತ್ಕುರುತೇ ಮಮ ಎಂದುದಾಗಿ''
ಸೌರಾಷ್ಟ್ರ ಸೋಮೇಶ್ವರನ ಶರಣರು ನಿಃಕರ್ಮಿಗಳಾಗಿ ಲಿಂಗಸುಖಿಗಳು.

ಹೊಂಬಣ್ಣವ ಹಿಮ್ಮೆಟ್ಟದೆ ಕಂಡು,
ಮುಂಬಣ್ಣವ ಮುಂಬರಿದು ಕಂಡು,
ನಿಂದ ಬಣ್ಣವ ನಿಂದಂದಿಗೆ ಕಂಡು,
ಹಲವು ಬಣ್ಣದ ಬಯಕೆಯ ಹೊಲಬುದಪ್ಪಿ
ಸಂದ ಬಣ್ಣದಲ್ಲಿ ಸಂದಿಲ್ಲದೆ ನಿಂದ ನಿರಾಳ
ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರು.

## ತೋಂಟದ ಸಿದ್ಧಲಿಂಗ

ತಂದೆಯಿಲ್ಲದ, ತಾಯಿಯಿಲ್ಲದ, ಹೆಸರಿಲ್ಲದ, ಕುಲವಿಲ್ಲದ, ಹುಟ್ಟಿಲ್ಲದ, ಹೊಂದಿಲ್ಲದ, ಅಯೋನಿಸಂಭವ ನೀನಾದಕಾರಣ, ನಿನ್ನ ನಾನು ನಿಷ್ಕುಲ ಲಿಂಗ ವೆಂದೆನಯ್ಯ. ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

ಸೂರ್ಯನಿಂದ ತೋರಿದ ಕಿರಣಂಗಳಿಗೂ ಆ ಸೂರ್ಯನಿಗೂ ಭಿನ್ನವುಂಟೆ? ಚಂದ್ರನಿಂದ ತೋರಿದ ಕಲೆಗೂ ಆ ಚಂದ್ರನಿಗೂ ಭಿನ್ನವುಂಟೇ? ಅಗ್ನಿಯಿಂದ ತೋರಿದ ಕಾಂತಿಗೂ ಆ ಅಗ್ನಿಗೂ ಭಿನ್ನವುಂಟೇ? ಜ್ಯೋತಿಯಿಂದ ತೋರಿದ ಬೆಳಗಿಗೂ ಆ ಜ್ಯೋತಿಗೂ ಭಿನ್ನವುಂಟೇ? ಅಗಮ್ಯ ಅಗೋಚರ ಅಪ್ರಮಾಣ ಅಪ್ರತಿಮ ಮಹಾಲಿಂಗದಲ್ಲಿ ಜ್ಯೋತಿಯಿಂದ ಜ್ಯೋತಿ ಉದಯಿಸಿದಂತೆ ಉದಯಿಸಿದ ಶರಣಂಗೂ ಮಹಾಲಿಂಗಕ್ಕೂ ಭಿನ್ನವುಂಟೇ? ಇದ ಬೇರೆಂಬ ಅರೆಮರುಳುಗಳನೇ ನೆಂಬೆನಯ್ಯ, ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

ಚಿನ್ನದಿಂದಾದ ಭಂಗಾರ (ಒಡವೆ) ಚಿನ್ನದ ರೂಪಲ್ಲದೆ ಮತ್ತೊಂದು ರೂಪಾಗ ಬಲ್ಲುದೆ ಹೇಳಾ? ಲಿಂಗ ಮುಖದಿಂದ ಉದಯವಾದ ಶರಣರು, ಲಿಂಗ ರೂಪಲ್ಲದೆ ಮತ್ತೊಂದು ರೂಪೆಂದೆನ್ನಬಹುದೇ? ಎನ್ನಲಾಗದು ನೋಡಾ. ಶಿವನ ವಂಶವಾದ ಶರಣರಿಗೆ ಮಲಿನ ಭಾವವ ಕಲ್ಪಿಸುವ ಮಹಾ ಪಾತಕರಿಗೆ ಭವಭಾರ ತಪ್ಪದು ಕಾಣಾ. ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

ಮುಚ್ಚಿದ ಕಣ್ಣ ತೆರೆದುದ ಕಂಡೆ. ಕಿಚ್ಚಿನ ಜ್ವಾಲೆ ಕರೆವುದ ಕಂಡೆ, ಮೃತ್ಯು ಗಳ ಮೊತ್ತ ಕಿತ್ತೋಡುವದ ಕಂಡೆ. ಕತ್ತಲೆ ಬೆಳಗಾದುದ ಕಂಡೆ. ಬೆಚ್ಚಿ ಬೇರೆ ಇಲ್ಲದ ಬೆಳಗೆನ್ನನೊಳಕೊಂಡು ನಿತ್ಯ ಪ್ರಸನ್ನನಾದೆ ಕಾಣಾ, ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.

ಊರೊಳಗೆ ಉದಕ ತುಂಬಿ ಬಾಗಿಲೆಲ್ಲ ಕೆಸರಾದುವು ನೋಡಾ. ಮನೆ ಯೊಳಗೆ ಕಸ ಹೆಚ್ಚಿ ಸಸಿಯನೇಳಲೀಯದು ನೋಡಿರೆ. ಊರೊಳಗಣ ಉದಕವ ಹೊರಡಿಸಿ ಬಾಗಿಲೊಳಗಣ ಕೆಸರ ಸುಟ್ಟು ಮನೆಯೊಳಗಣ ಕಸವ ತೆಗೆದು ಸಸಿಯ ಸಲಹಿಕೊಂಬುದ ನೀನೊಲಿದು ಕರುಣಿಸಯ್ಯಾ, ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

ಎನ್ನ ಮನಸ್ಸು ಹೊನ್ನು ಹೆಣ್ಣು ಮಣ್ಣ ನೆನೆನೆನೆದು ಭ್ರಮೆಗೊಂಡು ನಿಮ್ಮ ನೆನೆಯಲೊಲ್ಲದು ನೋಡಾ. ಎನ್ನ ಕಾಯ ನಿಮ್ಮ ಮುಟ್ಟದೆ ಸಂಸಾರ ಕರ್ಮವನೆ ಮಾಡುತಿರ್ಪುದು ನೋಡಾ. ಎನ್ನ ಪ್ರಾಣ ನಿಮ್ಮ ಮುಟ್ಟದೆ ಪ್ರಪಂಚಿನೊಳಗೆ

ಮುಳುಗುತಿಪ್ಪುದು ನೋಡಾ. ಎನ್ನ ಭಾವ ನಿಮ್ಮ ಭಾವಿಸಿ ಭ್ರಮೆಯುಳಿಯದೆ ಸಂಸಾರ ಭಾವನೆ ಸಂಬಂಧವಾಗಿ ಮುಂದುಗಾಣದೆ ಮುಮುಕ್ಷುಹೀನನಾಗಿದ್ದೆ ನಯ್ಯ. ಸುರಚಾಪದಂತೆ ತೋರಿ ಅಡಗುವ ಅನಿತ್ಯ ತನುವನು ನಿತ್ಯವೆಂದು ನಿರುತ ವೆಂದು ವೃಥಾ ಹೋಯಿತ್ತು ಎನ್ನ ವಿವೇಕ. ಸಂಸಾರದಲ್ಲಿ ಸವೆಸವೆದು ಅವಿವೇಕಿ ಯಾದೆನಯ್ಯಾ. ಎನ್ನ ಅವಿವೇಕವ ಕಳೆದು ಶಿವತತ್ವ ವಿವೇಕವನಿತ್ತು ಕರುಣಿ ಸಯ್ಯ, ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

ಅಡವಿಯ ಹುಲ್ಲುನೇದ ಪಶು ಮಡುವಿನ ಅಗ್ಗಣಿಯ ಕುಡಿದು ನಡು ಬೀದಿ ಯಲ್ಲಿ ಬರುತಿರಲು, ಕಡೆಯಲಿದ್ದ ಹುಲಿ ಬಂದು ಹಿಡಿಯಲು, ನಿನ್ನೊಡವೆಯ ನಾನೇನ ಬಳಸಿಕೊಂಡೆನೋ? ಎಂದು ತನ್ನೊಡೆಯನ ಕರೆಯಲು ಹಿಡಿದ ಹುಲಿ ಬಿಟ್ಟೋಡಿತ್ತು ನೋಡಾ, ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

ಎನಗೆ ಕಾಯ ಉಂಟೆಂಬರು. ಎನಗೆ ಕಾಯವೇ ಇಲ್ಲವಯ್ಯ. ಎನಗೆ ಜೀವವು ಉಂಟೆಂಬರು. ಎನಗೆ ಜೀವ ಮುನ್ನವೇ ಇಲ್ಲವಯ್ಯ. ಎನಗೆ ಭಾವ ಉಂಟೆಂಬರು. ಎನಗೆ ಭಾವವೂ ಮುನ್ನವೇ ಇಲ್ಲವಯ್ಯ. ಅದೇನು ಕಾರಣವೆಂದರೆ: ಎನ್ನ ಕಾಯ ಜೀವ ಪ್ರಾಣ (ಭಾವ) ನಾಯಕ ಪರಮೇಶ್ವರ ನೀನಾದ ಕಾರಣ. ಎನಗಿನ್ನಾವ ಭಯವೂ ಇಲ್ಲ ಕಾಣಾ, ನಾನು ನಿರ್ಭಯನಾದ ಕಾರಣ, ಮಹಾ ಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

ಎಲ್ಲರೂ ಅಹುದೆಂಬುದು ಪ್ರಮಾಣವಲ್ಲ ಕಾಣಿರೋ. ಎಲ್ಲರೂ ಅಲ್ಲವೆಂಬುದೂ ಪ್ರಮಾಣವಲ್ಲ ಕಾಣಿರೋ. ಅದೇನು ಕಾರಣವೆಂದರೆ ಶಿವಶರಣರ ಹೃದಯದ ಅಂತಸ್ಥವನರಿಯರಾಗಿ. ಎನ್ನ ಅಹುದೆಂಬುದನೂ ಅಲ್ಲ ಎಂಬುದನೂ ಎನ್ನ ಮನೋಮೂರ್ತಿ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೆ ನೀನೆ ಬಲ್ಲೆ.

ಹಾರುವ ಹಕ್ಕಿಗೆ ಗರಿಯಿಲ್ಲ ನೋಡಾ. ಊರೊಳಗಿಪ್ಪ ಕಪಿಗೆ ತಲೆ ಇಲ್ಲ ನೋಡಾ. ಹಾರುವ ಹಕ್ಕಿಗೆ ಗರಿ ಬಂದು ಊರೊಳಗಿಪ್ಪ ಕಪಿಗೆ ತಲೆ ಬಂದಲ್ಲದೆ ತಾನಾರೆಂಬುದನು ಅರಿಯಬಾರದು. ತನ್ನಾದಿಯ ಶಿವತತ್ವವ ಭೇದಿಸಲರಿಯದೆ ವೇದ ಆಗಮ ಮುಖದಿಂದ ನಿಮ್ಮನರಿದಿಹೆನೆಂಬ ಅಜ್ಞಾನಿಗಳನು ಏನೆಂಬೆನಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ?

ಕತ್ತೆಗೇಕಯ್ಯ ಕಡಿವಾಣ? ತೊತ್ತಿಗೆ ತೋಳಬಂದಿ ಏಕಯ್ಯ? ಶ್ವಾನನಿಗೇಕೆ ಆನೆಯ ಜೋಹವಯ್ಯ? ಹಂದಿಗೇಕೆ ಚಂದ್ರಾಯುಧವಯ್ಯ? ಶಿವನಿಷ್ಠೆ ಇಲ್ಲ ದವಂಗೆ ವಿಭೂತಿ ರುದ್ರಾಕ್ಷಿ ಶಿವಮಂತ್ರ ಶಿವಲಿಂಗವೆಂಬ ಶಿವಜೋಹವೇತಕಯ್ಯ ಇವರಿಗೆ? ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ?

ಕೆಸರಿಲ್ಲದ ಭೂಮಿಯಲ್ಲಿ ಎಸಳಿಲ್ಲದ ಏಕೋವರ್ಣದ ತಾವರೆ ಹುಟ್ಟಿತ್ತು ನೋಡಾ. ಆ ಭಾವ ತಾವರೆಯಿಂದ ಪೂಜೆಮಾಡುವ ಶರಣನೇ ದೇವನು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

ಚಿನ್ನದಿಂದಲಾದ ಹಲವು ಬಂಗಾರವನಳಿದು ಕರಗಿಸಿದರೆ ಮುನ್ನಿನ ಚಿನ್ನವೇ ಆದಂತೆ, ಉದಕದಿಂದಾದ ವಾರಿಕಲ್ಲು ಕರಗಿ ಮುನ್ನಿನ ಉದಕವೇ ಆದಂತೆ ಚಿನ್ಮಯ ವಸ್ತುವಿನಿಂದ ಉದಯವಾದ ಚಿತ್ಸ್ವರೂಪನಾದ ಶರಣನು. ಆ ಚಿನ್ಮಯ ವಸ್ತುವನೆ ಬೆರಸಿ ಪರಮ ಶಿವಯೋಗಿಯಾದನಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

ಮಳೆ ಹೊಯ್ದರೆ ಆಕಾಶ ನೆನೆವುದೇ? ಬಿರುಗಾಳಿ ಬೀಸಿದರೆ ಆಕಾಶ ಅಲವುದೇ (ಅಲುಗುವುದೇ)? ಕಿತ್ತಲಗಿನಿಂದ ಇರಿದರೆ ಆಕಾಶ ಹರಿವುದೇ? ಬಚ್ಚ ಬರಿಯ ಬಯಲು ಕಟ್ಟುಕಟ್ಟಿಗೆ ಒಳಗಾಗಬಲ್ಲುದೇ? ನಿಶ್ಚಿಂತ ನಿರಾಳನಾದ ನಿಜೈಕ್ಯನ ತಥ್ಯ ಮಿಥ್ಯದಿಂದ ನುಡಿವ ತುಚ್ಛರ ನುಡಿ ತಟ್ಟಬಲ್ಲುದೇ? ವಸ್ತುವ ವಾಕುಶಾಸ್ತ್ರ ಖಂಡಿಸಬಲ್ಲುದೇ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ?

# ಷಣ್ಮುಖಸ್ವಾಮಿ

ಭಾವಕ್ಕೆ ಬಾರದ ವಸ್ತುವ ಭಾವಿಸುವ ಪರಿ ಇನ್ನೆಂತೋ
ನೆನಹಿಗೆ ಬಾರದ ವಸ್ತುವ ನೆನೆವ ಪರಿ ಇನ್ನೆಂತೋ
ನೆನೆಯದೆ ಭಾವಿಸದೆ ಎನ್ನೊಳಗೆ ಬಯಲು ರೂಪಾಗಿ
ತೋರಿದ ನೋಡ ಅಖಂಡೇಶ್ವರಾ

ಅನಂತಕಾಲ ಎನ್ನ ಒಡಲ ಮರೆಯೊಳಗೆ ಅಡಗಿರ್ದು
ಎನಗೆ ಕಾಣಿಸದೆ ಇರ್ದುದು ಇದೇನು ನಿಮ್ಮ ಗಾರುಡವಯ್ಯ
ನೀವು ನಿಮ್ಮ ಕರುಣದಿಂದೆನ್ನ ಒಡಲ ಮರವೆಯ ಒಡೆದು
ಎನ್ನ ಕಣ್ಣ ಮುಂದಣ ಸತ್ತ್ವ ರಜ ತಮದ ಪರದೆಯ ಹರಿಯಲೊಡನೆ
ನಿಮ್ಮ ನಿತ್ಯದ ನಿಲವು ಕಂಡೆನಯ್ಯ ಅಖಂಡೇಶ್ವರಾ

ಕೋಳಿ ಕೂಗುವುದು ಬೆಳಗಿನ ವೇಳೆಯನರಿದು
ಕತ್ತೆ ಕೂಗುವುದು ತನ್ನ ಹೊತ್ತಿನ ಗೊತ್ತನರಿದು
ಶಿವಭಕ್ತನಾದ ಬಳಿಕ ತನ್ನ ಅರುಹು ಕುರುಹಿನ ಭಕ್ತಿ ಮುಕ್ತಿಯ
ಗೊತ್ತನರಿಯದ ಬಳಿಕ ಆ ಕೋಳಿಕತ್ತೆಗಳಿಂದ ಕರಕಷ್ಟ ನೋಡಾ
ಅಖಂಡೇಶ್ವರಾ

ತನುವಿಲ್ಲದೆ ಮಾಡಿ ಧನವಿಲ್ಲದೆ ನೀಡಿ
ಮನವಿಲ್ಲದೆ ಕೂಡಬಲ್ಲಾತನೇ ಮಹಾಭಕ್ತನು ನೋಡಾ ಅಖಂಡೇಶ್ವರಾ

ಮಾಡುವ ತನುವು ನೀವೇ ಆದಿರಿ
ಕೊಡುವ ಮನವು ನೀವೇ ಆದಿರಿ
ನೀಡುವ ಧನವು ನೀವೇ ಆದಿರಿ
ಅಖಂಡೇಶ್ವರಾ ನಾನೂ ಇಲ್ಲ ನೀವೂ ಇಲ್ಲ ಏನೇನೂ ಇಲ್ಲ

ದರ್ಪಣದೊಳಗಣ ರೂಹಿಗೆ ಚೇಷ್ಟಾಭಾವ ಉಂಟೆಂದಡೆ
ನೋಡುವಾತನ ಚೇತನದಿಂದಲ್ಲದೆ ಅದಕ್ಕೆ ಬೇರೆ ಚೇತನ ಉಂಟೆ ಅಯ್ಯ
ಎನ್ನ ಕರಣೇಂದ್ರಿಯಂಗಳು ಚೇಷ್ಟಿಸಿದುವೆಂದಡೆ
ನಿಮ್ಮ ಚೇತನದಿಂದಲ್ಲದೆ ಅವಕೆ ಬೇರೆ ಚೇತನ ಉಂಟೆ ಅಯ್ಯ
ಸೂತ್ರದ ಬೊಂಬೆಯಂತೆ ನೀನಾಡಿಸಿದಂತೆ ನಾನಾಡುತಿರ್ದೆನಯ್ಯ
ಅಖಂಡೇಶ್ವರಾ

ಬಲ್ಲವರು ಬೆಸಗೊಂಡಡೆ ಸೊಲ್ಲನಾರೈದು ಮೆಲ್ಲನೆ ನುಡಿಯಬೇಕು
ಕಲ್ಲಿಗೆ ಕಲ್ಲು ತಾಗಿದಂತೆ ಸೊಲ್ಲು ಬಿಗಿಯಾದಡೆ ಅಲ್ಲಿ ನಿಲ್ಲನಯ್ಯ
ನಮ್ಮ ಅಖಂಡೇಶ್ವರಾ

ಕುಂಭ ಸಹಸ್ರ ಉದಕದೊಳಗೆ
ಬಿಂಬಿಸಿ ತೋರುವ ಸೂರ್ಯನೊಬ್ಬನಲ್ಲದೆ
ಮತ್ತೆ ಹಲವರುಂಟೆ ಅಯ್ಯ
ಸಕಲ ದೇಹದೊಳಗೆ ಸಂಭ್ರಮಿಸಿ ತುಂಬಿಪ್ಪ ಪರವಸ್ತು ನೀನೊಬ್ಬನಲ್ಲದೆ
ಮತ್ತಾರನು ಕಾಣೆನಯ್ಯ ಅಖಂಡೇಶ್ವರಾ

ಪುರುಷನೆಂದು ಕರೆವುತಿರ್ಪರು ಜಗದವರೆಲ್ಲ
ನಾನು ಪುರುಷನಲ್ಲನಯ್ಯ
ಅದೆಂತೆಂದಡೆ
ಹೊರಗಣ ಸಾಕಾರವೆ ನೀನು
ಒಳಗಣ ನಿರಾಕಾರವೆ ನಾನು
ಹೊರಗಣ ಸಾಕಾರ ಪುರುಷರೂಪು ನೀನಾಗಿ
ಒಳಗಣ ನಿರಾಕಾರ ಸ್ತ್ರೀರೂಪು ನಾನಾಗಿ
ನಿಮಗೆ ರಾಣಿವಾಸವಾದೆನಯ್ಯ ಅಖಂಡೇಶ್ವರಾ

ಎಲ್ಲರಂತಲ್ಲ ನೋಡಿರೆ ನನ್ನ ನಲ್ಲ
ಬಲ್ಲಿದ ನಾರಾಯಣ ಬ್ರಹ್ಮರ ಕೂಡೆ ಮೆಲ್ಲನೆ ಸೇವೆಯಕೊಂಬನು
ಹುಲ್ಲ ದನುಜರನೆಲ್ಲ ನಿಲ್ಲದೆ ಸಂಹರಿಸಿದನು
ಕಲ್ಲುಕಲ್ಲಲಿ ಹೊಡೆಸಿಕೊಂಡನು
ಭಕ್ತಿಗೆ ಮೆಚ್ಚಿ
ಬಿಲ್ಲಲಿ ಹೊಯಿಸಿಕೊಂಡನು
ಭಾವಕ್ಕೆ ಮೆಚ್ಚಿ
ಸೊಲ್ಲಿಗೆ ಸೋತು ಶಿಶುವಾದನು ಅಮ್ಮವ್ವೆಗೆ
ಮಲ್ಲಮಲ್ಲರ ಗಂಡನೆಂಬ ಬಿರುದು ನೋಡಿರೆ
ನಮ್ಮ ಅಖಂಡೇಶ್ವರನೆಂಬ ನಲ್ಲನಿಗೆ

ಬಾಲನೇತಕವ್ವ ನಮ್ಮನೆಯಾತ
ತೋರನೇತಕವ್ವ ತನ್ನ ದಿವ್ಯರೂಪವ
ಬೀರನೇತಕವ್ವ ಅತಿ ಸ್ನೇಹವ

ಇನ್ನೆಂತು ಸೈರಿಸುವೆನವ್ವ
ಹೇಗೆ ತಾಳುವೆನವ್ವ
ತನು ತಾಪಗೊಳ್ಳುತಿದೆ
ಮನ ತಲ್ಲಣವಾಗುತಿದೆ
ಅಖಂಡೇಶ್ವರನೆಂಬ ನಲ್ಲನ ತೋರಿಸಿ
ಎನ್ನ ಪ್ರಾಣವನುಳುಹಿಕೊಳ್ಳಿರವ್ವ

ಆಕಾಶದಲ್ಲಿ ತೋರಿದ ಇಂದ್ರಧನು ಅಡಗುವುದಕ್ಕೆ
ಆಕಾಶವೆ ಆಶ್ರಯವಲ್ಲದೆ ಬೇರೆ ಆಶ್ರಯವುಂಟೆ ಅಯ್ಯ
ಗಾಳಿಯಲ್ಲಿ ತೋರಿದ ಸುಳಿಗಾಳಿ ಅಡಗುವುದಕ್ಕೆ
ಆ ಗಾಳಿಯೆ ಆಶ್ರಯವಲ್ಲದೆ ಬೇರೆ ಆಶ್ರಯವುಂಟೆ ಅಯ್ಯ
ಅಗ್ನಿಯಿಂದ ತೋರಿದ ಕಿಡಿಗಳು ಅಡಗುವುದಕ್ಕೆ
ಆ ಅಗ್ನಿಯೆ ಆಶ್ರಯವಲ್ಲದೆ ಬೇರೆ ಆಶ್ರಯವುಂಟೆ ಅಯ್ಯ
ಸಮುದ್ರದಲ್ಲಿ ತೋರಿದ ನೊರೆ ತೆರೆ ತುಂತುರ್ವನಿ ಅಡಗುವುದಕ್ಕೆ
ಆ ಸಮುದ್ರವೆ ಆಶ್ರಯವಲ್ಲದೆ ಬೇರೆ ಆಶ್ರಯವುಂಟೆ ಅಯ್ಯ
ಆದಿ ಅನಾದಿಯಿಂದತ್ತತ್ತಲಾದ ಮಹಾ ಘನ ವಸ್ತುವಿನಲ್ಲಿ
ರೂಪಿಸಿ ತೋರಿದ ನಿಜೈಕ್ಯನಡಗುವುದಕ್ಕೆ
ಆ ಪರವಸ್ತುವೆ ಆಶ್ರಯವಲ್ಲದೆ ಬೇರೆ ಆಶ್ರಯವುಂಟೆ ಅಯ್ಯ
ಅಖಂಡೇಶ್ವರಾ

## ಮುಕ್ತಾಯಕ್ಕ-ಅಲ್ಲಮಪ್ರಭು

ಪ್ರಭುದೇವರು ಮರ್ತ್ಯಲೋಕವನೆಯ್ದಿ ಪಾವನವ ಮಾಡುತ್ತ, ಸತ್ಯಸದಾಚಾರವಂತರಪ್ಪ ಶಿವಲಿಂಗೈಕ್ಯರಂ ತನ್ನಂತೆ ಮಾಡುತ್ತ, ಶ್ರೀ ವೀರಶೈವಾಚಾರದ ಘನವಂ ಕರತಳಾಮಳಕವಾಗಿ ಸಮಸ್ತರೊಳು ತೊಳಗಿ ಬೆಳಗಿ ತೋಱುತ್ತ, ಶಿವಾದ್ವೈತ ತತ್ತ್ವಭೇದಂಗಳನು ಶಿವಸುಖಿಗಳೊಳು ಕೃಪೆಯಿಂ ನಿರೂಪಿಸುತ್ತ, ಸ್ವಾನುಭಾವಗಮ್ಯರೊಳು ಸಮ್ಮೇಳಂ ಗೆಯ್ಯುತ್ತ, ಸಮ್ಯಕ್‌ಶರಣರೊಳು ಸಮರಸಮಂ ಕೈಗೂಡುತ್ತ, ಪರಸ್ಥಲದ ಲಿಂಗಮಂ ಕರಸ್ಥಲದೊಳು ಸ್ಥೈತಿಟ್ಟು, ಪಿರಿದು ನೋಟವೆ ಪ್ರಾಣವಾಗಿ, ಭಾವವೆ ನಿಬ್ಬೆಱಗಿನ ನಿಲವಾಗಿ, ಜ್ಞಾನವೆ ಸರ್ವಾಂಗ ಲಿಂಗವಾಗಿ, ಮನವೆ ಕರಸ್ಥಲದೊಳು ಲಯವಾಗಿ, ಅಕಾಯವೆ ಕಾಯವಾಗಿ, ಬಲದ ಹಸ್ತದೊಳು ವೀಣಾದಂಡಮಂ ಪಿಡಿದು, ಪರಮಾನಂದರಸ ಒಸರಲು, ಪಾಡುವ ಸ್ವರವೆ ನಾದಬ್ರಹ್ಮದೊಳು ತರಹರವಾಗಿ, ದಿವ್ಯವಚನಾಮೃತಂಗಳಂ ಪಾಡುತ್ತ, ಲೋಕದ ಲಜ್ಜಾಭಿಮಾನಂಗಳನಱಿಯದೆ, ದಿಗಂಬರವೇಷದಿಂ ಇತರೇತರಂಗಳಂ ಮಱೆದು, ತನ್ನೊಳು ತನ್ನ ನಿಜದ ನಿಲವ ನೋಡುತ್ತ, ಇಂತನಂತ ದೇಶಂಗಳೊಳು ಸುಳಿದು, ದೇಶಾಂತರಮಂ, ನಟಿಸಿ ತೋಱುತ್ತ ಬರುತ್ತಿರಲತ್ತ ಕೈಲಾಸದಲ್ಲಿ ಸಮಸ್ತ ಪ್ರಮಥಗಣಂಗಳೊಳಗೊರ್ವ ಗಣಾಧೀಶ್ವರನು ಜಗಹಿತಾರ್ಥವಾಗಿ ಮರ್ತ್ಯಕ್ಕವತರಿಸಿ, ಅಜಗಣ್ಣನೆಂಬಭಿಧಾನದಿಂ ಗುಪ್ತಭಕ್ತಿಯಿಂದಿರ್ದು, ತಮ್ಮ ನಿರವಯಪದದೊಳ ನಿಜವನೈದಲು, ಅಲ್ಲಿ ಮುಕ್ತಾಯಕ್ಕಗಳು ಅಜಗಣ್ಣನ ನಗಲ್ದ ವಿಯೋಗಾವಸ್ಥೆಯಿಂ ಪ್ರಲಾಪಿಸುತ್ತಿರಲು, ಆ ಪ್ರಲಾಪಮಂ ಪ್ರಭುದೇವರು ಕಂಡು, ಈಕೆ ಮಹಾಜ್ಞಾನಿಯೆಂದಱಿದು ಸಿಂದು ನೋಡುತ್ತಿರ್ಪ ಪ್ರಸ್ತಾವದೊಳು ಮುಕ್ತಾಯಕ್ಕಗಳು ಪ್ರಳಾಪಿಸುತ್ತಿರ್ದ ಪ್ರಸ್ತಾವದ ವಚನ:

ಅಱಿವನಣಲೊಳಗಿಕ್ಕಿ ಅಗಿವುತ್ತಿದೆ ಮರ್ತ್ಯಲೋಕವೆಲ್ಲವು. ಅಱಿವು ಉಳಿಯ ಲಱಿಯದೆ ಕೆಟ್ಟಿತ್ತು ಲೋಕವೆಲ್ಲವು. ನಾನೆಂತು ಬದುಕುವೆನಣ್ಣಾ! ಕತ್ತಲೆ ಬೆಳಗಕಾಬ ಸಂದೇಹಿ ನಾನೊಬ್ಬಳು. ಎನ್ನ ಕಣ್ಣ ಕಟ್ಟಿ, ಕನ್ನಡಿಯ ತೋಱಿತ್ತೊ ಅಜಗಣ್ಣಾ, ನಿನ್ನ ಯೋಗ। ೧

ಅಂಧಕನ ಕಯ್ಯ ಅಂಧಕ ಹಿಡಿದಂತಿರಬೇಕು. ಮೂಗನ ಕಯ್ಯಲ್ಲಿ ಕಾವ್ಯವ ಕೇಳಿದಂತಿರಬೇಕು. ದರ್ಪಣದೊಳಗಣ ಪ್ರತಿಬಿಂಬದಂತೆ ಹಿಡಿವರಿಗಳವಲ್ಲದಿರಬೇಕು ಅಣ್ಣಾ. ಕೂರ್ಮನ ಶಿಶುವಿನ ಸ್ನೇಹದಂತಿರಲೊಲ್ಲದೆ ಆಱೂಢಗೆಟ್ಟೆಯೊ ಅಜಗಣ್ಣಾ. ೨

ರವಿಯೊಳಗಡಗಿದ ಪ್ರತಿಬಿಂಬದಂತೆ, ಹಿಡಿವರಿಗಳವಲ್ಲದಿರಬೇಕು ಅಣ್ಣಾ.

ನಿಮ್ಮೊಳಗಡಗಿದ ಭೇದವ ಬಿನ್ನವ ಮಾಡುವರೆ ಅಣ್ಣಾ? ನಿಮ್ಮ ನುಡಿಗಳೆಲ್ಲವು ಪ್ರತಿಬಿಂಬಗಳಾದವೆ ಅಣ್ಣಾ? ಕೊಡನೊಳಗಣ ಜ್ಯೋತಿಯು ಅಡಗಿಸಲಱಿಯದೆ ಮಿಗೆವರಿದಂತಾದೆಯೊ ಅಜಗಣ್ಣಾ. ೩

ಸ್ಫಟಿಕ ಪ್ರಜ್ವಲಜ್ಯೋತಿ ಘಟದೊಳಗೆ ತೋರುತ್ತಿರೆ, ದಿಟಪುಟವನತಿಗಳೆದು ಸಟೆಯ ಬಳಸುವರೆ? ಅಂತರಂಗದ ಶುದ್ಧಿಯ ಬಹಿರಂಗಕ್ಕೆ ತಂದು ಸಂತೈಸಲಱಿಯದೆ ಮರುಳಾದಿರಣ್ಣಾ. ಜಂತ್ರದ ಕೀಲಕೂಟದ ಸಂಚದ ಭೇದವು ತಪ್ಪಿ, ಮಂತ್ರ ಭಿನ್ನವಾಗಿ ನುಡಿವರೇ ಅಜಗಣ್ಣಾ? ೪

ಇಂತು ತನ್ನ ಅಱುವಿನ ಮುಂದೆ ಇದಿರಿಟ್ಟು ತೋಱುವ ಪರವಸ್ತುವಿನಲ್ಲಿ ವಿಕಳಾವಸ್ಥೆಯನೈದಿ, ನೆರೆವ ಭರದಿಂದಿರ್ಪ ಮುಕ್ತಾಯಕ್ಕಗಳನು ಪ್ರಭುದೇವರು ನುಡಿಸುವ ಪ್ರಸ್ತಾವದ ವಚನ:

ಅಂಗೈಯೊಳಗೊಂದು ಅರಳ್ದ ತಲೆಯ ಹಿಡಿದುಕೊಂಡು, ಕಂಗಳ ಮುತ್ತ ಪವಣಿಸುವಾಕೆ ನೀನಾರು ಹೇಳಾ? ಸಂದ ಸಂಪಗೆಯರಳ ತುಂಬಿ ಬಂದುಂಬ ಭೇದವನಱಿಯದೆ ಹಂಬಲಿಸುವ ಪರಿತಾಪವೇನು ಹೇಳಾ? ಒಂದೆಂಬೆನೆ, ಎರಡಾಗಿದೆ. ಎರಡೆಂಬೆನೆ, ಒಂದಾಗಿದೆ. ಅಱಿವಿನೊಳಗಣ ಮಱಹಿದೇನು ಹೇಳಾ? ದುಃಖವಿಲ್ಲದ ಅಕ್ಕೆ, ಇಲ್ಲದ ಅನುತಾಪ, ನಮ್ಮ ಗೊಹೇಶ್ವರ ಲಿಂಗವಲ್ಲಿ ತೋಱುತ್ತಿದೆ. ನೀನಾರೆಂದು ಹೇಳಾ ಎಲೆ ಅವ್ವಾ? ೫

ಈ ಹೀಗೆಂದು ಪ್ರಭುದೇವರು ಬೆಸಗೊಳಲು, ತನ್ನ ಕುಱುಹ ಹೇಳಿದ ಸ್ತಾವದ ವಚನ:

ಆರೆಂದು ಕುಱುಹ ಬೆಸಗೊಳಲು ಏನೆಂದು ಹೇಳುವೆನಯ್ಯಾ? ಕಾಯದೊಳಗೆ ಮಾಯವಿಲ್ಲ; ಭಾವದೊಳಗೆ ಭ್ರಮೆಯಿಲ್ಲ. ಕರೆದು ಬೆಸಗೊಂಬರೆ ಕುಱುಹಿಲ್ಲ. ಒಬ್ಬರಿಗೂ ಹುಟ್ಟದೆ, ಅಯೋನಿಯಲ್ಲಿ ಬಂದು, ದುರ್ಬುದ್ಧಿಯಾದ ವಳನೇನೆಂಬೆನಣ್ಣಾ! ತಲೆಯಳಿದು ನೆಲೆಗೆಟ್ಟು ಬೆಳಗುವ ಜ್ಯೋತಿ ಎನ್ನ ಅಜಗಣ್ಣ ತಂದೆಯು ಬೆನ್ನ ಬಳಿಯವಳಾನಯ್ಯಾ. ೬

ಈ ಹೀಗೆಂದು ಮುಕ್ತಾಯಕ್ಕಗಳು ತಮ್ಮ ಕುಱುಹ ಹೇಳಲು, ಆ ಪ್ರಭುದೇವರು ಕೇಳಿ ಹರುಷಿತರಾದ ಪ್ರಸ್ತಾವದ ವಚನ:

ಕಾಣದುದ ಕಂಡೆ; ಕೇಳದುದ ಕೇಳಿದೆ. ಮುಟ್ಟಬಾರದುದ ಮುಟ್ಟಿದೆ; ಅಸಾಧ್ಯವ ಸಾಧಿಸಿದೆ. ತಲೆಗೆಟ್ಟುದ ತಲೆವಿಡಿದೆ; ನೆಲೆಗೆಟ್ಟುದ ನಿರ್ಧರಿಸಿದೆ. ಗೊಹೇಶ್ವರಾ, ನಿಮ್ಮ ಶರಣ ಅಜಗಣ್ಣಂಗೆ ಶರಣೆಂದು ಬದುಕಿದೆನು. ೭

ಈ ಹೀಗೆಂದು ಪ್ರಭುದೇವರು ಆ ಅಜಗಣ್ಣದೇವರ ನಿಜವನರುಹಿದು ಶರಣು ಮಾಡಿದರೆ, ಅವರ ಕುಱುಹನಱಿಯಬೇಕೆಂದು ಮುಕ್ತಾಯಕ್ಕಗಳು ಬೆಸಗೊಂಡ ಪ್ರಸ್ತಾವದ ವಚನ :

ಸಚ್ಚಿದಾನಂದ ಸ್ವರೂಪವಾದ, ವಾಙ್ಮನಕ್ಕಗೋಚರವಾದ, ಜ್ಞಾನಕ್ರೀಯ ನೊಳಕೊಂಡು ನಿಂದ ಜಂಗಮವೆ ಅಂಗ ಪ್ರಾಣವಾದ ಶರಣರನೊಳಕೊಂಡು, ಚಿದ್ಘನದೊಗೆ ಅವಿರಳೈಕ್ಯವಾದ ಎನ್ನ ಅಜಗಣ್ಣ ತಂದೆಯನಱಿದು ಶರಣೆಂಬಾತ ನೀನಾರು ಹೇಳಯ್ಯಾ ? ೮

ಈ ಹೀಗೆಂದು ಕೇಳಿದ ಮುಕ್ತಾಯಕ್ಕಗಳಿಗೆ ಪ್ರಭುದೇವರು ತಮ್ಮ ಕುರುಹ ಹೇಳುವ ಪ್ರಸ್ತಾವದ ವಚನ :

ಶರಣು ಶರಣಾರ್ಥಿ ಎಲೆ ತಾಯೆ. ಧರೆಯಾಕಾಶ ಮನೆಗಟ್ಟದಂದು, ಹರಿ ವನಿಲ ಅಗ್ನಿಜಲ ವೊಳಡೋಱದಂದು ಹುಟ್ಟಿದಳೆಮ್ಮವ್ವೆ. ಅದಕ್ಕೆ ಮುನ್ನವೆ ಮುನ್ನವೆ ಹುಟ್ಟದೆ ಬೆಳೆದನೆಮ್ಮಯ್ಯ. ಈ ಇಬ್ಬರ ಬಸುಱಲ್ಲಿ ಬಂದೆ ನಾನು. ಎಮ್ಮ ತಂಗಿಯರೈವರು ಮೊಱಗೆಟ್ಟು ಹೆಂಡಿರಾದರೆನಗೆ. ಕಾಮಬಾಣ ತಾಗದೆ ಅವರ ಸಂಗವ ಮಾಡಿದೆನು. ನಾ ನಿಮ್ಮ ಭಾವನಲ್ಲಯ್ಯನು ; ನೀನೆನಗೆ ನಗೆವೆಣ್ಣು. ನಮ್ಮ ಗೋಹೇಶ್ವರನ ಕೈವಿಡಿದು ಪರಮ ಸುಖಿಯಾಗಿ, ಕಳವಳ ಕಂದೆಱವಿ ಯೇನು ಹೇಳಾ ? ೯

ಈ ಹೀಗೆಂದು ಪ್ರಭುದೇವರು ತಮ್ಮ ಪೂರ್ವಾಪರ ಸಂಬಂಧಮಂ ನಿರೂಪಿ ಸಲು, ಆ ಮುಕ್ತಾಯಕ್ಕಗಳು ಕೇಳಿ ಹರುಷಿತೆಯಾದ ಪ್ರಸ್ತಾವದ ವಚನ :

ದೇವದೇವಾ, ಶರಣಾರ್ಥಿ ; ಅವಧರಿಸಯ್ಯ. ಕೇಳಿದ ಸುಖ ಕಿವಿಗೆ ಬೇಟ ವಾಯಿತ್ತು. ಕಿವಿಗಳ ಬೇಟ ಕಂಗಳ ಮುಂದೆ ಮೂರ್ತಿಗೊಂಡಿತ್ತು. ಕಂಗಳ ಮುಂದೆ ಕಂಡ ಸುಖವು ಮನಕ್ಕೆ ವೇದ್ಯವಾಯಿತ್ತು. ಶಿವಶರಣರ ದರುಶನದ ಸುಖ ವೇನೇನೆಂದೆನಬಹುದು ! ಮದವಳಿದು ಮಹವನೊಡಗೂಡಿದ ಎನ್ನ ಅಜಗಣ್ಣನ ನಗಲಿದ ದುಃಖ, ನಿಮ್ಮ ಸಂಗದಲ್ಲಿ ಸಯವಾಯಿತ್ತು ಕಾಣಾ ಪ್ರಭುವೆ. ೧೦

ಇಂತು ಮುಕ್ತಾಯಕ್ಕಗಳು ನಿಮ್ಮ ದರುಶನದಿಂದ ಕೃತಾರ್ಥಳಾದೆನೆಂದು ಬಿನ್ನಪಂಗೈಯಲು, ಆ ಪ್ರಭುದೇವರು ಆಕೆಯ ಅನುತಾಪವಂ ಸಂತೈಸಿ ನಿಲಿಸುವ ಪ್ರಸ್ತಾವದ ವಚನ:

ಅಱಿವಜತು ಮಱಹುಗೆಟ್ಟು, ತನ್ನಲ್ಲಿ ತಾನು ಸನ್ನಹಿತನಾದಂಗೆ ದುಃಖಿಸುವರೆ

ಹೇಳಾ? ಶೋಕಿಸುವರೆ ಹೇಳಾ? ಒಡಲಿಲ್ಲದಾತಂಗೆ ಎಡೆಯಲೊಂದು ಅಳಿವುಂಟೆಂದು ನುಡಿದು ಹೇಳುವ ಮಾತು ಭ್ರಾಂತು ನೋಡಾ! ಎರಡಿಲ್ಲದ ಐಕ್ಯಂಗೆ ಒಳಹೊಱಗಿಲ್ಲ ನೋಡಾ, ಗೊಹೇಶ್ವರನ ಶರಣ ಅಜಗಣ್ಣಂಗೆ.

ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಅಜಗಣ್ಣನು ಪರಮ ಯೋಗೀಶ್ವರನು, ಸುಜ್ಞಾನ ಪರಿಪೂರ್ಣನು; ಅಂತರಂಗದಲ್ಲಿ ಅವಿರಳ ಲಿಂಗೈಕ್ಯನು, ಬಹಿರಂಗ ವ್ಯವಹಾರ ದೂರಸ್ಥನು; ಸರ್ವಕರಣ ನಿರ್ಮುಕ್ತನು, ಸರ್ವಾಂಗ ರಹಿತನು; ನಿತ್ಯ ನಿಜತತ್ವದಲ್ಲಿ ಮನೋವೇದ್ಯನು, ಸಚ್ಚಿದಾನಂದರಸಾರ್ಣವನು; ಸದ್ಯೋನ್ಮುಕ್ತನು, ಸರ್ವಕ್ರಿಯಾತೀತನು, ನಿಶ್ಯಬ್ದ ಗಂಭೀರನು, ನಿರುಪಮ ಚರಿತ್ರನು, ನಿಸ್ಸಂಸಾರನು, ಸಕಲತತ್ವ ಶಿರೋರತ್ನನು; ಶರೀರವಿಡಿದು ಸಂಗ ರಹಿತನು, ಇಂದ್ರಿಯಂಗಳುವಿಡಿದು ನಿಷ್ಕಾಮನು; ಗಮನವಿಡಿದು ಅಗಮ್ಯನು, ವಿವೇಕವಿಡಿದು ನಿರ್ವಿಚಾರನು; ಅಱಿವುವಿಡಿದು ತ್ರಿಪುಟಿ ರಹಿತನು; ಘನದಲ್ಲಿ ಗಂಭೀರನು, ನೆನೆಹಿನಲ್ಲಿ ನಿಸ್ಸಂಚಲನು; ನುಡಿಯಲ್ಲಿ ಪರವಶನು, ಗತಿಯಲ್ಲಿ ಇಹ ಪರವೆಂಬೆರಡು ಹೊದ್ದದ ನಿರಾಶಾಭರಿತನು; ಸ್ಥಿತಿಯಲ್ಲಿ ನಿಸ್ಸ್ಥಿತನು, ಇರವಿನಲ್ಲಿ ಪರಶಿವನು. ಇಂತಪ್ಪ ಮಹಾಮಹಿಮನನಗಲಿ ನಾನೆಂತು ಜೀವಿಸುವೆನೆಂದು ಮುಕ್ತಾಯಕ್ಕಗಳು ಬಿನ್ನೈಸುತ್ತಿರ್ದ ಪ್ರಸ್ತಾವದ ವಚನ:

ಅಂಬರದಲಾಡುವ ತುಂಬಿಯ ಬಿಂಬವ, ಕಂಬನಿಯೊಳಗಣ ರತ್ನದ ಬಯಕೆಯನಾದ್ಯಂತವನೇನೆಂಬೆನಯ್ಯಾ? ವೇದ ಶಾಸ್ತ್ರ ಶ್ರುತಿ ಸ್ಮೃತಿಗಳು ಸ್ತುತಿಯಿಸಲಱಿಯವು. ನಾದವಲ್ಲ, ಸುನಾದದ ನಿಲವಲ್ಲ. ಭೇದಿಸುವರೆ ಅಗಮ್ಯ ನೋಡಾ! ಸೊಲ್ಲಿಲ್ಲದ ಸೊಮ್ಮಿಲ್ಲದ ಘನವನೇನೆಂಬೆನು? ಎಂತು ಮಱೆವೆನಯ್ಯಾ ಎನ್ನ ಅಜಗಣ್ಣ ತಂದೆಯನು?

ಈ ಹೀಗೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಕಂಡೆನೆಂಬುದು ಕಂಗೆ ಮಱವೆ; ಕಾಣೆನೆಂಬುದು ಮನದ ಮಱವೆ. ಕೂಡಿದೆನೆಂಬುದು ಅಱಿವಿನ ಮಱವೆ; ಅಗಲಿದೆನೆಂಬುದು ಮಱಹಿನ ಮಱವೆ. ಇಂತು ಕಂಡೆ ಕಾಣೆ, ಕೂಡಿದೆನಗಲಿದೆನೆಂಬ ಭ್ರಾಂತಿಸೂತಕವ ತಿಳಿದು ನೋಡಲು, ಗೊಹೇಶ್ವರನೆಂಬ ಲಿಂಗವನಗಲಲೆಡೆಯಿಲ್ಲ ಕೇಳಾ ಎಲೆ ತಾಯೆ. ೧೩

ಇದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ:

ಕಣ್ಣ ಮೊದಲಲ್ಲಿ ಕುಳ್ಳಿರ್ದು ಬಣ್ಣದೋಱುವ ಪರಿಯ ನೋಡಾ! ಬಣ್ಣವಿಲ್ಲದ

ಬಣ್ಣವನುಟ್ಟು ಸುಳಿದನು. ಈ ಅಜಗಣ್ಣನ ಯೋಗಕ್ಕೆ ಬೆಱಗಾದೆನು! ಈ ಅಱಿವಂತುಟಿಲ್ಲವನೊಳಗಿಟ್ಟುಕೊಂಡನು, ಶಿವಗಣಸಂಚ ಶಿವಯೋಗಿ ಅಜಗಣ್ಣ ದೇವನು. ೧೪

ಮತ್ತಂ, ನೀರ ಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ, ಬಯಲ ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿರ್ದನಯ್ಯಾ. ಕರ್ಪುರದ ಪುತ್ಥಳಿಗೆ ಅಗ್ನಿಯ ಸಿಂಹಾಸನವನಿಕ್ಕಿ, ಅಗ್ನಿ ಕರಗಿ ಕರ್ಪೂರ ಉಳಿದುದಕ್ಕೆ ಬೆಱಗಾದೆನಯ್ಯಾ, ಎನ್ನ ಅಜಗಣ್ಣನ ಯೋಗಕ್ಕೆ! ೧೫

ಇಂತು ದೇಹವಿದ್ದೂ ದೇಹವಿಲ್ಲದೆ, ತನ್ನಱಿವುದೋಱದೆ, ತಾನೆಂಬ ಸ್ವರೂಪ ವನು ಶಿವತತ್ವಸ್ವರೂಪದಲ್ಲಿ ನಿರ್ವಹಿಸಿ, ತನ್ನ ತಪ್ಪಿಸಿಕೊಂಡು ಹೋದನೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ:

ಅಳಿದವನಲ್ಲ, ಉಳಿದವನಲ್ಲ, ಘನಕ್ಕೆ ಗಮನನಲ್ಲ, ಮನಕ್ಕೆ ಸಾಧ್ಯನಲ್ಲ. ತನ್ನ ತಪ್ಪಿಸಿ ಇದಿರನೊಪ್ಪಿಸಿದೆನೆಂಬ ಭಿನ್ನಭಾವಿಯಲ್ಲ ಗೊಹೇಶ್ವರನ ಶರಣ ಅಜಗಣ್ಣನ ಅಂತಿಂತೆನಬಾರದು ಕೇಳಾ ತಾಯೆ. ೧೬

ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ:

ತನುವಿಡಿದೆನಾಗಿ ಅನುವನಱಿಯದೆ ಕೆಟ್ಟೆನು. ಮನವಿಡಿದೆನಾಗಿ ಅಱಿವು ಉಳಿಯದೆ ಕೆಟ್ಟೆನು. ಭಾವದ ಬಯಕೆ ಹಿಂಗದಾಗಿ ವಿಯೋಗಿಯಾಗಿ ಕೆಟ್ಟೆನು. ಅಱಿವ ನುಡಿದು ಮಱಹಿಗೊಳಗಾದೆನು. ಎನ್ನ ಕಾಣದೆ ಭಿನ್ನಜ್ಞಾನಿಯಾದೆನು. ಅಜಗಣ್ಣನೆಂಬ ಮಹಿಮನು ಘನವೇದ್ಯನಾಗಿ, ಎನ್ನ ಮತಿಗೆ ಮಱವೆಯ ಮಾಡಿ ಹೋದನು. ೧೭

ಈ ಹೀಗೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ತನು ಉಂಟೆಂದರೆ ಪಾಶಬದ್ಧ, ಮನ ಉಂಟೆಂದರೆ ಭವಕ್ಕೆ ಬೀಜ. ಅಱಿವ ನುಡಿದು ಕೆಟ್ಟೆನೆಂದರೆ ಅಜ್ಞಾನ, ಭಾವದಲ್ಲಿ ಸಿಲುಕಿದೆನೆಂಬ ಮಾತು ಬಯಲ ಭ್ರಮೆ ನೋಡಾ! ಒಮ್ಮೆ ಕಂಡೆನೊಮ್ಮೆ ಕಾಣೆ, ಒಮ್ಮೆ ಕೂಡಿದೆನೊಮ್ಮೆಯಗಲಿದೆ ನೆಂದರೆ ಕರ್ಮಬೆಂಬತ್ತಿ ಬಿಡದು. ನಿನ್ನೊಳಗೆ ನಿನ್ನ ತಿಳಿದು ನೋಡಲು ಭಿನ್ನ ಉಂಟೆ? ಗೊಹೇಶ್ವರಲಿಂಗವ ನೞಿದರೆ, ನೀನೆಂದೆ ತಿಳಿದು ನೋಡಾ ಮರುಳೆ. ೧೮

ಪರತತ್ತ್ವವೆಂಬುದು ಬೇಡಿಲ್ಲ, ನೀನೆಂದೆ ತಿಳಿದು ನೋಡೆನಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ :

ಹಿಡಿವಾಚಾರವ ಬಿಡದನ್ನಕ್ಕರ, ಎನ್ನ ಅಱಿವು ಮಱೆಯದನ್ನಕ್ಕರ, ಎನ್ನ ಮನವ ಸುಡದನ್ನಕ್ಕರ, ಎನ್ನ ಬೆಡಗಿನ ಗುರುವ: ತೋಱೆಯದನ್ನಕ್ಕರ, ಸುಸುರ ವೆಂತಪ್ಪುದು ಹೇಳಾ? ಹೋಹ ಬಟ್ಟೆಯನಱಿಯದನ್ನಕ್ಕರ, ತಾನಾಗಬಾರದು ಕಾಣಾ ಎನ್ನ ಅಜಗಣ್ಣ ತಂದೆಯಂತೆ. ೧೯

ದೇಹೇಂದ್ರಿಯ ಮನಃಪ್ರಾಣಾದಿ ಸೂತಕಂಗಳು ಹಿಂಗದನ್ನಕ್ಕರ, ಉತ್ಪತ್ತಿ ಸ್ಥಿತಿಲಯಂಗಳ ಭೇದವ ತಿಳಿಯದನಕ್ಕರ, ಲಿಂಗದಲ್ಲಿ ಇದಿರಿಟ್ಟು ಮಾಡುವ ಸರ್ವ ಕ್ರಿಯಾಸೂತಕ ಹಿಂಗದನ್ನಕ್ಕರ, ತಾನು ಶಿವನಾಗಬಾರದೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ :

ಇಲ್ಲದ ಶಂಕೆಯನುಂಟೆಂದು ಭಾವಿಸಿದರೆ, ಅದು ಕಣ್ಣ ಮುಂದೆ ರೂಪಾಗಿ ಕಾಡುತ್ತಿರ್ಪುದು. ಇಲ್ಲದ ತನುವನುಂಟೆಂಬನ್ನಕ್ಕರ, ಅದೇ ಮಾಯೆಯಾಗಿ ಕಾಡುತ್ತಿರ್ಪುದು. ನಿಃಕ್ರಿಯಲಿಂಗಕ್ಕೆ ಕ್ರೀಯಾಂತಲ್ಲದೆ ಆಗದೆಂಬರ ಸಂದು ಸಂಶಯ ಮುಂದುಗೆಡಿಸುತ್ತಿರ್ಪುದು ಕೇಳಾ. ಮನವ ಮನೆಯ ಮಾಡಿಕೊಂಡಿಪ್ಪ ಲಿಂಗದ ಅನುವನಱಿಯಬಲ್ಲರೆ, ಗೊಹೇಶ್ವರನೆಂಬ ಲಿಂಗ ದೂರವಿಲ್ಲ ಕೇಳಾ ಮರುಳೆ. ೨೦

ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ :

ತನುವಿನೊಳಗೆ ತನುವಾಗಿ, ಮನದೊಳಗೆ ಮನವಾಗಿ, ಪ್ರಾಣದೊಳಗೆ ಪ್ರಾಣವಾಗಿಪ್ಪುದೆಂದಡೆ, ಕೆಲವರಿಗೆ ಅಱಿಯಪ್ಪುದೆ ? ಅಂತರಂಗದೊಳಗೆ ಅದೆ ಎಂದರೇನು ಹೇಳಾ? ಮನ ಮುಟ್ಟಿ ಕಾಣಬಾರದು. ಬಹಿರಂಗದಲ್ಲಿ ಅದೆ ಎಂದರೆ, ಪೂಜಿಸುವನ್ನಕ್ಕರ ಕಾಣಬಾರದು. ಸಾಕಾರವಲ್ಲದ ನಿರಾಕಾರ ಲಿಂಗವು, ವ್ಯಾಕುಲ ವುಳ್ಳನ್ನಕ್ಕರ ಸಾಧ್ಯವಾಗದು, ಎನ್ನ ಮನದೊಳಗೆ ಘನವನನುಗೊಳಿಸಿ ತೋಱುವ ರಿಲ್ಲದ ಕಾರಣ, ಎನ್ನ ಅಜಗಣ್ಣನಿಕ್ಕಿದ ದಸರಿಡೊಡಕಿಂಗೆ ಬೆಱಗಾದನು ಕಾಣಾ ಪ್ರಭುವೆ! ೨೧

ಈ ಹೀಗೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಪ್ರಭುದೇವರು ಕೊಟ್ಟ ಪ್ರತ್ಯುತ್ತರ !

ತೆಱಹಿಲ್ಲದ ಘನವು ಕುಱುಹಿಂಗೆ ಬಾರದ ಮುನ್ನ ತೋಱಿದವರಾರು ಹೇಳಾ

ಮಹಾಲಿಂಗೈಕ್ಯವನು ? ಆ ಜ್ಯೋತಿಯ ಕೂಟದಲ್ಲಿ ನಾನಾರನೂ ಸಾಕ್ಷಿಯ ಕಾಣೆ. ಬೇಱೆ ಮಾಡಿ ನುಡಿಯಬಹುದೆ ಪ್ರಾಣಲಿಂಗವನು ? ಅಱಿವು ಸ್ವಯವಾಗಿ ಮಱಹು ನಷ್ಟವಾದರೆ, ಗೊಹೇಶ್ವರನೆಂಬ ಲಿಂಗವು ತಾನೆ ನೋಡಾ. ೨೨

ಇಂತು ಉಪದೇಶದಿಂದ ಮುನ್ನವೆ ಸಂಸಾರಾವಸ್ಥೆಯ ತೊಲಗಿಸಿ, ತನಗೆ ತಾನೆ ಲಿಂಗದಲ್ಲಿ ಲೀಯವಾಗಬೇಕೆಂಬ ಬುದ್ಧಿ ಹುಟ್ಟಿದ ಬಳಿಕ ಬಂದು ಗುರೂಪಾವಸ್ಥೆಯಂ ಮಾಡಿದ ಶಿಷ್ಯನು ತನ್ನಿಂದ ತಾನೆ ತಿಳಿದು, ತನ್ನ ತಾನೆ ಶಿವನೆಂದಱಿಯಬೇಕಲ್ಲದೆ, ಭಿನ್ನವಾಗಿ ಅಱಿಸಲಾಗದೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ.

ಗುರುವಚನದಿಂದಲ್ಲದೆ ಲಿಂಗವನಱಿಯಬಾರದು. ಗುರುವಚನದಿಂದಲ್ಲದೆ ಜಂಗಮವನಱಿಯಬಾರದು. ಗುರುವಚನದಿಂದಲ್ಲದೆ ಪ್ರಸಾದವನಱಿಯಬಾರದು ಗುರುವಚನದಿಂದಲ್ಲದೆ, ತನ್ನ ತಾನಱಿಯಬಾರದು. ಹಿಂದಣ ಜನ್ಮದಲ್ಲಿ ಲಿಂಗವ ಪೂಜಿಸಿ ಇಂದು ಜ್ಞಾನೋದಯವಾದರೆ, ಗುರುವಿಲ್ಲದ ಮುನ್ನ ಆಯಿತ್ತೆನ್ನಬಹುದೇ? ತನ್ನಲ್ಲಿ ತಾನು ಸನ್ನಹಿತನಾದಹೆನೆಂದರೆ, ಗುರುವಿಲ್ಲದೆ ಆಗದು ಕೇಳಾ. ಎನ್ನ ಅಜಗಣ್ಣನೆಂಬ ಗುರುವಿಲ್ಲದೆ ಆ ಜ್ಯೋತಿಯ ಕೂಟ ಸಮನಿಸದು ಕೇಳಾ ೨೩

ಇಂತು ಗುರುಕರುಣವಿಲ್ಲದೆ ತನ್ನಿಂದ ತಾನಾಗದೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ.

ಗುರುವಿಂಗೂ ಶಿಷ್ಯಂಗೂ ಆವುದು ದೂರ, ಆವುದು ಸಾರೆಯೆಂಬುದನಾರು ಬಲ್ಲರು ? ಗುರುವೆ ಶಿಷ್ಯನಾದ ತನ್ನ ವಿನೋದಕ್ಕೆ, ಶಿಷ್ಯನೆ ಗುರುವಾದ ತನ್ನ ವಿನೋದಕ್ಕೆ, ಕರ್ಮವೆಂಬ ಕೌಟಿಲ್ಯ ಎಡೆವೊಕ್ಕ ಕಾರಣ, ಭಿನ್ನವಾಗಿ ಇದ್ದಿತೆಂದರೆ ಅದು ನಿಶ್ಚಯವಹುದೇ ? ಆದಿಯನಾದಿಯಿಂದತ್ತತ್ತ ಮುನ್ನಲಾದ ಪರತತ್ತ್ವವಂ ತಿಳಿದು ನೋಡಲು, ನೀನೆ ಸ್ವಯಂಜ್ಯೋತಿ ಪ್ರಕಾಶನೆಂದಱಿಯಲು, ನಿನಗೆ ನೀನೆ ಗುರುವಲ್ಲದೆ ನಿನ್ನಿಂದಧಿಕವಪ್ಪ ಗುರು ಉಂಟೇ? ಇದು ಕಾರಣ ಗೊಹೇಶ್ವರ ಲಿಂಗವು ತಾನೆ ಎಂಬುದನೂ ನಿನ್ನಿಂದ ನೀನೆ ಅಱಿಯಬೇಕು ನೋಡಾ. ೨೪

ಇಂತು ಅನಾದಿಯಲ್ಲಿ ನೀನೆ ಪರಶಿವನಾಗಿಪ್ಪಲ್ಲಿ, ನಿನಗಾರೂ ಗುರುವಿಲ್ಲ. ಮಧ್ಯದಲ್ಲಿ ಕರ್ಮವೆಂಬ ಕನ್ನಡವ ಕಟ್ಟಿದಲ್ಲಿಯೂ ನಿನ್ನ ಜ್ಞಾನೋದಯದಿಂದವೆ ನಿನ್ನ ನೀ ತಿಳಿದೆಯಲ್ಲದೆ, ಅನ್ಯರ ಕೈಯಲ್ಲಿ ಆಗದು. ಅದು ಕಾರಣ ನೀನೆ ಪರತತ್ತ್ವ ತಿಳಿದು ನೋಡೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ :

ತನ್ನ ತಾನಱಿದವಂಗೆ ಅಱಿವೆಗುರು ಅಱಿವಱಿತು ಮಱಹು ನಷ್ಟವಾದಲ್ಲಿ,
ದೃಷ್ಟ ನಷ್ಟವೆ ಗುರು. ದೃಷ್ಟ ನಷ್ಟ ಗುರು ತಾನಾದಲ್ಲಿ, ಮುಟ್ಟಿ ತೋಱಿದವ
ರಿಲ್ಲದಡೇನು? ಸಹಜವ ನೆಲೆಗೊಳಿಸುವ ನಿರ್ಣಯನಿಃಪತ್ತಿಯೆ ಗುರು ನೋಡಾ.
ಗುರು ತಾನಾದಡೂ ಗುರುವಿಡಿದಿರಬೇಕು ಎನ್ನ ಅಜಗಣ್ಣನಂತೆ. ೨೫

ಇಂತು ಆವ ತೆಱದಲ್ಲಿಯೂ ಗುರುವಿಡಿದಲ್ಲದೆ ಆಗದೆಂದರೆ, ಪ್ರಭುದೇವರು
ಕೊಟ್ಟ ಪ್ರತ್ಯುತ್ತರ:

ಅಱಿವನಱಿದಿಹೆನೆಂಬುದು ಮಱವೆ. ಮಱಹ ಮಱಿದಹೆನೆಂಬುದು
ಮಱವೆ. ಸಾಕಾರ ನಷ್ಟ, ನಿರಾಕಾರ ದೃಷ್ಟವೆಂಬುದು ಭಾವದ ಬಳಲಿಕೆ. ಗುರು
ವೆಂಬುದು ಶಿಷ್ಯನೆಂದಲ್ಲಿಯೆ ಹೋಯಿತ್ತು. ಶಿಷ್ಯನೆಂಬುದು ಗುರುವೆಂದಲ್ಲಿಯೆ
ಹೋಯಿತ್ತು. ನಿರ್ಣಯದಲ್ಲಿ ನಿಜೈಕ್ಯನಾದಹೆನೆಂದರೆ, ಎಚ್ಚರಿಕೆಯಲ್ಲಿ ತಪ್ಪಿತ್ತು.
ಸಹಜ ಸಂಬಂಧಕ್ಕೆ ಗುರುವಲ್ಲದೆ, ಅಸಹಜಕ್ಕೆ ಗುರು ಉಂಟೇ? ಗೊಹೇಶ್ವರ
ಲಿಂಗದಲ್ಲಿ, ಪರವೆಂದಲ್ಲಿ ಗುರು ಉಂಟಲ್ಲದೆ, ಸಯವೆಂದಲ್ಲಿ ನುಡಿಯಲಿಲ್ಲ. ೨೬

ಇಂತು ತಾನು ಲಿಂಗವಾದಹೆನೆಂಬನ್ನಕ್ಕರ ಗುರುವುಂಟಲ್ಲದೆ, ತಾನು ತಾನೆ
ಯಾದ ಬಳಿಕ ಗುರು ತಾನೇಕೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾ
ಯಕ್ಕಗಳು ಕೊಟ್ಟ ಪ್ರತ್ಯುತ್ತರ:

ಅದ್ವೈತವ ನೆಲೆಗೊಳಿಸಿ ಎರಡಳಿದೆನೆಂಬವರು, ಶಿಶು ಕಂಡ ಕನಸಿನಂತಿರ
ಬೇಕಲ್ಲದೆ, ನುಡಿದು ಹೇಳುವನ್ನಕ್ಕರ ಭಿನ್ನವಲ್ಲದೇನು ಹೇಳಾ? ಅಱಿವಱಿತು
ಮಱಹು ನಷ್ಟವಾಗಿ ಗುರುವ ತೊಱಿದೆನೆಂಬವರು, ಇದಿರಿಂಗೆ ಕರುಳ ಕಲೆಯನಱು
ಹುವ ಪರಿಯೆಂತು ಹೇಳಾ? ಮನದ ಕೊನೆಯ ಮೊನೆಯ ಮೇಲಣ ಅಱಿವಿನ
ಕಣ್ಣ ಮುಂದೆ ಸ್ವಯಂಪ್ರಕಾಶ ತೋಱುತ್ತಿರ್ದಡೆ ತಾನಾಗಬಲ್ಲನೇ? ನೆಱೆಯಱಿತು
ಮಱಿಯಬಲ್ಲರೆ ಎನ್ನ ಅಜಗಣ್ಣನಂತೆ ಶಬ್ದಮುಗ್ಧವಾಗಿರಬೇಕಲ್ಲದೆ, ಶಬ್ದ
ಸಂದಣಿಯ ಮಾತು ಸಯವಲ್ಲ ನೋಡಾ ಪ್ರಭುವೆ. ೨೭

ನಿನ್ನ ನೀನಱಿತು ಪರಬ್ರಹ್ಮವಾದೆನೆಂದರೆ, ನಿಶ್ಯಬ್ದವೇದ್ಯವಾಗಿರಬೇಕಲ್ಲದೆ
ಶಬ್ದಸಂದಣಿ ಹಿಂಗದೆಂದರೆ, ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ಮಾತೆಂಬುದು ಜ್ಯೋತಿರ್ಲಿಂಗ. ಸ್ವರವೆಂಬುದು ಪರತತ್ತ್ವ ತಾಳೋಷ್ಟ
ಸಂಪುಟವೆಂಬುದೆ ನಾದಬಿಂದುಕಳಾತೀತ. ಗೊಹೇಶ್ವರನ ಶರಣರು ನುಡಿದು
ಸೂತಕಿಗಳಲ್ಲ ಕೇಳಾ ಮರುಳೆ. ೨೮

ಶಿವಶರಣರು ಶಬ್ದ ಸೂತಕಿಗಳಲ್ಲವೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ :

ನಡೆದು ನಡೆದು ನಡೆಯಱ ಕಂಡವರು, ನುಡಿದು ನುಡಿದು ಹೇಳುತ್ತಿಹರೆ? ನುಡಿದು ನುಡಿದು ಹೇಳುವನ್ನಕ್ಕರ, ನಡೆದುದೆಲ್ಲಾ ಹುಸಿಯೆಂಬೆನು. ಮಾತಿನ ಮಥನದಿಂದಱಿವು, ಕರಣಮಥನದಿಂದಾದವಲ್ಲದೆ, ಅನುಪಮ ಸ್ವರಭೇದವಾದ ಪರಿ ಎಂತು ಹೇಳಾ ? ಇದಿರ ಗೆಲಬೇಕೆಂದು ನುಡಿದುಕೊಂಡರೇನು ? ಮನಕ್ಕೆ ಮನವೆ ಸಾಕ್ಷಿಯಾಗಿ ನಿಱಪತಿಯಲ್ಲ ನೋಡಾ ! ಎನ್ನ ಅಜಗಣ್ಣತಂದೆ ಶಬುದಕ್ಕೆ ಹೇಸಿ ಮುಗುದನಾದನು. ೨೯

ಇಂತು ಇದಿರ ಗೆಲಬೇಕೆಂದು ನುಡಿವ ನುಡಿಗಳಿವಲ್ಲದೆ, ಅಱಿವನಱಿದು ಮಱೆದ ನುಡಿಗಳಿವಲ್ಲ. ಸಹಜಜ್ಞಾನ ನಿನಗಿಲ್ಲವೆಂದು ಬಿನ್ನೈಸಲು, ಪ್ರಭುದೇವರು ಕೊಟ್ಟ ಪ್ರತ್ಯುತ್ತರ :

ತನ್ನ ತಾನಱಿದಡೆ, ನುಡಿಯೆಲ್ಲಾ ತತ್ತ್ವ ನೋಡಾ ! ತನ್ನ ತಾಮಱೆದಡೆ, ನುಡಿಯೆಲ್ಲಾ ಮಾಯೆ ನೋಡಾ ! ಅಱಿದು ಮಱೆದ ಶಿವಯೋಗಿಯ ಶಬುದವೆಲ್ಲಾ ಉಪದೇಶವಲ್ಲದೆ ಭಿನ್ನ ಉಂಟೇ ? ನಿನ್ನ ಮನದ ಕಳವಳವ ತಿಳುಹಲೆಂದು ಮಾತನಾಡಿಸಿ ನೋಡಿದಡೆ, ಎನ್ನ ಮನದೊಳಗೆ ಕಂದುಕಲೆಯೆಂಬುದಿಲ್ಲ ನೋಡಾ. ನಮ್ಮ ಗೊಹೇಶ್ವರ ಲಿಂಗಕ್ಕೆ ನೀನು ಕರುಣದ ಶಿಶುವಾದ ಕಾರಣ ಬಾಯ್ದೆಗೆದೆನಲ್ಲದೆ ಭಿನ್ನ ಉಂಟೆ ಹೇಳಾ ಮರುಳೆ ?

ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ : ೩೦

ನುಡಿಯ ಹಂಗಿನ್ನು ನಿಮಗೆ ಹಿಂಗದು. ನಡೆಯನೆಂತು ಪರರಿಗೆ ಹೇಳುವಿರಿ ? ಒಡಲ ಹಂಗಿನ ಸುಳುಹು ಬಿಡದು ; ಎನ್ನೊಡನೆ ಮತ್ತೇತಱನುಭವವಣ್ಣಾ ? ತಾನಾದಲ್ಲದೆ ಇದಿರಿಂಗೆ ಹೇಳಬಹುದೆ ? ಅಱಿವ ತೋಱಬಲ್ಲರೆ, ತನ್ನನಱುಹದೆ ಅಱಿವನು ಕಾಣಾ ಎನ್ನ ಅಜಗಣ್ಣತಂದೆ. ೩೧

ನಿನಗಿನ್ನೂ ಒಡಲ ಹಂಗು ಬಿಡದು. ಮಾತಿನ ಮಥನ ಹಿಂಗದು. ಎನಗೇತಱಱಿವ ಹೇಳಿಹೆ ಹೋಗೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ :

ಅಂಗದ ಕಳೆ ಲಿಂಗದಲ್ಲಿ ಅಱತ ಬಳಿಕ, ಅಂಗವೆಂಬ ಶಂಕೆಯಿಲ್ಲ ನೋಡಾ

ಶರಣಂಗೆ. ಪ್ರಾಣನ ಕಳೆ ಅಱುವಿನಲ್ಲಿ ಅಱಿತ ಬಳಿಕ, ಶಬ್ದಸಂದಣಿಗೆ ಹಂಗಿಲ್ಲ ನೋಡಾ. ಶರಣ ನಡೆದರೆ ನಿರ್ಗಮನಿ, ನುಡಿದರೆ ನಿಶ್ಶಬ್ದ ಗೊಹೇಶ್ವರನ ಶರಣಂಗೆ ಕುಱುಹಿಲ್ಲ ಕೇಳಾ ಎಲೆ ಅವ್ವಾ.

ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ :

ಕಯ್ಯದು ಕುಱುಹು, ಬಾಯದು ಬೊಬ್ಬೆ ! ಉಲಿಯದಿರೊ ಭಾವಾ, ಉರಿಯದಿರೊ ಭಾವಾ ! ವಾರಿಕಲ್ಲ ಕೊಡನಲ್ಲಿ ಮುತ್ತು ಮಾಣಿಕ್ಯವ ತುಂಬಿ, ಎತ್ತುವರಿಲ್ಲದೆ ಸಖಿಯನಱಸುತ್ತಿರ್ಪೆ. ಮನದ ತನುವಿನಲ್ಲಿ, ಆ ತನುವಿನ ಮನದಲ್ಲಿ ತನಗೆ ತಾನೆತ್ತಿಕೊಂಡರೆ, ಮನ ಮೇರೆದಪ್ಪಿ ಕರಗಿ ಉಕ್ಕಿತ್ತು ನಮ್ಮ ಅಜಗಣ್ಣನ ಯೋಗಾ ! ೩೩

ಇಂತು ಜಲಬಿಂದು ಸ್ವರೂಪಮಪ್ಪ ನಿನ್ನ ತನುವೆಂಬ ಘಟದಲ್ಲಿ ಜ್ಞಾನವೆಂಬ ರತ್ನವ ತುಂಬಿ, ನಿನಗೆ ನೀನೆ ಧರಿಸಲಱಿಯದೆ ಇನ್ನು ಸಖಿಯರನಱಸುತ್ತಿರ್ಪೆ ನಿನ್ನ ಅಱುವೇತಱದೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ :

ಅಱುವುಗೆಟ್ಟು, ಮಱಹಳಿದು, ಭಾವಭ್ರಾಂತು ನಿಭ್ರಾಂತವಾದವರ ಕಯ್ಯಲ್ಲಿ ಕುಱುಹನಱಸುವರೆ ಹೇಳಾ ? ತಾನಳಿದು, ತಾನುಳಿದು, ತಾನು ತಾನಾದ ನಿಜ ಶರಣಂಗೆ ಅಂತರಂಗದಲ್ಲಿ ಒಂದು ಅಱುವುಂಟೆ? ಗೊಹೇಶ್ವರನ ಶರಣನ ನಿಲವು ಕಾಯಗೊಂಡವರ ಕಣ್ಣಿಂಗೆ ಸಂದೇಹವಾಗಿಪ್ಪುದು ; ನಿಸ್ಸಂದೇಹಿಗಳಿಗೆ ನಿಜ ವಾಗಿಪ್ಪುದು ನೋಡಾ ಮರುಳೆ. ೩೪

ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಈ ಉತ್ತರಕ್ಕೆ ಮುಕ್ತಾಯಕ್ಕ ಗಳು ಕೊಟ್ಟ ಪ್ರತ್ಯುತ್ತರ

ನುಡಿಯೆನೆಂಬಲ್ಲಿಯೆ ನುಡಿಯಡೆ. ನಡೆಯನೆಂಬಲ್ಲಿಯೆ ನಡೆಯಡೆ. ಭಾವಿಸೆ ನೆಂಬಲ್ಲಿಯೆ ಭಾವವಡೆ. ಅಱದು ಮಱೆದೆನೆಂದಲ್ಲಿಯೆ ಅಱುವು ಮಱವೆಯಡೆ. ಅಂಗದಲ್ಲಿ ಲಿಂಗ ಲೀಯವಾಯಿತ್ತೆಂಡರೆ, ಅಲ್ಲಿಯೆ ಅಂಗವಡೆ. ಅನಂಗಸಂಗಿಯಾದೆ ನೆಂಬಲ್ಲಿಯೆ ವಿಷಯಸೂತಕವಡೆ. ನಾನೆ ನಾನಾದೆನೆಂಬಲ್ಲಿ ನೀನೆಂಬುದಡೇ. ಅಱದು ಮಱೆದಪರಿ ಎಂತು ಹೇಳಾ? ಅಱುವು ನಷ್ಟವಾಗಿ ಮಱಹು ಲಯವಾಗಿಪ್ಪರೆ, ಎನ್ನ ಅಜಗಣ್ಣ ತಂದೆಯಲ್ಲದೇ ಮತ್ತಾರನು ಕಾಣೆ. ೩೫

ಈ ಹೀಗೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ;

ಅಂಗ ಅನಂಗವೆಂಬೆರಡೂ ಅಳಿದು, ನಿಜದಲ್ಲಿ ನಿಂದ ಲಿಂಗೈಕ್ಯನ ಅಂಗದ ಲುಳ್ಳ ಕ್ರೀಗಳೆಲ್ಲವೂ ಲಿಂಗಕ್ರೀಗಳು ನೋಡಾ. ಮನೋಲಯವಾಗಿಪ್ಪ ನಿಜ ಲಿಂಗೈಕ್ಯನ ಅನುಭಾವವೆಲ್ಲವೂ ಜ್ಞಾನನಷ್ಟ ಶಬ್ದ ನೋಡಾ. ತನ್ನಲ್ಲಿ ತಾನು ತದ್‌ಗತವಾಗಿಪ್ಪ ಶಿವಯೋಗಿಗೆ ಭಿನ್ನವಿಲ್ಲ ನೋಡಾ. ಗೊಹೇಶ್ವರ ಸಾಕ್ಷಿಯಾಗಿ. ೩೬

ಈ ಹೀಗೆಂದು ಪ್ರಭುದೇವರು ತಮ್ಮ ನಿಜಪದದ ನಿಲವ ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ:

ಸಿಡಿಲು ಹೊಯಿದ ಬಾವಿಗೆ ಸೋಪಾನವೇಕೋ? ನೆಱೆಯಱಿದ ಬಳಿಕ ಮತ್ತೆ ಮತಿ ಹುಟ್ಟಲುಂಟೇ? ಸೊಡರುಳ್ಳ ಮನೆಗೆ ಮತ್ತೆ ತಮಂಧವೆಂಬುದೇನೋ? ತನ್ನಲ್ಲಿ ತಾನು ತದ್‌ಗತವಾದ ಬಳಿಕ, ಬ್ರೊಮ್ಮ ಪರಬ್ರೊಮ್ಮವಾದೆನೆಂಬುದಿಲ್ಲ ನೋಡಾ, ಎನ್ನ ಅಜಗಣ್ಣ ತಂದೆಗೆ.

ಈ ಹೀಗೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ನುಡಿಯಿಂದ ನಡೆಗೆಟ್ಟಿತ್ತು; ನಡೆಯಿಂದ ನುಡಿಗೆಟ್ಟಿತ್ತು. ಭಾವದ ಗುಸುಟು, ಅದು ತಾನೆ ನಾಚಿ ಮಾದುದು ನೋಡಾ! ಗೊಹೇಶ್ವರನೆಂಬ ಅಱಿವು ಸಿನೆ ಬಂಜೆಯಾದುದಲ್ಲಾ!

ಈ ಹೀಗೆಂದು ಪ್ರಭುದೇವರು ತಮ್ಮ ನಿಜಪದದ ನಿಲುವ ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಪರಾಮರಿಸಿದ ಪ್ರತ್ಯುತ್ತರ:

ಆಹುದಹುದು, ಶಿವಶರಣರ ಮಹಿಮೆ ಆರಿಗೆಯೂ ಕಾಣಬಾರದು. ಕಬ್ಬುನ ಉಂಡ ನೀರಿನಂತೆ, ಕಬ್ಬಿಸಿಲುಂಡ ಅರಿಸಿನದಂತೆ, ಉರಿಯೊಳಡಗಿದ ಕರ್ಪುರದಂತೆ, ಬಯಲನಪ್ಪಿದ ವಾಯುವಿನಂತೆ ಇಪ್ಪನಿಲವ ನುಡಿದು ಹೇಳಿಹೆನೆಂಬ ಮಾತಿಂಗೆ ಆಳವಡುವುದೆ? ಅಱಿವಡೆ ಮತಿಯಿಲ್ಲ, ನೆನೆವರೆ ಮನವಿಲ್ಲ. ಎನ್ನ ಅಜಗಣ್ಣ ತಂದೆಯನೊಳಕೊಂಡಿಪ್ಪ ನಿಮ್ಮ ಮಹಿಮೆಗೆ ನಮೋ ನಮೋ ಎನುತಿರ್ದೆನು. ೩೯

ಈ ಹೀಗೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ನಿರವಯಲ ಸಮಾಧಿಯ ಭೇದಮಂ ನಿರೂಪಿಸುತ್ತಿರ್ದ ಪ್ರಸ್ತಾವದ ವಚನ:

ಮುಕ್ತಿಗೆ ಮುಖವಾಗಿ, ಯುಕ್ತಿಗೆ ಹೊಱಗಾಗಿ, ಅಱಿವಿಂಗೆ ಅಱಿವಾಗಿಪ್ಪ ಭೇದ ಕಾಣಬಂದಿತ್ತು ನೋಡಾ ! ಅಱಿವಱಿತು, ಮಱಹು ನಷ್ಟವಾಗಿಪ್ಪುದು; ನಿನ್ನಲ್ಲಿ ಸನ್ನಹಿತವಾಗಿಪ್ಪುದು. ಗೊಹೇಶ್ವರನ ಶರಣ ಅಜಗಣ್ಣನ ನಿಲವು, ಬಯಲ ಬೆರಸಿದ ಮರೀಚಿಯಂತಾಯಿತ್ತು ; ಬೆರಸಿ ನೋಡಾ ಬೇಱಿಲ್ಲದೆ. ೪೦

ಇಂತು ಪ್ರಭುದೇವರು ಮಹಾಲಿಂಗೈಕ್ಯದ ಭೇದಮಂ ನಿರೂಪಿಸಲು, ಮುಕ್ತಾಯಕ್ಕಗಳು ಆ ಉಪದೇಶಮಂ ಮನೋಲಯಸ್ಥಾನದೊಳು ಧರಿಸಿ, ನಿತ್ಯ ನಿರವಯಲ ಸಮಾಧಿಯೊಳು ನಿಜವನೆಯ್ದಿದ ಪ್ರಸ್ತಾವದ ವಚನ:

ಘನ ಮಹಿಮಶರಣರ ಸಂಗದಿಂದ ಘನಕ್ಕೆ ಘನ ವೇದ್ಯವಾದ ಬಳಿಕ ಅಱಿಯಲಿಲ್ಲ, ಮಱೆಯಲಿಲ್ಲ; ಕೂಡಲಿಲ್ಲ, ಅಗಲಲಿಲ್ಲ. ಮನ ಮೇರೆದಪ್ಪಿ ನಿರವಯಲಾದ ಸುಖವ ಶೂನ್ಯ ನಿಶ್ಶೂನ್ಯವೆಂದು ನುಡಿಯಲುಂಟೆ ? ಶಬ್ದ ಮುಗ್ಧವಾಗಿ ಎನ್ನ ಅಜಗಣ್ಣ ತಂದೆಯ ಬೆರಸಿದ ಬಳಿಕ, ಉರಿಯುಂಡ ಕರ್ಪುರದಂತಾದೆನಯ್ಯಾ! ೪೧

ಇಂತೀ ಶ್ರೀಮತ್ ಸಕಲಗಣ ಪುರಾತನರೊಳ್ ಪ್ರಭುದೇವರು ಮಹಾನುಭಾವಸದ್ಗೋಷ್ಠಿಯಂ ಮಾಡಿದ ಶೂನ್ಯಸಂಪಾನೆಯೊಳ್

ಮುಕ್ತಾಯಕ್ಕಗಳ ಸಂಪಾದನೆಯಂ
ದ್ವಿತಿಯೋಪದೇಶ ಸಮಾಪ್ತಂ

ವಿದ್ಯುಚ್ಚೋರನೆಂಬ ರಿಸಿಯ ಕಥೆಯಂ ಪೇೞ್ವೆಂ :

ಗಾಹೆ ॥ ದಂಸೇಹಿಯ ಮಸಕೇಹಿ ಯ ಖಜ್ಜಂತೋ ವೇದಣಂ ಪರಮಘೋರಂ ।
ವಿಜ್ಜುಚ್ಚೋರೋ ಅಧಿಯಾಸಿಯ ಪಡಿವಣ್ಣೋ ಉತ್ತಮಂ ಅಟ್ಠಂ ॥

[ದಂಸೇಹಿಯ-ಚಿಕ್ಕುಟುಗಳಿಂದಂ, ಮಸಕೇಹಿ ಯ-ಗುಂಗುಱುಗಳಿಂದಂ, ಖಜ್ಜಂತೋ-ತಿನೆಪಡುತಿರ್ದೋನಾಗಿ, ವೇದಣಂ-ವೇದನೆಯುಂ, ಪರಮಘೋರಂ-ಆದಮಾನುಂ ಕಡಿದಪ್ಪುದಂ, ವಿಜ್ಜುಚ್ಚೋರೋ – ವಿದ್ಯುಚ್ಚೋರನೆಂಬ ರಿಸಿ, ಅಧಿಯಾಸಿಯ-ಲೇಸಾಗಿ ಸೈರಿಸಿ, ಪಡಿವಣೋ ೧ – ಪೊರ್ದಿದೊಂ, ಉತ್ತಮಂ ಅಟ್ಠಂ-ಮಿಕ್ಕ ದರ್ಶನ ಜ್ಞಾನಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ವಿದೇಹವೆಂಬುದು ನಾಡಲ್ಲಿ ಮಿಥಿಳೆಯೆಂಬುದು ಪೊೞಲದನಾಳ್ವೊಂ ಪದ್ಮರಥನೆಂಬೊನರಸನ ಸಂತತಿಯಿಂ ಬಂದ ವಾಮರಥನೆಂಬೊನರಸನಾತನ ಮಹಾದೇವಿ ಬಂಧುಮತಿಯೆಂಬೊಳಂತವರ್ಗ್ಗಳಿಷ್ಟ ವಿಷಯ ಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತಾಪೊೞಲೊಳ್ ಯಮದಂಡನೆಂಬೊಂ ತಳಾಱಂ ಮತ್ತಲ್ಲಿ ಇರ್ಪೊಂ ವಿದ್ಯುಚ್ಚೋರನೆಂಬೊಂ ಕಳ್ಳನಾತಂ ಜೃಂಭಿನಿ ಸ್ತಂಭಿನಿ ಮೋಹಿನಿ ಸರ್ಷಪಿ ತಾಳೋದ್ಘಾಟನಿ ವಿದ್ಯಾಮಂತ್ರ ಚೂರ್ಣಯೋಗ ಘುಟಿಕಾಂಜನಮೆಂದಿವು ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳಾದಮಾನುಂ ಕುಶಲನಂತಪ್ಪ ಕಳ್ಳಂ ಪೊೞಲ ಕಸವರಂಗಳನಿರುಳ್ ಕಳ್ದು ಪೊೞಲ್ಗೆ ನಾಡೆಯಂತರದೊಳೊಂದು ಪರ್ವತಮುಂಟಲ್ಲಿ ಪಿರಿದೊಂದು ಗುಹೆಯುಂಟದಱೊಳಗೆ ಕಳ್ದ ಕಸವರಂಗಳೆಲ್ಲಮಂ ಪೊಟ್ಟಿಟ್ಟು ಗುಹೆಯ ಬಾಗಿಲಂ ಪಿರಿದೊಂದು ಸಿಲೆಯಂ ತಂದಿಟ್ಟು ಮುಚ್ಚಿ ಬಂದು ಪಗಲೆಲ್ಲಂ ಪಾೞ್ದೇಗುಲದೊಳಂಜನಮನೆಚ್ಚಿ ತಾಂ ತೊನ್ನನಾಗಿ ಮುರುಂಟಿದ ಕೈಯುಮಂ ಕಾಲುಮಂ ಪಿರಸು ಮೂಗೊಳಗರ್ದು ರಸಿಗೆ ಸುರಿಯೆ ನೊೞವುಗಳ್ ಮುಸುಱಿಕೊಂಡು ತಿನೆ ಪೇಸಿದನಾಗಿ ಲೋಗರ ಮನೆಗಳೊಳ್ ಭೈಕ್ಷಮಂ ಬೇಡಿ ಮನೆಮನೆಯಂ ತೊೞಲ್ದು ತನ್ನ ತೊನ್ನುಗೊಂಡಿರ್ಪುದಱಿನಪುತ್ತುಮಿಂತು ಪಗಲೆಲ್ಲಮಿರ್ದಿರುಳಪ್ಪಾಗಳ್ ದಿವ್ಯಮಪ್ಪ ತನ್ನ ಸ್ವಾಭಾವಿಕಮಪ್ಪ ಮುನ್ನಿನ ರೂಪಂ ಕೈಕೊಂಡು ಪುಟ್ಟಿಗೆಯನುಟ್ಟು ಮೆಯ್ಯಂ ಪೂಸಿ ಪೂವಂ ಮುಡಿದು ಕರ್ಪೂರ ಸಂಮಿಶ್ರಿತಮಪ್ಪ ತಂಬುಲಂದಿನುತ್ತುಂ ಸೂಳೆಗೇರಿಗಳಂ ತೊೞಲ್ದು ತನ್ನಂ ಮೆಱೆಯುತ್ತಂ ಮನಕ್ಕೆ ವಂದಗ್ಗಳದೊಳ್ಪೆಂಡಿರೊಳೊತ್ತೆಯನಿಟ್ಟು ಭೋಗೋಪಭೋಗಂಗಳ್ಗೆ ಕಸವರಮಂ ಕೊಟ್ಟನುಭವಿಸುತ್ತ ಮಾರುಮಱೆಯಂತಿರ್ದು ಬಚ್ಚರ ದೂಸಿಗರ ನಿಯೋಗಿಗಳ ಅಗ್ಗಳಮಪ್ಪ ಸೂಳೆಯರ

ಸಾಮಂತರ ಕಸವರಂಗಳೆಲ್ಲಮಂ ಕಳ್ದು ಮತ್ತೊಂದು ದಿವಸಂ ಪದ್ಮರಥಂಗೊಸೆ ದಚ್ಯುತೇಂದ್ರನಟ್ಟಿದ ದಿವ್ಯಮಪ್ಪ ಸರ್ವರುಜಾಪಹಾರಮೆಂಬ ಹಾರಂ ಸಂತತಿಯಿಂ ವಾಮರಥಂಗೆ ಬಂದುದಂ ವಾಮರಥಂ ಕರುಮಾಡದೇೞನೆಯ ನೆಲೆಯೊಳ್ ತನ್ನ ಲುಂಡವೋವರಿಗೆಯ ಪುಡಿಕೆಯೊಳಿಟ್ಟಿಲ್ಲಾ ಕಾಲಮುಂ ಗಂಧ ಪುಷ್ಪ ದೀಪ ಧೂಪಾಕ್ಷತಂಗಳಿಂದರ್ಚಿಸುತ್ತಂ ಪೊಡೆಮಡುತ್ತಮಿರ್ಕ್ಕುಮಿಂತಪ್ಪ ಹಾರಮಂ ವಿದ್ಯುಚ್ಚೋರನಂಜನಮಂ ಕಣ್ಣೊಳೆಚ್ಚಿಯಾರುಂ ತನ್ನಂ ಕಾಣದಂತಾಗಿರೆ ಅರ ಮನೆಯಂ ಪೊಕ್ಕರಸನ ಮೞಲುಂದುವೋವರಿಯಂ ಪೊಕ್ಕು ತಲೆದೆಸೆಯೊಳರ್ಚಿಸಿರ್ದ ಪುಡಿಕೆಯಂ ತೆಱೆದು ಹಾರಮಂ ಕೊಂಡರಮನೆಯಿಂ ಪೊಱಮಟ್ಟು ಪೋಗಿ ಪೊಱ ವೊ .ಲ ಗುಹೆಯೊಳ್ ಪೂೞ್ದಿಟ್ಟು ಪೊೞಲ್ಗೆವಂದು ಮುನ್ನಿನಂತೆ ತೊನ್ನ ರೂಪಂ ಕೈಕೊಂಡಿರ್ದಂ.

ಮತ್ತಿತ್ತರಸಂ ನೇಸರ್ಮೂಡೆ ಹಾರಮಂ ಕಾಣದೆ ಆಸ್ಥಾನಮಂಟಪದೊಳ್ ಸಿಂಹಾಸನಮಸ್ತಕಸ್ಥಿತನಾಗಿರ್ದು ತಳಾಱನಪ್ಪ ಯಮದಂಡಂಗೆ ಬೞಿಯಟ್ಟಿವರಿಸಿ ಇಂತೆಂದನೆಲವೊ ಯಮದಂಡಾ ಪೊೞಲ ಪಾರ್ವರ ಪರದರ ಸೂಳೆಯರ ಒಕ್ಕಲ ಮಕ್ಕಳ ಕಸವರಮೆಲ್ಲಮಂ ಕಳ್ದೊಡಮಾರಯ್ಯದೆ ಕೆಮ್ಮಗಿರ್ಪೆಯಲ್ಲದೆಯುಮೆಮ್ಮ ಸೆಜ್ಜೆಯೋವರಿಯಂ ಕಳ್ಳಂ ಪೊಕ್ಕು ಪುಡಿಕೆಯಂ ತೆಱೆದಚ್ಯುತೇಂದ್ರನಿತ್ತ ಕುಲಧನ ಮಪ್ಪ ಹಾರಮಂ ಕೊಂಡುಪೋದಂ ಬೇಗಂ ಕಳ್ಳನನಾರಯ್ದು ಹಾರಮಂ ಕೊಂಡು ಬಾ ಅಲ್ಲವಾಗಳ್ ಕಳ್ಳಂಗೆ ತಕ್ಕ ನಿಗ್ರಹಮಂ ನಿನಗೆ ಮಾಡಿದಪ್ಪೆನೆಂದೊಡೆ ತಳಾಱ ನೆಂದಂ ದೇವಾ ಏೞುದಿವಸಮೆನಗೆಡೆಯನೀವುದೇೞುದಿವಸದಿಂದೊಳಗೆ ಕಳ್ಳನ ನಾರಯ್ಯಲಾಱದಾಗಳ್ ದೇವರೆನ್ನಂ ಮೆಚ್ಚುಕೆಯ್ವುದೆಂದೊಡರಸನಂತೆಗೆಯ್ಯೆಂ ದೊಡರಮನೆಯಿಂದಂ ಪೊಱಮಟ್ಟು ಪೊೞಲೊಳಗೆ ಸೂಳೆಗೇರಿಗಳೊಳಮಂಗಡಿ ಗಳೊಳಂ ಬಸದಿಗಳೊಳಂ ವಿಹಾರಂಗಳೊಳಂ ಕೇರಿಗಳೊಳಮೂರಮೊಗಳೊಳಂ ದೇವಾಲಯಂಗಳೊಳಂ ಪೊಱವೊೞಲೊಳಂ ಕೆಲದ ಪೊೞಲ್ಗಳೊಳಮಾಱುಂ ದಿವಸಂ ನಿರಂತರಮಾರಯ್ದೆಲ್ಲಿಯುಂ ಕಾಣದೇೞನೆಯ ದಿವಸದಂದು ಪಾೞ್ದೇಗುಲ ದೊಳಿರ್ದು ತೊನ್ನಂ ಪೋಪಾಗಳ್ ಪಿರಿದೊಂದು ಕಿಱುವಳ್ಳಮಂ ಕಂಡದಂ ವಿದ್ಯಾಧರ ಕರಣದಿಂ ಲಂಘಿಸಿ ಪೋಪುದಂ ಯಮದಂಡಂ ಗೆಂಟೞೊಳಿರ್ದು ಕಂಡಿ ವನೆ ಕಳ್ಳನೆಂದು ನಿಶ್ಚಯಿಸಿ ಪಿಡಿದರಮನೆಗೆ ಪುಯ್ಯಲಿಡೆಯಿಡೆ ಕೊಂಡುಪೋಗಿ ಯರಸಂಗೆ ಕಳ್ಳನಂ ತಂದೆನೆಂದು ತೋಱಿ ಈತಂ ಕಳ್ಳನೆಂದರಸಂಗೆ ಪೇೞ್ದೊಡೆ ತೊನ್ನನಿಂತೆಂದಂ

ದೇವಾ ನಾಂ ಕಳ್ಳನಲ್ಲದುದರ್ಕ್ಕೆ ಪೊೞಲೆಲ್ಲಮಱಿಗುಂ ಕಳ್ಳನನಾರಯ್ಯಲಾಱ ದೆನ್ನಂ ತನ್ನ ಸಾವಿಂಗಂಜಿ ಬಡವನಂ ದೇಸಿಗನಂ ಪೊೞಲೊಳ್ ಬೈಕಂದಿರಿದುಂಡು ಬಾೞ್ವನಂ ಪಿಡಿದುಕೊಂಡು ಬಂದು ಕೊಲಿಸಿದಪ್ಪನೆಂದೊಡೆ ತಳಾಱಂ ಕಳ್ಳರ ನಾರಯ್ವ ಶಾಸ್ತ್ರಂಗಳೊಳಾದಮಾನುಂ ಕುಶಲನಪ್ಪುದಱಿಂದರಸಂಗಿಂತೆಂದನೀತಂ

ತನ್ನ ರೂಪುಗಳೆದಿರುಳ್ ಪೊಟ್ಟಲೆಲ್ಲಮಂ ಕಳ್ದು ದಿವಸಕ್ಕೀ ಪಾಂಗಿನೊಳ್ ತೊನ್ನ ನಾಗಿರ್ಪೊಂ ನೀಮುಂ ನಂಬವಾಗಳ್ ಪ್ರತ್ಯಯಮಮಂ ಮಾಡಿ ತೋರ್ಪೆನೆಂದಾಗಳ್ ಪ್ರತಿಘುಟಿಕಾಂಜನಂಗಳಂ ತೊನ್ನನ ಕಣ್ಣಿನೊಳೆಚ್ಚಿದೊಡೆ ದಿವ್ಯಮಪ್ಪ ತನ್ನ ಮುನ್ನಿನ ರೂಪಾಗಿ[ರ್ದಿ]ಂತೆಂದನೀತಂ ಘುಟಿಕಾಂಜನ ಕುಹಕಂ ಇಂದ್ರಜಾಲಂ ಗಳಂ ಬಲ್ಲೊನಪ್ಪುದಱಿಂದೆಲ್ಲಾ ರೂಪುಗಳಂ ಮಾಡಲ್ ಬಲ್ಲೊನೆಂದೊಡೆ ತಳಾಱಿ ನೆಂದಂ ಪೆಱಗ್ಗೆ ಮಾಡೀ ಪ್ರತ್ಯಯಮಮಂ ತೋರ್ಪೆನೆಂದರಸನನುಮತದಿಂದರಸಿಯರ ಸೂಳೆಯರ ಕಣ್ಗಳೊಳ್ ಘುಟಿಕಾಂಜನಂಗಳ ನೆಚ್ಚಿದೊಡನಿಬರುಂ ತೊನ್ನೆಯರಾ ಗಿರ್ಪ್ಪನ್ನೆಗಂ

ಮತ್ತಂ ಬ...ಕ್ಕೆ ಪ್ರತಿಘುಟಿಕಾಂಜನಗಳನೆಚ್ಚಿದೊಡೆ ಸ್ವಾಭಾವಿಕಮಪ್ಪ ತಮ್ಮ ಮುನ್ನಿನ ರೂಪುಗಳಂ ಕೈಕೊಂಡಿರ್ದ್ದೊರಾಗಳರಸಂಗೆ ನಂಬುಗೆಯಾಗಿ ನೆಟ್ಟ ನಿವಂ ಕಳ್ಳನಪ್ಪೊನೀತನಂ ದಂಡಿಸೆಂದು ಯಮುದಂಡಂಗೆ ಬೆಸವೇೞ್ದೊಡಾತನಂತೆ ಗೆಯ್ವೆನೆಂದಾತನಂ ತನ್ನ ಮನೆಗೊಡಗೊಂಡು ಪೋಗಿ ಮಾಘಮಾಸದಿರುಳ್ ಕಡು ಸೀತದೊಳ್ ಘೋರಮಪ್ಪ ಮೂವತ್ತೆರಡು ದಂಡಣೆಗಳಿಂ ನೀಡುಂ ದಂಡಿಸೆಯು ನಿತುಮಂ ಬಾೞ್ವಾೞಿ ಅವಯುವದೆ ಸೈರಿಸಿಯುಂ ಕಳ್ಳನಲ್ಲೆನಯ್ಯೋ ಬಲ್ಲಾಳ್ತನ ದಿಂದೆನ್ನಂ ತಳಾಱಂ ಕೊಂದಪ್ಪನೆಂದೊಳಱಿ ಪುಯ್ಯಲಿಡೆ ತಳಾಱಂಗೆ ಕಳ್ಳ ನೀತನಲ್ಲೆಂಬುದೊಂದು ನಂಬುಗೆಯಾಗೆ ನೇಸಱ್ ಮೂಡೆಯರಮನೆಗೆ ಪೋಗಿ ಅರಸಂಗಿಂತೆಂದು ಬಿನ್ನಪಂಗೆಯ್ದಂ.

ದೇವಾ ಮೂವತ್ತೆರಡು ಘೋರಮಪ್ಪ ದಂಡಣೆಗಳಿಂದಂ ಕಳ್ಳನಂ ದಂಡಿಸಿ ನೋಡಿದೆನಾತನಪೋಘಂ ಕಳ್ಳನಲ್ಲೆನ್ನಂ ದೇವರ್ ಮೆಚ್ಚುಕೆಯ್ವುದೆಂದೊಡರಸಂ ಶ್ಮಶಾನದ ಸೂಲದೊಳ್ ಯಮುದಂಡನನಿಕ್ಕಿಮೆಂದಾಳ್ಗಳ್ಗೆ ಬೆಸವೇೞ್ದೊಡವರು ಮಾತನಂ ಶ್ಮಶಾನಕ್ಕೆೞೆದುಕೊಂಡು ಪೋಗಿ ದಕ್ಕ್ರಂ ಬಸಿದು ಸೂಲದೊಳಿಕ್ಕು ವಾಗಳವರೊಡವೋಗಿ ತೊನ್ನಂ ರೂಪಪರಾವರ್ತನಂಗೆಯ್ದು ತನ್ನ ಸ್ವಾಭಾವಿಕಮಪ್ಪ ವಿದ್ಯುಚ್ಚೋರನಪ್ಪ ದಿವ್ಯರೂಪಂ ಕೈಕೊಂಡು ಸೂಲದೊಳಿಕ್ಕಲೀಯದೆ ಅಡ್ಡ ಮಾಗಿರ್ದರಸನ ಕಾಪಿನವರನೆಂದನೆಲೆಯಣ್ಣಗಳಿರಾ ನೀಮಿಮಾತನಂ ಕೊಂದಿರೀತನುಂ ಸೂಲದೊಳಿಕ್ಕೆ ಪಟ್ಟನಾಗಿ ಸತ್ತುವನೆಂದವರೊಳ್ ನುಡಿದು ತಳಾಱನನಿಂತೆಂದನೆಲೆ ಗಳಾ ಯಮುದಂಡಾ ನೀನುಮಾನುಂ ಕಿಱಿಯಂದೊರ್ವರುಪಾಧ್ಯಾಯರ ಪಕ್ಕ ದೊಳೋದುವಂದು ನಂದನ ವನದೊಳಗೆ ನೀನೆನ್ನ ಪೂಣ್ದ ಪ್ರತಿಜ್ಞೆಯಂ ನೆನೆವಾ ಒಂದುಂ ದೋಷಮಿಲ್ಲದೆ ನಿನ್ನಂ ಕೊಲಿಸಿದೆನೊ ಕೊಲಿಸೆನೊ ಪೂಣ್ದ ಪ್ರತಿಜ್ಞೆಯಂ ನೆನೆವೆಯೊ ನೆನೆಯೆಯೊ ಎನೆ ಯಮುದಂಡನೊಳ್ಳಿತ್ತಾಗಿ ನೆನೆದೆನೆಂದೊಡೆ ವಿದ್ಯು ಚ್ಚೋರನಿಂತೆಂದಂ ಮತ್ತೀಗಳ್ ನೀನೇನ್ ಸತ್ತೆಯೊ ಸಾಯೆಯೊ ಮತ್ತೇನೊ ಎಂಬಾಗಳ್ ಯಮದಂಡನೆಂದಂ ದೇವಾ ನೀಂ ಗೆಲ್ದೆಯಾಂ ಸೋಲ್ತೆನುಂ ಸತ್ತೆನು ಮೆಂದಿರ್ವರ್ ಪದಿರಿನಿಂ ನುಡಿವ ಸೂೞ್ಮಾತುಗಳಂ ಕಾಪಿನವರುಂ ಪೊೞಲ

ಜನಮುಂ ಕೇಳ್ದು ಚೋದ್ಯಂ ಬಟ್ಟು ಬೆಱಗಾಗಿರ್ದೊಡೆ ವಿದ್ಯುಚ್ಚೋರಂ ಕಾಪಿನವರ ನಿಂತೆಂದನೆನ್ನುಮನೀತನುಮನರಸನಲ್ಲಿಗೆ ಕೊಂಡು ಪೋಗಿಮರಸನ ಮುಂದೀತಂಗ ಮೆನಗಂ ಮಾತುಂಟಲ್ಲಿ ನುಡಿದ ಬೞಿಕ್ಕರಸನೀತನಂ ನೆಱ್ಚುಕೆಯ್ಗೆ ಎಂತುಂ ಕೊಲ ವೇೞ್ಕುಮೊಡಂ ಮೂಱು ಸೂೞ್ ಬೆಸಗೊಂಡಲ್ಲದೆ ಕೊಲಲಾಗದೆಂದು ನೀತಿಶಾಸ್ತ್ರ ದೊಳ್ ಪೇೞ್ದುದಂ ಱಿದೆಮ್ಮಿರ್ವರುಮನರಸನಲ್ಲಿಗೆ ಕೊಂಡುಪೋಗಿ ಅರಸಂಗೆ ತೋಱಿಮೆಂದೊಡಾ ಕಾಪಿನವರಿರ್ವರುಮನರಸನಲ್ಲಿಗೆ ಕೊಂಡುಪೋಗಿ ಇಂತೆಂದು ಬಿನ್ನಪಂ ಗೆಯ್ದರ್ ದೇವಾ ಈತಂ ಯಮದಂಡನಂ ಕೊಲಲೀಯದೆ ಬಾರಿಸಿದ ನೆಂದು ವಿದ್ಯುಚ್ಚೋರನಂ ತೋಱಿ ನುಡಿದೊಡರಸನೇಕೆ ನೀಂ ಬಾರಿಸಿದೆಯೆಂದು ಬೆಸಗೊಂಡೊಡೆ ವಿದ್ಯುಚ್ಚೋರನೆಂದಂ.

ಯಮದಂಡಂಗೇನುಂ ಪೊಲ್ಲಮೆಯುಂ ದೋಷಮುಮಿಲ್ಲ ನಿಮ್ಮ ದೇವತಾ ರಕ್ಷಿತಮಪ್ಪ ಸರ್ವರುಜಾಪಹಾರಮೆಂಬುದು ಮೊದಲಾಗಿ ಪೊೞಲ ಕಸವರಮು ನಿರುಳೀ ರೂಪಿನೊಳ್ ಕಳ್ದು ಪಗಲೆಲ್ಲಂ ತೊನ್ನನಾಗಿ ಪಾೞ್ದೇಗುಲದೊಳಿರ್ಪೆನದ ಱಿಂದೆನ್ನಂ ಕೊಲ್ಲಿಮೀತಂಗೇನುಂ ದೋಷಮಿಲ್ಲೆಂದೊಡರಸನೆಂದನಾ ಕಳ್ದ ಕಸವರ ಮನೆಲ್ಲಮನೇಗೆಯ್ದೆಯೆಂದು ಬೆಸಗೊಂಡೊಡನಿತುಮಿರ್ದುವಯ್ನಾಸಿರಮಱುಸಾಸಿರ ದೀನಾರಮೆನ್ನ ಸೂಳೆಗೆ ಬಿಯಮಾಡುದು ೞಿದುವೆಲ್ಲಂ ವಣ್ಣಂ ಚಳಿಯದಿರ್ದುವೆಂ ದೊಡರಸಂ ವಿದ್ಯುಚ್ಚೋರನಂ ಹಾರಮುಂ ಕೊಂಡು ಬಾ ಪೊೞಲವರ್ಗ್ಗಂ ಕಸವರಮುಂ ಮಡಗಿದೆಡೆಯುಂ ತೋಱೆಂದಾತನೊಡನೆ ಪೊೞಲ ಜನಮುಮನಟ್ಟಿ ಕಾಪುವೆರಸು ಪೋಗಿ ಪೊೞಲ್ಗೆ ನಾಡೆಯಂತರದೊಳ್ ಪಿರಿದೊಂದು ಪರ್ವತಮುಂಟಲ್ಲಿ ಯೊಂದು ವಿಸ್ತೀರ್ಣ ಗುಹೆಯುಂಟದಱ ಬಾಗಿಲಂ ಮುಚ್ಚಿರ್ದ ಪಿರಿಯ ಸಿಲೆಯಂ ಕಳೆದದಱೊಳಗೆ ಪೊಕ್ಕು ಹಾರಮಂ ಕೊಂಡು ಪೊೞಲ ಜನಮೆಲ್ಲಮನೆಂದಂ ನಿಮ್ಮ ನಿಮ್ಮ ಕಸವರಮುಪ್ಪುದನಾರಯ್ದು ಪಲ್ಲಟಿಸಲೀಯದೆ ನೋಡಿಕೊಳ್ಳಿಮೆಂದು ತೋಱಿದೊಡವರುಂ ತಂತಮ್ಮ ಕಸವರಮನೆಲ್ಲಮನಾರಯ್ದುಕೊಂಡರ್ ಮತ್ತೆ ವಿದ್ಯುಚ್ಚೋರನುಂ ಹಾರಮಂ ಕೊಂಡು ಪೋಗಿಯರಸಂಗೊಪ್ಪಿಸಿದೊಡರಸನಿಂತೆಂದು ವಿದ್ಯುಚ್ಚೋರನುಂ ಬೆಸಗೊಂಡಂ ಮಾಘಮಾಸದಿರುಳಿನ ಸೀತದೊಳ್ ನಾಲ್ಕು ಜಾವಮುಂ ಮೂವತ್ತೆರಡುಂ ಘೋರಮಪ್ಪ ದಂಡಣೆಯನೆಂತು ಸೈರಿಸಿದೆಯೆಂದೊ ಡಾತನಿಂತೆಂದರಸಂಗೆ ಪೇೞ್ಗುಂ.

ದೇವಾ ಒಂದು ದಿವಸಂ ಸಹಸ್ರಕೂಟ ಚೈತ್ಯಾಲಯಕ್ಕೆ ಕಿಱಿಯಂದೆನ್ನ ನೋದಿಸುವೋಜರುಮಾನುಂ ಪೋಗಿ ಓಜಂ ದೇವರಂ ಬಂದಿಸುವನ್ನೆಗಂ ಚರಿತ ಪುರಾಣಂಗಳಂ ವಖ್ಖಾಣಿಸುತ್ತಿರ್ದ ಶಿವಗುಪ್ತರೆಂಬಾಚಾರ್ಯರ ಪಕ್ಕದೆ ಕುಳ್ಳಿರ್ದು ವಖ್ಖಾಣೆಯಂ ಕೇಳುತ್ತಿರ್ಪನ್ನೆಗಂ ನರಕವ್ಯಾವರ್ಣನೆಯನಾ ಭಟಾರರಿಂತೆಂದು ಪೇೞ್ವುದಂ ಕೇಳ್ದೆಂ ವ್ರತಶೀಲಚಾರಿತ್ರ ಗುಣಂಗಳನಿಲ್ಲದವರುಂ ಜೀವಂಗಳಂ ಕೊಲ್ವರುಂ ಜೇಂಟೆಯಾಡುವರುಂ ರಾಗದ್ವೇಷ ಲೋಭಂ ಕಾರಣಮಾಗಿ ಪುಸಿನುಡಿವ

ಜೀವಂಗಳ್ಗೆ ಸಂತಾಪಮಂ ವಧೆಯುಮಂ ಮಾಡಿಸುವರುಮಾಱಡಿಗೊಳ್ವರುಂ ಕಳ್ವೊರುಂ ಪೆಱರ ಪೆಂಡಿರೊಳ್ ಮಱೆವಾೞ್ವರುಮಪರಿಮಿತ ಪರಿಗ್ರಹಮಂ ನೆರಪುವರುಂ ಮತ್ತಂ ಮಧುಮದ್ಯಮಾಂಸಗಳುಮಯ್ದು ಪಾಲ್ಮರದ ಪಣ್ಗಳುಮಾಳಂಬೆಯುಂ ಸಣಂಬಿನ ಪೂವುಮೆಂದಿವಂ ಸೇವಿಸುವರುಂ ಮತ್ತಮಮೋಘಮಪೇಯಮಭಕ್ಷ್ಯಭಕ್ಷ್ಯಮೆಂದಿವಱೊಳ್ ನೆಗೞ್ವರುಂ ಪಂಚಮಹಾಪಾತಕಂಗಳಂಗೆಯ್ವೊರುಮಿವರೆಲ್ಲಂ ನಿವೃತ್ತಿ ಪರಿಣಾಮಮಿಲ್ಲದೆ ಕಾಲಂಗೆಯ್ದೇೞಱಂ ನರಕಂಗಳೊಳ್ ಪುಟ್ಟಿ ದುಃಖಂಗಳನೆಯ್ದುವರ್.

ಗಾಹೆ॥ ಅಚ್ಛಿ ಣಿಮೀಳಣ ಮೇತ್ತಂ ಣತ್ಥಿ ಸುಹಂ ದುಖ್ಖಮೇವ ಅಣುಬದ್ಧಂ।
ಣಿರಯೇ ಣೆರಯಿಯಾಣಂ ಅಹಣ್ಣಿಸಂ ಪಚ್ಚಮಾಣಾಣಂ॥

ವೃ॥ ಕರಜ ನಿವೇಶಿತ ತೀಕ್ಷ್ಣ ಶಲಾಕಾಃ
ಕ್ರಕಚ ವಿಪಾಟಿತ ಭಿನ್ನ ಶರೀರಾಃ।
ನರಕ ಭವೇ ನಿರಸಾ ವಿಷಹಂತೇ
ಚಿರಮಪಿ ತತ್ಕ್ಷಣ ದುಃಖವಿಷಾದಂ॥

ಮತ್ತಂ

ಕಂ॥ ಇಱಿ ಕಿಱಿದನೊದಱಿ ಕೈರಂ
ಪಱಿ ಮುಱಿಸಿಟ್ಟೆಲ್ವನರಿದುನೆಱಿ ನೆಡೆಗಳ್ ಬಾ
ಯ್ದೆಱೆಯೆ ಪೊಸವ್ರಣ್ಗಳೊಳ್ ಪೊಯರ್
ಮಱುಗುವಿನಂ ಲೋಹವಾರಿಯಂ ಮುೞುಂಗುವಿನಂ॥
ಕಡಿ ಕಟಿವಮುಸುಡಿ ತೊಡೆಯುಂ
ನಡನಡ ನಡುಗುವಿನಮಡಿಸಿ ತಡೆಯದೆ ಖಳನಂ
ಪಿಡಿದುಡಿಯೆ ಕಟ್ಟಿ ಮಿಡ–ಮಿಡ
ಮಿಡುಕುವಿನಂ ಬಡಿಯೊಳೊಡೆಯೆ ಪೊಡೆ ಪೆಡತಲೆಯಂ॥
ಬಡಿ ಕೊಲ್ ಕಟ್ಟೆಱಿ ಮುಱಿ ಕಡಿ
ನಡುವಂ ಕೊಱೆ ಕುತ್ತಿ ಕರುಳ್ಗಳಂ ತೆಗೆ ಮೊಗಮಂ
ಸುಡು ಪಿಡಿ ಬಡಿ ನಿಮಿರ್ದಿಱಿ ಬಯರ್
ಕಡಂಗಿ ನುಂಗೆಂದು ಮುಸುಱಿ ನಾಯಕರಾಗಳ್॥

ಮತ್ತಂ ಕೊಂತಂಗಳಿಂದಮಿಟ್ಟಿಗಳಿಂದಂ ಕುತ್ತಿಸಿಱಿಂದಂ ಕರುಳ್ಮಾಲೆಗಳ್ ನೆಲದೊಳ್ ಸುರಿಯೆ ಕುತ್ತುವುದುಂ ಮುಟ್ಟಿಗಳೊಳಿಟ್ಟು ತೆಗೆಪುವುದುಂ ಕರಗಸಂಗಳಿಂದಂ ಮರನಂ ಪೋೞ್ವಂತೆ ಕೆಯ್ಯಂ ಕಾಲನಗಲ್ಚಿ ಪಿಡಿದಡಸಿ ಕಟ್ಟಿಯುದ್ದಂಬಿಡಿದು ಬಾೞ್ವಿದುಮಿಂತಿವು ಮೊದಲಾಗೊಡೆಯ ದುಃಖಂಗಳಂ ಕಣ್ಣೆಮೆಯಿಕ್ಕುವನಿತು ಪೊೞ್ತುಪ್ಪೊಡಮುಸಿರ್ ಪತ್ತಿಲ್ಲದುತ್ಕೃಷ್ಟದಿಂದಮೇೞನೆಯ ನರಕದೊಳ್ ಮೂವತ್ತುಮೂಱು ಸಾಗರೋಪಮಕಾಲಂಬರೆಗಂ ದುಃಖಂಗಳನೆಯ್ದುವರ್.

ಮತ್ತಂ ದಾನ ಪೂಜೆ ಶೀಲೋಪವಾಸಮೆಂದಿಂತು ಚತುರ್ವಿಧಮಪ್ಪ ಶ್ರಾವಕ
ಧರ್ಮದೊಳ್ ನೆಗೞ್ವವರುಂ ತಪಂಗೆಯ್ವರುಂ ಸ್ವರ್ಗಾಪವರ್ಗ ಸುಖಂಗಳನೆಯ್ದು
ವರೆಂದಿಂತು ಪೇೞೆ ಕೇಳ್ದು ಭಟಾರರ ಪಕ್ಕದೆ ಆನಣುವ್ರತ ಗುಣವ್ರತ ಶಿಕ್ಷಾವ್ರತ
ಮೆಂದಿಂತು ದ್ವಾದಶ ವಿಧಮಪ್ಪ ಶ್ರಾವಕ ಧರ್ಮಮುಮನರ್ಹಂತ ಪರಮದೇವರೆ
ದೇವರ್ ಕೊಲ್ಲದುದೆ ಧರ್ಮಂ ಬಾಹ್ಯಾಭ್ಯಂತರ ಪರಿಗ್ರಹಮಿಲ್ಲದುದೆ ತಪಮರ್ಹಂತ
ಪರಮ ದೇವರಾಗಮದೊಳ್ ಪೇೞೆಪಟ್ಟ ಜೀವಾಜೀವ ಪುಣ್ಯಪಾಪಾಸ್ರವ ಸಂವರ
ನಿರ್ಜರ ಬಂಧಮೋಕ್ಷಮೆಂದಿಂತು ನವಪದಾರ್ಥಂಗಳುಮಂ ಪಂಚಾಸ್ತಿಕಾಯಂ
ಗಳುಮಂ ಷಡ್ದ್ರವ್ಯಂಗಳುಮಂ ನಂಬುವುದು ಸಮ್ಯಕ್ತ್ವಮೆಂಬುದಕ್ಕುಮಾ
ಸಮ್ಯಕ್ತ್ವದತಿಚಾರಂಗಳ್ ಶಂಕಾದ್ಯಷ್ಟ ಮಳಂಗಳುಮೆಂಟು ಮದಂಗಳುಂ ಮೂಱು
ಮೂಢಮುಮಾಱುನಾಯತನ ಸೇವೆಗಳುಮೆಂದಿಂತಿಪ್ಪತ್ತಯ್ದುಕ್ಕುಮುಮಂ ಪಿಂಗಿಸಿ
ನಿಶ್ಯಂಕಾದ್ಯಷ್ಟ ಗುಣಂಗಳಿಂ ಕೂಡಿದ ಶುದ್ಧಮಪ್ಪ ಸಮ್ಯಕ್ತ್ವಪೂರ್ವಕಂ ವ್ರತಂಗಳ
ನೇಱಿಸಿಕೊಂಡು ಮತ್ತೆ ನರಕಂಗಳ ದುಃಖಂಗಳಂ ಕೇಳ್ದವಱ ಶತಸಹಸ್ರ ಭಾಗಕ್ಕ
ಪ್ಪೊಡಮೀ ದುಃಖಮಿಲ್ಲೆಂದು ಮನದೊಳ್ ಬಗೆದು ಮೂವತ್ತೆರಡುಂ ದಂಡಣೆಗಳಂ
ಸೈರಿಸಿದೆನೆಂದೊಡರಸಂ ಕೇಳ್ದು ನಿನಗೊಸೆದೆಂ ಬೇಡಿಕೊಳ್ ನಿನ್ನ ಬೇಡಿದುದೆಲ್ಲಮಂ
ಕುಡುವೆನೆಂದೊಡೆ ಪೆಱತೇನುಮನೊಲ್ಲೆನೆನ್ನ ಕೆಳೆಯನಪ್ಪ ಯಮದಂಡಂಗೆ ಕ್ಷಮಿ
ಯಿಸುವುದನೆ ಬೇಡಿದೆನೆಂದೊಡರಸನಿಂತೆಂದು ಬೆಸಗೊಂಡಂ ಯಮದಂಡಂ
ನಿನಗೆಂತು ಕೆಳೆಯನಾದಂ ಮತ್ತೆ ನೀಂ ಶ್ರಾವಕ ವ್ರತಂಗಳಂ ಕೈಕೊಂಡೆಯಪ್ಪೊಡೇಕೆ
ಕಳ್ವೆಯೆಂದು ಬೆಸಗೊಂಡೊಡಾತನಿಂತೆಂದಂ ಯಮದಂಡನೆನಗೆ ಕೆಳೆಯನಪ್ಪು
ದುಮಂ ನಿಮ್ಮ ಪೊೞಲ ಕಸವರಮಂ ಕಳ್ದುದರ್ಕೆ ಕಾರಣಮುಮಂ ಪೇೞ್ವೆಂ
ಕೇಳರಸಾ ಎಂದು ವಿದ್ಯುಚ್ಚೋರನಿಂತೆಂದು ಪೇೞಲ್ತೊಡಂಗಿದಂ.

ಈ ಜಂಬೂದ್ವೀಪದ ಭರತ ಕ್ಷೇತ್ರದೊಳ್ ತಿಲಕಮನೆ ಪೋಲ್ವುದು ದಕ್ಷಿಣಾ
ಪಥದೊಳಾಭೀರಮೆಂಬುದು ನಾಡಲ್ಲಿವರ್ಣೆಯೆಂಬ ತೊಱೆಯಾ ತಡಿಯೊಳ್
ವೇಣಾತಟಮೆಂಬುದು ಪೊೞಲದು ಪೊೞಲ ಗುಣಂಗಳಿನಾದಮಾನುಂ ರಮ್ಯ
ಮಪ್ಪುದು ಸ್ವರ್ಗಮನೆ ಪೋಲ್ವುದದನಾಳ್ವೊಂ ಜಿತಶತ್ರುವೆಂಬೊನರಸನಾತನ
ಮಹಾದೇವಿ ವಿಜಯಮತಿಯೆಂಬೊಳಾ ಇರ್ವರ್ಗ್ಗಂ ಮಗನಾಂ ವಿದ್ಯುಚ್ಚೋರ
ನೆಂಬೆಂ ಮತ್ತಾ ಪೊೞಲೊಳ್ ಯಮಪಾಶನೆಂಬೊಂ ತಳಾಱನಾತನ ಪೆಂಡತಿ
ನಿಜಗುಣದೇವತೆಯೆಂಬೊಳಾ ಇರ್ವರ್ಗ್ಗಂ ಮಗನೀತಂ ಯಮದಂಡನೆಂಬೊಂ
ಮತ್ತಾಮಿರ್ವೆಮುಂ ಸಮಾನವಯಸರೆಮಯ್ದಱು ವರ್ಷದಪ್ರಾಯದಂದು ಶ್ರಾವಕ
ನಪ್ಪ ಸಿದ್ಧಾರ್ಥನೆಂಬುಪಾಧ್ಯಾಯನ ಪಕ್ಕದೆ ಇರ್ವರುಮನೋದಲಿಟ್ಟೊಡೇೞೆಂಟು
ವರುಷದೊಳಗೆ ವ್ಯಾಕರಣಂ ಪ್ರಮಾಣಂ ಛಂದಮಲಂಕಾರಂ ನಿಘಂಟು ಕಾವ್ಯಂ
ನಾಟಕಂ ಸಾಮುದ್ರಿಕಂ ವಾತ್ಸ್ಯಾಯನಂ ಶಾಲಿಹೋತ್ರಂ ಪಾಲಕಾಪ್ಯಂ
ಚಾಣಕ್ಯಂ ವೈದ್ಯಂ ಮೊದಲಾಗೊಡೆಯ ಶಾಸ್ತ್ರಂಗಳನೆಲ್ಲಮನಿರ್ವರುಂ ಕಲ್ತು

ಬಱಿಕ್ಕೀತಂ ತಳಾಱನ ಮಗನಪ್ಪುದಱಿಂ ತನಗೆ ತಕ್ಕ ಕಳ್ಳರನಾರಯ್ದು ತೆಱನಂ ಪೇೞ್ವ ಸುರಖನೆಂಬೋದಂ ಕಲ್ತೊನಾನುಂ ಕಳ್ವುಪಾಯಮಂ ಪೇೞ್ವ ಕರಪಟ ಶಾಸ್ತ್ರಮಂ ಕಲ್ತೆನಿಂತೆಮಗನ್ಯೋನ್ಯ ಪ್ರೀತಿಯಿಂದಂ ಕಾಲಂ ಸಲೆ

ಮತ್ತೊಂದು ದಿವಸಮಿರ್ವರುಂ ವನಕ್ರೀಡೆಯಾಡಲೆಂದಿಂದ್ರೋಪಮಮೆಂಬ ವನಕ್ಕೆ ಪೋಗಿಯಲ್ಲಿಯಶೋಕ ಪುನ್ನಾಗ ವಕುಳ ತಿಳಕ ತಮಾಳ ಚಂಪಕ ಕ್ರಮುಕ ನಾಳಿಕೇರ ಖರ್ಜೂರ ಜಂಬು ಜಂಬೀರ ಪನಸ ದಾಡಿಮ ಕದಳೀ ದ್ರಾಕ್ಷಾ ಸಹಕಾರಂ ಮೊದಲಾಗೊಡೆಯ ಪಲವುಂ ತೆಱದ ವೃಕ್ಷ ಜಾತಿಗಳಿಂದಂ ಕಿಕ್ಕಿಱಿಗಿಱಿದಿರ್ದ ನಂದನವನದೊಳಿರ್ವರುಮುಳಿಸೆಂಡನಾಡುತ್ತಿರಲೋಕನ ವಿದ್ಯೆಯನೀತಂ ಕಲ್ತ ನಪ್ಪುದಱಿಂದೆಲ್ಲಿಯುಮಳಿದೊಡಂ ಕಾಣಲಾಗದೀತನಂ ನೀಡುಮಱಿಸಿ ಕಾಣದೆ ದೆಸೆಗೆಟ್ಟು ಬೇಸತ್ತಾನಿಂತೆಂದೆನಕ್ಕುಂ ಮಗನೆ ನೀಂ ತಳಾಱನಪ್ಪಂದು ನಿನ್ನ ಕಾಪಿ ನೊಳ್ ಕಳ್ದು ನಿನ್ನಂ ಕೊಲಿಸದಾಗಳೇನಾಯ್ತೆಂದು ನುಡಿದೊಡೀತನುಮಿಂತೆಂದ ನಕ್ಕುಂ ಮಗನೆ ನೀನೆನ್ನ ತಳಾಱುಗೆಯ್ವಂದು ಕಳ್ದೊಡೆ ನಿನ್ನಂ ಪಿಡಿದುಡಿಯೆ ಕಟ್ಟಿ ಕಳ್ಳರ ದಂಡಣೆಯಿಂ ದಂಡಿಸದಾಗಳೇನಾಯ್ತೆಂದು ನುಡಿದೊಡೀ ನುಡಿಯಂ ಮಱೆಯಲ್ವೇಡೆಂದಿರ್ವರುಮೋರೋರ್ವರಂ ಮೂದಲಿಸಿ ಪ್ರತಿಜ್ಞೆಗೆಯ್ದು ಕೆಲಕಾಲ ದಿಂದೆನ್ನ ತಂದೆಯೆನಗೆ ರಾಜ್ಯಪಟ್ಟಂಗಟ್ಟಿ ಶ್ರುತ ಸಾಗರರೆಂಬ ಭಟಾರರ ಪಕ್ಕದೆ ತಪಂಬಟ್ಟನೀತನ ತಂದೆಯುಂ ತನ್ನ ಸಂತಾನಮನೀತಂಗೆ ಕೊಟ್ಟರಸನೊಡನೆ ತಪಂಬಟ್ಟಂ ಮತ್ತಾನುಂ ರಾಜ್ಯಂಗೆಯ್ಯುತ್ತಿರೆ ಈತನುಮಾಪೊೞಲೊಳ್ ತಳಾಱು ಗೆಯ್ಯುತ್ತಿರ್ಪುಮಿಂತು ಸುಖದೊಳಿರ್ಪಗ್ಗಂ ಕಾಲಂ ಸಲೆ ಮತ್ತೊಂದು ದಿವಸ ಮೀತಂ ತನ್ನ ಮನದೊಳಿಂತೆಂದು ಬಗೆದನೆನ್ನರಸಂ ಕಳ್ಳನಾನುಮೀ ಪೊೞಲೊಳ್ ತಳಾಱುಗೆಯ್ವೆನಿದು ಕಜ್ಜಮೊಳ್ಳಿತ್ತಲ್ತೆಂದೆನಗಂಜಿ ನಾಡಂ ಬಿಟ್ಟು ಬಂದು ನಿಮಗಾಳಾದನಾನುಮೀತನನೆನ್ನಾಳ್ವ ನಾಡೆಂಟುದೆಸೆಯ ಗ್ರಾಮನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳೊಳಾರಯ್ಸಿಯುಂ ಕಾಣದೆ ಪರಮಂಡಲಂಗಳೊಳಮಾರಯ್ಸಿಯುಂ ಕಾಣದಿಲ್ಲಿಗಾರಯ್ಯಲಟ್ಟಿದೊಡೆ ಚರಪುರುಷ ರಾರಯ್ದು ಕಂಡು ಬಂದೆನಗಿಂತೆಂದು ಪೇೞ್ದರ್

ದೇವಾ ಮಿಥಿಳೆಯೆಂಬ ಪೊೞಲದನಾಳ್ವಂ ವಾಮರಥನೆಂಬರಸಂಗೆ ಯಮ ದಂಡಂ ಪೋಗಿಯಾಳಾಗಿ ಪೊೞಲ ಕಾಪಂಬೆತ್ತು ತಳಾಱನಾಗಿ ಸುಖದೊಳಿರ್ದೊ ನೆಂದು ಪೇೞ್ದೊಡಾವಾತನಾಂ ಕೇಳ್ದು ಪುರುಷೋತ್ತಮನೆಂಬ ಮಂತ್ರಿಗೆ ಮಿಥಿಳೆ ಯೆಂಬ ಪೊೞಲ್ಗಾನಾರುಮಱಿಯದಂತಿರೆ ಪೋಗಿ ಯಮದಂಡನನೊಡಗೊಂಡು ಬಂದಪೆನೆಂದು ಪೇೞ್ದು ವಜ್ರಸೇನನೆಂಬ ಪೆರ್ಗಡೆಯಂ ಕರೆಯಿಸಿ ಆನೊಂದು ಮನೆವಾೞ್ತೆಗೆ ಪೋಗಿ ಬಂದಪೆನೆನ್ನ ಬರ್ಪನ್ನೆಗಂ ರಾಜ್ಯಮಂ ಪ್ರತಿಪಾಲಿಸುತ್ತಿ ರೆಂದು ಕಲ್ಪಿಸಿ ಸಮಸ್ತ ರಾಜ್ಯಭಾರಮಂ ಸಮರ್ಪಿಸಿ ಅರ್ಧರಾತ್ರದಾಗಳ್ ಕಪ್ಪಡಮಂ ಪಱಿದುಟ್ಟು ಬಱಿಕಾರುಮಱಿಯಲೀಯದೊರ್ವನೆ ಪೊಱಮಟ್ಟು

ಬಂದೀಪೋಟಿಲಂ ಪೊಕ್ಕು ಪ್ರತಿಜ್ಞೆ ಕಾರಣಮಾಗಿ ಕಸವರಮಂ ಕಳ್ದೀತನಂ ಕೊಲಿಸು ವಂತು ಮಾಡಿದೆನಿದು ಕಳ್ದುದರ್ಕೆ ಕಾರಣಮಿೀತನುಮೆನಗೀ ಪಾಂಗಿನೊಳ್ ಮಿತ್ರ ನೆಂದು ಪೇೞ್ದು ಮತ್ತಮಿಂತೆಂದಂ ನಿಮ್ಮ ದೇವತಾಧಿಷ್ಠಿತಮಪ್ಪ ಸರ್ವರುಜಾಪಹಾರ ಮೆಂಬ ಹಾರಮಧಿಗಮ ಸಮ್ಯಗ್‌ದೃಷ್ಟಿಯೆನಪ್ಪುದಱಿಂದೆನ್ನ ಕೆಯ್ಗೆವಂದುದುೞಿದ ಮಿಥ್ಯಾದೃಷ್ಟಿಗಳ ಕೆಯ್ಗೆ ವಾರದೆಂದೊಡರಸಂ ತನ್ನ ಸಭೆಯೊಳಿರ್ದ ನೆರವಿಗೆಲ್ಲಂ ಹಾರಂ ಬಂದ ತೆಱನನಿಂತೆಂದು ಪೇೞಲ್ ತೊಡಗಿದೊಂ

ಧನ್ವಂತರಿವಿಶ್ವಾನುಲೋಮರ್ಕಳ ಕಥೆಯಂ ಮೊದಲಿಂ ತಗುಳ್ದು ಪೇೞುತ್ತು ಮಿಂತೆಂದನೆಮ್ಮ ಸಂತತಿಯ ಪದ್ಮರಥನೆಂಬರಸನೊಂದು ದಿವಸಂ ವಾಸು ಪೂಜ್ಯ ತೀರ್ಥಕರ ಪರಮದೇವರಂ ಬಂದಿಸಲ್ ಪೋಗುತ್ತಿರ್ದೊನನೆಡೆಯೊಳಚ್ಯುತೇಂದ್ರನುಂ ವಿಶ್ವಾನುಲೋಮಚರನಪ್ಪ ವಾಹನದೇವನುಮಿಂತಿರ್ವರುಂ ಕಂಡು ಅಚ್ಯುತೇಂದ್ರಂ ವಾಹನದೇವನನಿಂತೆಂದನೀತಂ ಅಧರ್ಮಿಯಿಂದೆ ಧರ್ಮಮಂ ಕೆಯ್ಕೊಂಡು ವಾಸು ಪೂಜ್ಯತೀರ್ಥಕರ ಪರಮದೇವರಂ ಬಂದಿಸಿದಲ್ಲದುಣೆನೆಂದಾಗ್ರಹಂಗೊಂಡು ಚಂಪಾ ನಗರಕ್ಕೆವೋದಪ್ಪೊನೀತನಂ ಪೋಗಲೀಯದೆ ಮಗುೞ್ಚಲಾರ್ಪೊಡೆ ಮಗುೞ್ಚೆಂದು ನುಡಿದೊಡೆ ವಾಹನದೇವನುಂ ತನ್ನಾರ್ಪ ತೆಱದಿಂದೆಲ್ಲಮೆನಿತಾನುಂ ತೆಱದು ಪಸರ್ಗಂ ಗೆಯ್ದು ಮಗುೞ್ಚಲಾಱದೆ ಬೇಸತ್ತುೞಿದೊಡೆ ಅಚ್ಯುತೇಂದ್ರಂ ಪದ್ಮರಥಂ ಗೊಸೆದು ತನ್ನ ತೊಟ್ಟ ಸರ್ವರುಜಾಪಹಾರಮೆಂಬ ಹಾರಮನಾತನ ಕೊರಲೊಳ್ ತಾನೆ ಕಟ್ಟಿ ಪೊಗೞ್ದು ಪೂಜಿಸಿಪೋದೊನಿಂತೀ ಪಾಂಗಿನೊಳೆಮಗೀ ಹಾರಂ ಸಂತತಿಯಿಂ ಬಂದುದೆಂದು ಪೇೞ್ದಿರ್ದ ತದನಂತರಂ.

ಇರ್ವರ್ ಪರಿವೊಟ್ಟೆಯವರೋಲೆಯಂ ಕೊಂಡು ಬಂದರಸನ ಮನೆಯ ಬಾಗಿಲೊಳ್ ನಿಂದು ಪಡಿಯಱಂಗೆ ಪೇೞ್ವೊಡೆ ಪಡಿಯಱಂ ತಮ್ಮರಸಂಗೆ ಪೇೞ್ವೊಡರಸನನುಮತದಿಂದರಮನೆಯಂ ಪೊಕ್ಕಾಸ್ಥಾನಮಂಟಪದೊಳಿರ್ದ ವಿದ್ಯುಚ್ಚೋರನಂ ಕಂಡು ಪೊಡೆವಟ್ಟಾತನ ಮುಂದೋಲೆಯನಿಕ್ಕಿದಾಗಳ್ ಸಂಧಿ ವಿಗ್ರಹಿ ಓಲೆಯಂ ಕೊಂಡರಸನ ಮುಂದಿಂತೆಂದು ಬಾಜಿಸಿದಂ ವಿದ್ಯುಚ್ಚೋರ ಪರಮಸ್ವಾಮಿಗೆ ಮಂತ್ರಿ ಪುರುಷೋತ್ತಮನಂ ಪೆರ್ಗಡೆ ವಜ್ರಸೇನನುಂ ಸಾಷ್ಟಾಂಗ ವೆಱಗಿ ಪೊಡೆವಟ್ಟು ಕಾರ್ಯಮಂ ಬಿನ್ನವಿಪ್ಪರ್ ತಾಮುಂ ಪಲವು ದಿವಸಂ ಪೋಗಿರ್ದರ್ ಪೆಱತಣ ಮನೆವಾೞ್ತೆಯಂ ಮಱೆದಿರ್ದರ್ ತಾಮಿಲ್ಲದೆ ರಾಜ್ಯಮಂ ಪ್ರತಿಪಾಲಿಸುವೊರಾರುಮಿಲ್ಲೀಯೋಲೆಯಂ ಕಾಣಲೊಡಂ ತಡೆಯದೆ ಪೊಱಮಟ್ಟು ಬೇಗಂ ಬರ್ಕೆಂದು ಬಾಜಿಸಿದುದಂ ವಾಮರಥಂ ಕೇಳ್ದು ಮುನ್ನೀತನ ಪೇೞ್ದುದು ಮೋಲೆಯ ಮಾತುಮೊಂದಾದುದೆಂದು ಸಂದೇಹಮಿಲ್ಲದಾಗಳ್ ನಂಬಿ ಈತಂ ಮಂಡಳಿಕನೆಂದಱಿದು ತನ್ನ ಸಿಂಹಾಸನದೊಳೋರಂತಪ್ಪಾಸನಮನಿಕ್ಕಲ್ವೇೞ್ದಿರಿಸಿ ಇಂತೆಂದನೆನ್ನ ತಂಗೆಯ ಮಗನಯ್ ಸೋದರಳಿಯನಯ್ ನಿನಗೆನ್ನಮಕ್ಕಳಂ ಶ್ರೀಮತಿ ವಸುಮತಿ ಗುಣಮತಿ ಸುಲೋಚನೆ ಸುಪ್ರಭೆ ಸುಕಾಂತೆ ಸುಶೀಲೆ

ಮನೋಹರಿಯೆಂಬೆಣ್ಬರುಂ ಕನ್ನೆಯರತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯರ್ ನವಯೌವನೆಯರಕ್ಷರಾಲೇಖ್ಯ ಗಣಿತ ಗಾಂಧರ್ವ ನೃತ್ಯ ಚಿತ್ರಕರ್ಮ ಪತ್ರಚ್ಛೇದ್ಯಮೆಂದಿವು ಮೊದಲಾಗೊಡೆಯ ಚತುಷ್ಷಷ್ಟಿ ಕಲೆಗಳೊಳಾದಮಾನುಂ ಕುಶಲೆಯರ್ ಪರಮಂಡಲಿಕರ್ ಪಲರ್ ಪಾಗುಡಂಗಳುಮೋಲೆಗಳುಂ ಪೆರ್ಗಡೆಗಳಮನನವರತಂ ಕೂಸುಗಳಂ ಬೇಡಿ ಯಟ್ಟುತ್ತಿರ್ಪರವರಾರುಮಂ ನಾಂ ಮೆಚ್ಚದೆ ಕುಡದಿನ್ನೆಗಮಿಂತಿವರ್ಗಳಂ ತಾಂಗಿರ್ದೆ ನೀ ಕನ್ಯಾರತ್ನಂಗಳ್ಗೆ ನೀನೆ ಯೋಗ್ಯನಯ್ ನಿನಗೆಣ್ಬರುಮಂ ಕೊಟ್ಟೆನ್ ಮದುವೆ ನಿಲ್ಲೆಂದೊಡಾತನಿಂತೆಂದನಾನ್ನೊರ್ವಳ್ಗೆ ಬೇಂಟಂಗೊಂಡಿರ್ದೆನಿವರಂ ಕೊಂಡೇ ವೆನೆಂದೊಡರಸನಾರ್ಗೆ ಬೇಂಟಂಗೊಂಡಿರ್ದೆಯೆಂದು ಬೆಸಗೊಂಡೊಡೆ ಮುಕ್ತಿಶ್ರೀ ಯೆಂಬೊಳ್ ಪೆಂಡತಿಗೆ ಬೇಂಟಂಗೊಂಡಿರ್ದೆನಾಕೆಯುಂ ಮದುವೆ ನಿಲಲ್ವೇಟ್ಕು ನೆಂದು ಪರಿಚ್ಛೇದಿಸಿ ನುಡಿದು ಮತ್ತಮಿಂತೆಂದನೆನ್ನ ಕೆಳೆಯುನನೆನಗೊಪ್ಪಿಸಲ್ವೇಟ್ಕು ಮೆಂದೊಡರಸನುಮೊಪ್ಪಿಸಿದೆನೆಂದೊಡೆ ಅರಸನಂ ಬೀಳ್ಕೊಂಡು ಯಮದಂಡ ಪುರಸ್ಸರಮಿರ್ವರುಮೊಟ್ಟೆಯನೇಱಿ ತುರಿಪದಿಂ ಕತಿಪಯ ದಿವಸಂಗಳಿಂ ವೇಣಾ ತಟಮನೆಯ್ದಿ ಪೊಱವೊೞಲೊಳಿರ್ದು ಪೇಳ್ದಟ್ಟಿಯಷ್ಟಶೋಭೆಯುಂ ಮಾಡಿಸಿ ಮಂತ್ರಿ ಮಹತ್ತರ ಪರಿವಾರ ಸಾಮಂತ ಮಹಾಸಾಮಂತರುಂ ಪೆಂಡವಾಸದ ಸೂಳೆಯರುಂ ಪೊೞಲ ಜನಮೆಲ್ಲಮಿದಿರಂ ಬಂದು ಕಂಡು ಪೊಡೆವಟ್ಟು ಸೇಸೆಗಳನಿಕ್ಕಿದ ಬೞಕ್ಕೆ ಪಟ್ಟವರ್ಧನಮನಿರ್ವರುಮೇಱಿ ಬೆಳ್ಗೊಡೆ ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ ಪಂಚಮಹಾಶಬ್ದಂಗಳುಂ ಬದ್ದವಣದ ಪಱೆಗಳುಂ ಬಾಜಿಸೆ ಅರ ಮನೆಯಂ ಪೊಕ್ಕು ಮರುದಿವಸಮಾಸ್ಥಾನಮಂಡಪದೊಳ್ ಸಿಂಹಾಸನಮಸ್ತಕ ಸ್ಥಿತನಾಗಿ ಸಾಮಂತ ಮಹಾಸಾಮಂತರ್ಕಳಂ ಮಂತ್ರಿಮಹತ್ತರ ಪುರೋಹಿತ ಪರಿವಾರದವರ್ಗಳಮರಸಿಯರ್ಕಳಂ ಬಱಿಯಟ್ಟೆ ಬರಿಸಿ ಇಂತೆಂದು ನುಡಿದನಾನೀ ಸಂಸಾರದೊಳಪ್ಪ ಭೋಗೋಪಭೋಗಂಗಳ್ಗೆ ಪೇಸಿ ವಿರಕ್ತನಾಗಿ ತಪಂಬಡಲ್ ಬಗೆದಪ್ಪೆನೆಂದೊಡನಿಬರುಂ ನೆರೆದಿಂತೆಂದರಿನ್ನುಮಾವುದು ಕಾಲಂ ತಪಂ ಬಡಲ್ಕಿನ್ನುಂ ನೀಂ ಕೂಸನಯ್ ನವಯೌವನನಯ್ ಕೆಲಕಾಲಮರಸುಗೆಯ್ದು ಪಶ್ಚಾತ್ಕಾಲದೊಳ್ ತಪಂಬಡಲಕ್ಕುಮೆಂದೊಡರಸನಿಂತೆಂದನೆಂತಱಿಯಲಕ್ಕುಮ ನ್ನೆಗಂ ಸಾವರೊ ಬಾೞ್ವರೊ ಎಂದೀ ಪ್ರಸ್ತುತಂಗಳನವಗ್ರ್ಗಾಡಿ ಪೇೞಲ್ ತೊಡಗಿದಂ

ಶ್ಲೋಕ ॥ ಡಿಂಡೀರ ಪಿಂಡ ಸಂಕಾಶಮಾಯುಃ ಸಂಸಾರವರ್ತಿನಾಂ ।
ಅಖಿಂಡಲಧನುಷ್ಕಾಂಡಸನ್ನಿಭಂ ರೂಪಯೌವನಂ ॥

ವೃ ॥ ರೂಪಂ ಯೌವನಮಾಯುರಕ್ಷನಿಷಯಾ ಭೋಗೋಪಭೋಗಾ ವಪುಃ
ವೀರ್ಯಂ ಸ್ವೇಷ್ಟ ಸಮಾಗಮೋ ವಸುಮತಿಃ ಸೌಭಾಗ್ಯ ಭಾಗ್ಯೋದಯೋ ।

ಯೇಽನಿತ್ಯಾಃ ಸ್ಫುಟಮಾತ್ಮನಃ ಸಮುದಿತಾ ಜ್ಞಾನೇಕ್ಷಣಾಂ ಭೂಭೃತಾಂ
ಶೇಷಾ ಇತ್ಯನುಚಿಂತಯಂತು ಸುಧಿಯಃ ಸರ್ವೇ ಸದಾಽನಿತ್ಯ ತಾಂ ॥

ಯದಿ ಜಾತಿಜರಾಮರಣಂ ನ ಭವೇತ್ ಯದಿ ಚೇಷ್ಟವಿಯೋಗಭಯಂ
ನ ಭವೇತ್ ।
ಯದಿ ಸರ್ವಮನಿತ್ಯಮಿದಂ ನ ಭವೇತ್ ಇಹ ಜನ್ಮನಿ ಕಸ್ಯ ರತಿರ್ನಭವೇತ್ ॥

ಅದಱಿಂ ಮಾನಸರ ರೂಪುಂ ಯೌವನಮುಂ ತೇಜಮುಂ ಲಾವಣ್ಯಮುಂ ಸೌಭಾಗ್ಯಮುಂ ಆಯುಷ್ಯಮುಂ ಶ್ರೀಯುಂ ಸಂಪತ್ತುಂ ವಿಭವಮುಂ ನಲ್ಮೆಯುಂ ಎಂದಿವು ಮೊದಲಾಗೊಡೆಯುವನಿತ್ಯಂಗಳ್ ಮತ್ತಂ ಮೆಯ್ಯೊಳ್ಳಿತ್ತೆಯೆಂದೊಡದು ವುಂತಾನಿಂತುಟೆ

ಗಾಹೆ ॥ ಏದಂ ಸರೀರಮಸುಚಿಂ ಣಿಚ್ಚಂ ಕಲಿ ಕಲುಸ ಭಾಜಣಮಚೊಕ್ಖಂ ।
ಅಂತೋಬಾಹಿರದಿಟ್ಠಂ ಸಕಿಬ್ಬಿಸ ಭರಿದಂ ತು ಅನೇಜ್ಝಪುರಂ ॥

ರಸಮಜ್ಜ ಮಾಂಸ ಸೋಣಿದಪುಪ್ಪುಸ ಕಾಲಿಜ್ಜ ಸೇಮ್ಮ ಸಿಹಾಣಂ ।
ಬಿಡಜಾಲ ಅಟ್ಠಿ ಸಕಲ ಚಮ್ಮಾಣದ್ಧಂ ಸರೀರಪುರಂ ॥

ಅಟ್ಠಿ ಹಿ ಛಣ್ಣಂ ಣಾಳಿಹಿ ಬದ್ಧಂ ಕಲಿಮಲಭರಿದಂ ಕಿಮಿಕುಲಪುಣ್ಣಂ ।
ಮಾಂಸವಿಲಿತ್ತಂ ತಯಪಡಿಛಣ್ಣಂ ಸರೀರಪುರಂತಂ ಸಂತತಮಚೊಕ್ಖಂ ॥

ಏದಾರಿಸೇ ಸರೀರೇ ದುಗ್ಗಂಧೇ ಕುಣಿಮಪೂತಿಪ ಯಚೊಕ್ಖೇ ।
ಸಡಣಪಡಣಯ ಸಾರೇ ರಾಗಂ ಣ ಕರೇಂತಿ ಸಪ್ಪುರಿಸಾ ॥

ಛಾಯೇವ ಸಕದಕಮ್ಮಂ ಅಣುಯಾದಿ ಕಾರಗಂ ಣ ಸೇಸಂ ।
ಪಲಾಯಿದುಂ ದುಸ್ಸಕ್ಕಂ ಅಣ್ಣತ್ಥ ಜಿಣಸಾಸಣೇ ॥

ಶ್ಲೋಕ ॥ ದುರ್ಗಂಧೇ ದುರ್ಧರೇ ದುಃಖೇ ದುಃಸ್ವಭಾವೇ ಚ ನಶ್ವರೇ ।
ದುರ್ವಿಲೋಕೇ ವೃಥಾ ಕಾಯೇ ಕಿಂ ತು ಜ್ಞಾನಿ ತವಾಗ್ರಹಃ ॥
ಅಚ್ಛೇದ್ಯೋಽನಂತ ಸೌಖ್ಯೋಽಹಂ ವೇತ್ತಾ ಪೂರ್ಣೋ ನಿರಂಜನಃ ।
ಸರ್ವದುಃಖಾಕರಂ ದೇಹಂ ತ್ಯಜಾಮೇತತ್ ಪರಿಸ್ಫುಟಂ ॥

ವೃ ॥ ಜಾತಿಕ್ಷ್ಮಾಜತತೇ ಕೃತಾಂತ ಕುಪಿತಕ್ರೂರೋರು ದುಃಶ್ವಾಪದೇ ।
ವ್ಯಾಧಿ ವ್ಯಾಧಭಯೇ ದುರಂತದುರಿತ ಸ್ಫೂರ್ಜದ್ದವಾಗ್ನಿಜ್ವಲೇ ॥
ನಿಸ್ತ್ರಾಣಸ್ಯ ವಿಚೇತಸೋ ದೃಢತೃಷಾ ದುಃಖಾಕುಳಸ್ಯಾಂಗಿನೋ ।
ಜೈನಂ ಶಾಸನಮೇಕಮೇವ ಶರಣಂ ಜನ್ಮಾಟವೀಸಂಕಟೇ ॥

ಅದಱಿಂ

ವೃ ॥ ಯಾವತ್ ಸ್ವಸ್ಥಮಿದಂ ಶರೀರಮರುಜಂ ಯಾವಜ್ಜರಾ ದೂರತಃ ।
ಯಾವಚ್ಚೇಂದ್ರಿಯ ಶಕ್ತಿರಪ್ರತಿಹತಾ ಯಾವತ್ ಕ್ಷಯೋ ನಾಯುಷಃ ॥
ಆತ್ಮಶ್ರೇಯಸಿ ತಾವದೇವ ವಿದುಷಾ ಕಾರ್ಯಃ ಪ್ರಯತ್ನೋ ಮಹಾನ್ ।
ಪ್ರೋದ್ದೀಪ್ತೇ ಭವನೇ ತು ಕೂಪಖನನಂ ಪ್ರತ್ಯುದ್ಯಮಃ ಕೀದೃಶಃ ॥

ಎಂದಿವು ಮೊದಲಾಗೊಡೆಯವನೋದಿಯುವ ಜೀರ್ಥಮಂ ನೆರವಿಗೆಲ್ಲಂ ವಖ್ಖಾಣಿಸಿ ಪೇೞ್ದು ಮತ್ತಮಿಂತೆಂದಂ

ಕಂ॥ ಆನಾಳ್ದ ನಾಳ್ಗಳಿವರೆನ
ಗೇನಾಯ್ತುಂ ಪಱಿದು ಮಱಿಯುಮಱಿವಾಂ ನುಡಿವೊಂ
ದೇನಾನುಮೇವಮುಳ್ಳೊಡ
ಮಾ ನುಡಿಯುಂ ಮಱಿಯಿಮೆಲ್ಲಮಿಂ ನಿಶ್ಶಲ್ಯಂ

ಗಾಹೆ॥ ಖಮ್ಮಾಮಿ ಸವ್ವ ಜೀವಾಣಂ ಸವ್ವೇ ಜೀವಾ ಖಮಂತು ಮೇ।
ಮೆತ್ತೀ ಮೇ ಸವ್ವಭೂದೇಸು ವೇರಂ ಮಜ್ಝ ಣ ಕೇಣಚಿ ॥

ಎಂದೆಲ್ಲರುಮಂ ಕ್ಷಮೆಗೊಳಿಸಿ ನಿಶ್ಶಲ್ಯಂಗೆಯ್ದು ವಿದ್ಯುದಂಗನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ರಾಜ್ಯಾಭಿಷೇಕಮಂ ಗೆಯ್ದಾತನಂ ಪಿಡಿದು ನೀಮೆಲ್ಲಂ ಸುಖಂ ಬಾೞಿಮೆಂದು ಕಲ್ಪಿಸಿ ಯಮದಂಡಂಗಂ ಪೊಲಿಲ ತಳಾಱಿಕೆಯುಂ ಕೊಟ್ಟು ಮಂಗಳ ವಸದನಂಗೊಂಡು ಪಟ್ಟವರ್ಧನಮನೇಱಿ ಸತಿಯರ್ ಸಂಗಡಂ ಬರೆ ಪೆಂಡವಾಸದ ಸೂಳೆಯರಿರ್ಬರ್ ಪೆಱಗೇಱಿಕ್ಕೆಲದೊಳಂ ಚಾಮರಂಗಳ ನಿಕ್ಕುತ್ತುಂ ಬರೆ ಬೆಳ್ಗೊಡೆಗಳುಂ ಪಾಳಿಧ್ವಜಂಗಳುಂ ತಱಿಸೆವಟ್ಟಯಿಗೆಗಳುಂ ಚಂದ್ರಾದಿತ್ಯರ್ಕಳುಂ ಸಿಂಹ ವ್ಯಾಘ್ರ ಮಕರ ಮತ್ಸ್ಯಂಗಳೆಂದಿವು ಮೊದಲಾ ಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ ಪಂಚಮಹಾಶಬ್ದಂಗಳುಂ ಬದ್ದವಣದ ಪಱಿಗಳುಂ ಬಾಜಿಸೆ ವಂದಿಮಾಗಧ ಯಾಚಕ ಪ್ರಭೃತಿಗಳ್ಗಂ ದೀನಾ ನಾಥಾಂಧರ್ಕಳ್ಗಂ ತುಷ್ಟಿದಾನಮಂ ಕೊಡುತ್ತುಂ ಪೋಗಿ ಸಹಸ್ರಕೂಟ ಚೈತ್ಯಾಲಯ ಮನೆಯ್ದಿ ಪಟ್ಟವರ್ಧನದಿಂದಿೞಿದು ಬಸದಿಯಂ ತ್ರಿಃಪ್ರದಕ್ಷಿಣಂಗೆಯ್ದು ದೇವರಂ ನಿವೇದಿಸಿ ಗುಣಧರರೆಂಬಾಚಾರ್ಯರಂ ಗುರುಭಕ್ತಿಗೆಯ್ದು ವಂದಿಸಿ ಇಂತೆಂದಂ ಭಟಾರಾ ಸಂಸಾರಮೆಂಬ ಸಮುದ್ರದೊಳ್ ಮುೞುಗುತ್ತಿರ್ದೆನ್ನಂ ಮುೞುಗಲೀಯ ದೆತ್ತಿಮೆನಗೆ ದೀಕ್ಷೆಯಂ ಪ್ರಸಾದಂಗೆಯ್ಯಿಮೆಂದು ನುಡಿದೊಡಂಬಡಿಸಿ ಸಾಸಿರ್ವರ ರಸುಮಕ್ಕಳ್ವೆರಸು ಕಟಕ ಕಟಿಸೂತ್ರ ಕುಂಡಲಾಭರಣಾದಿಗಳಂ ಕಳೆದು ಬಾಹ್ಯಾ ಭ್ಯಂತರ ಪರಿಗ್ರಹಮೆಲ್ಲಮಂ ತೊಱೆದು ಗುಣಧರ ಭಟ್ಟಾರರ ಪಕ್ಕದೆ ತಪಂಬಟ್ಟಂ ಮತ್ತಂ ದೇವಗಣಿಕೆಯರನೆ ಪೋಲ್ವ ಸೌಂದರಿ ಮಹಾದೇವಿ ಮೊದಲಾಗೆೞ್ನೂ ರ್ವರರಸಿಯರ್ಕಳ್ ಗುಣಧರ ಭಟಾರರೆ ಗುರುಗಳಾಗೆ ತಮ್ಮತ್ತೆವಿರಪ್ಪ ವಿಜಯಮತಿ ಕಂತಿಯರ್ ಕಂತಿಯರಾಗೆ ತಪಂಬಟ್ಟು ಗಿಡಿಗಿಡಿಜಂತ್ರಮಿಳಿಮಿಳಿನೇತ್ರಮಾಗಿ ಘೋರವೀರ ತಪಶ್ಚರಣದೊಳ್ ನೆಗೞುತ್ತಿರ್ದರ್

ಇತ್ತ ವಿದ್ಯುಚ್ಚೋರ ಮುನಿಯುಂ ಪನ್ನೆರಡು ವರ್ಷಂಬರೆಗಂ ಗುರುಗಳ ನಗಲದೆ ದ್ವಾದಶಾಂಗ ಚತುರ್ದಶ ಪೂರ್ವಮಪ್ಪಾಗಮಮೆಲ್ಲಮಂ ಕಲ್ತುಗ್ರೋಗ್ರ ತಪಶ್ಚರಣದೊಳ್ ನೆಗೞುತ್ತುಮಾಚಾರ್ಯರಾಗಿ ಅಯ್ನೂರ್ವರ್ ಶಿಷ್ಯರ್ಕಳ್ವೆರಸು

ಗ್ರಾಮನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಪೋಗಿ ಪೂರ್ವದೇಶದೊಳ್ ಖಾಳಿಮಂಡಳಮೆಂಬ ನಾಡೊಳ್ ತಾಮ್ರಲಿಪ್ತಿಯೆಂಬ ಪೊಟಲ ಪೊಱವೊಟಲನೆಯ್ದಿದಾಗಳಲ್ಲಿ ವರಾಂಗಾಯಿಯೆಂಬೊಳುಗ್ರದೇವತೆಗಱುದಿಂಗಳಱುದಿಂಗಳಿಂಗೆಲ್ಲಾ ಕಾಲಮುಂ ಜಾತ್ರೆಯಪ್ಪುದಾ ಜಾತ್ರೆಗೆ ನಾಡೆಯಷ್ಟಮಿಯಂದು ಬಂದು ನೆರೆದು ಜಾತ್ರೆಯಂ ಮಾಡೆ ದುರ್ಗಾದೇವತೆ ರಿಸಿಯರ ಬರವಂ ಗೆಂಟಱತೊಳಿರ್ದು ಕಂಡಿದಿರಂ ಪೋಗಿ ಇಂತೆಂದಳೆನ್ನ ಜಾತ್ರೆ ಸವೆವನ್ನೆಗಂ ನೀವಿೀ ಪೊಟಲಂ ಪುಗದಿರಿಮೆಂದು ಬಾರಿಸಿದೊಡೆ ಶಿಷ್ಯರ್ಕಳೆಂದರ್ ನಮ್ಮಂ ದೇವತೆಯೇಗೆಯ್ದಪ್ಪೊಳ್ ಪೋಪಂ ಭಟಾರಾ ಎಂದು ಭಟಾರರನೊಡಗೊಂಡು ದೇವತೆ ಬಾರಿಸೆವಾರಿಸೆ ಪೊಟಲಂ ಪೊಕ್ಕು ಮತ್ತಿರುಳ್ ಪೊಟಲ ಪಡುವಣ ದೆಸೆಯ ಕೋಂಟೆಯಿಂ ಪೊಱಗಣ ದೆಸೆಯೊಳ್ ವಿದ್ಯುಚ್ಚೋರ ಭಟಾರರ್ ಪ್ರತಿಮಾಯೋಗಂ ನಿಂದೊಡೆ ದೇವತೆ ಮುಳಿದು ಪೊಱಸುಗಳನಿವಿರಿಯವು ದಂಸಮಸಕಂಗಳಂ ವಿಗುರ್ವಿಸೆ ಮೆಯ್ಯೆಲ್ಲಮನಿರುಳ್ ನಾಲ್ಕು ಜಾವಮುಂ ತಿನೆ ನರಕ ವೇದನೆಯಿಂದಮಗ್ಗಳಮೆ ವೇದನೆಯಪ್ಪಂತುಪಸರ್ಗಂಗೆಯ್ಯೆ ಅಂತಪ್ಪ ದುಃಖಮುಂ ವೇದನೆಯುಮಂ ಮನದೊಳಿಲ್ಲದಂತಿರೆ ಸೈರಿಸಿ ಆಜ್ಞಾವಿಚಯಮಪಾಯ ವಿಚಯ ವಿಪಾಕ ವಿಚಯ ಸಂಸ್ಥಾನವಿಚಯಮೆಂಬೀ ನಾಲ್ಕುಂ ಧರ್ಮಧ್ಯಾನಂಗಳಂ ಧ್ಯಾನಿಸಿ ಬೞಿಕ್ಕೆ ಪೃಥಕ್ತ್ವವಿತರ್ಕವೀಚಾರಮೆಂಬ ಪ್ರಥಮ ಶುಕ್ಲಧ್ಯಾನಮಂ ಧ್ಯಾನಿಸುತ್ತಂ ಕ್ಷಪಕಶ್ರೇಣಿಯನೇಱಿ ಏಕತ್ವವಿತರ್ಕವೀಚಾರಂ ಸೂಕ್ಷ್ಮಕ್ರಿಯಾಪ್ರತಿಪಾತಿ ಸಮುಚ್ಛಿನ್ನಕ್ರಿಯಾನಿವೃತ್ತಿಯೆಂಬ ಶುಕ್ಲಧ್ಯಾನಂಗಳಂ ಧ್ಯಾನಿಸಿ ಘಾತಿಕರ್ಮಂಗಳಂ ಕಿಡಿಸಿ ಅಂತರ್ಗತಕೇವಳಿಯಾಗಿ ಅಘಾತಿಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆವೋದರ್

ಮತ್ತೆ ಸಂನ್ಯಸನಂ ಗೆಯ್ಯುತ್ತಿರ್ದ ಭವ್ಯರ್ಕಳ್ ಪರಮ ಶುದ್ಧಸಹಜರತ್ನತ್ರಯಮನಾರಾಧಿಸುತ್ತಿರ್ದೋರ್ ವಿದ್ಯುಚ್ಚೋರ ಋಷಿಯರಂ ಮನದೊಳ್ ಬಗೆದು ದಂಡಣೆಗಳುಮಂ ವೇದನೆಗಳುಮಂ ವ್ಯಾಧಿಗಳುಮಂ ಚತುರ್ವಿಧಮಪ್ಪುಪಸರ್ಗಮುಮಂ ಪಸಿವುಂ ನೀರಟಿಕ್ಕೆಯುಂ ಶೀತೋಷ್ಣವಾತದಂಸಮಸಕಂ ಮೊದಲಾಗೊಡೆಯವಱಿಂದಪ್ಪ ವೇದನೆಗಳುಂ ದುಃಖಂಗಳುಮಂ ಸೈರಿಸಿ ಪರಮ ಶುದ್ಧ ಸಹಜ ರತ್ನತ್ರಯಂಗಳಂ ಸಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

## ಚಾವುಂಡರಾಯ

ಜಂಬೂದ್ವೀಪದಪರ ವಿದೇಹದ ಗಂಧಿಲ ವಿಷಯದ ಸೀತೋದಾ ನದಿಯ ದಕ್ಷಿಣದ ತಡಿಯ ಸಿಂಹಪುರಮನಾಳ್ವಂ ಶ್ರೀಷೇಣಂಗಮಾತನರಸಿ ಸೌಂದರಿಗಂ ಜಯವರ್ಮನುಂ ಶ್ರೀವರ್ಮನುಮೆಂಬ ತನಯರಾಗೆ ಕಿಱಿಯಾತನೆ ಪರಿವಾರಕ್ಕಮರ ಸಂಗಮಣುಗನಾಗಿ ಬಳೆಯೆ ಶ್ರೀಷೇಣಂ ಪಿರಿಯ ಮಗಂ ಯೋಗ್ಯನಲ್ಲೆಂದು ಕಿಱಿಯ ಮಗಂ ಶ್ರೀವರ್ಮಂಗೆ ರಾಜ್ಯಮಂ ಕೊಟ್ಟು ತಪಕ್ಕೆ ಪೋದಂ. ಇತ್ತ ಜಯ ವರ್ಮಂ ಕ್ರಮಕ್ಕೆ ಪುಟ್ಟಿದನಿರ್ದಂತೆನ್ನ ತಮ್ಮಂಗೆ ರಾಜ್ಯಮಂ ಕೊಟ್ಟಂ. ಈ ಭವದೊಳ್ ಪಡೆಯದೊಡಮನ್ಯ ಭವದೊಳಪ್ಪೊಡಂ ರಾಜ್ಯಮಂ ಪಡೆವೆನೆಂದು ಸ್ವಯಂಪ್ರಭ ಗುರುಗಳ ಸಾರೆ ದೀಕ್ಷೆಯಂ ಕೊಂಡು ಪಱಿದು ಬಿಸುಟ ಕುಂತಳಂ ಗಳಂ ಪುತ್ತಿನೊಳಗೆ ಮಡಗಲೆಂದು ಕಯ್ಯಂ ಕುತ್ತಿದೊಡಲ್ಲಿರ್ದ ಕಾಳಿಂಗ ನಾಗಂ ಕಯ್ಯಂ ಕೊಂಡೊಡಾ ಪ್ರಸ್ತಾವದೊಳ್ ಮಹೀಧರನೆಂಬ ವಿದ್ಯಾಧರಂ ಪಿರಿದುಂ ವಿಭೂತಿಯಿಂದಮಂಬರದೊಳ್ ಪೋಪುದಂ ಕಂಡೆನ್ನ ತಪದ ಫಲಮುಳ್ಳೊಡೆ ವಿದ್ಯಾಧರನಪ್ಪೆನಕ್ಕೆಂದು ಸತ್ತತಿಬಳಂಗೆ ಮಹಾಬಳನಾಗಿ ಪುಟ್ಟಿ ಮುನ್ನಿನ ಭವ ದೊಳ್ ಬಯಸಿ ಪಡೆದ ವಿದ್ಯಾಧರ ಶ್ರೀಯನಿನ್ನೆಗಂ ಬಿಸುಡದಿರ್ದೊಡೇನಾದುದೆಂದು ಇಂದು ಕನಸಿನೊಳ್ ತನ್ನ ಮೂವರುಂ ಪೆರ್ಗಡೆಳಗಡಸಿ ಕಟ್ಟಿ ಕೊಟಿಗ್ಗೆಸರ ಬಾವಿ ಯೊಳಟ್ಟಿದ್ದಿ ನೀಂ ಬಂದು ಅವರಂ ಭಂಗಿಸಿ ಕನಕ ಪೀಠದೊಳಿರಿಸುವುದುಮನೆಟ್ಟುರಿ ನಂದುವುದುಮಂ ಕಂಡಿರ್ದ ಶುಭ ಸ್ವಪ್ನ ದರ್ಶನಕ್ಕೆ ಕೊಕ್ಕರಿಸಿ ನಿನ್ನ ಬರವನೆ ಪಾರುತ್ತಿರ್ದಪಂ. ಆತಂಗೊಂದೇ ತಿಂಗಳಾಯುಷ್ಯಂ. ಆತನಿಂ ಮುನ್ನಂ ನೀನೀ ಕನಸುಗಳಂ ಪೇೞ. ಪೇೞಲೊಡಂ ನಿನ್ನ ಮಾತನೆ ಕೈಕೊಂಡು ನೀಂ ನೋನಿಸೆ ನೋಂತು ಮಹಾಬಳಂ ಲಲಿತಾಂಗದೇವಂ ವಜ್ರಜಂಘಂ ಆರ್ಯಂ ಶ್ರೀಧರದೇವಂ ಸುವಿಧಿ ಅಚ್ಯುತೇಂದ್ರಂ ವಜ್ರನಾಭಿ ಅಹಮಿಂದ್ರನುಂ ಆಗಿ ಭರದೊಳಾದಿ ದೇವನಪ್ಪೊಂ.

ನೀನುಂ ಮೂಱನೆಯ ಭವದೊಳ್ ಕರ್ಮಕ್ಷಯಂ ಗೆಯ್ವೆಯೆಂಬುದುಂ ಸ್ವಯಂಬುದ್ಧಂ ಚಾರಣ ಯುಗಳಮಂ ಬಂದಿಸಿ ಬಂದು ಮಹಾಬಳನಂ ಕಂಡು ಆತನ ಕಂಡ ಕನಸುಗಳೆಲ್ಲಮಂ ಸಪ್ರಪಂಚಮುಱಿಪಿ ಮತ್ತಂ ದಿವ್ಯಜ್ಞಾನಿಗಳ್ ನಿನಗೊಂದು ತಿಂಗಳಾಯುಷ್ಯಮೆಂದು ಪೇೞ್ದರ್. ಇನ್ನುೞಿಪು ಮಾಣಲಾಗ ದೆಂಬುದುಮಂತೆ ಗೆಯ್ವೆನೆಂದು ನಿಜ ಗೃಹೋದ್ಯಾನದ ಜಿನಗೃಹದೊಳ್ ಮಹಾ ಮಹಮೆಂಬ ಜಿನ ಮಹಾಮಯನೆಂಟುದಿವಸಂ ಮಹಾಬಳಂಮಾಡಿ ಪರಿಜನ ಮೆಲ್ಲಮಂ ಬರಿಸಿ ತನ್ನ ಮಗನತಿಬಳಂಗೆ ರಾಜ್ಯಮಂ ಕೊಟ್ಟು ಸಿದ್ಧಕೂಟಕ್ಕೆ ಪೋಗಿ ತ್ರಿಃಪ್ರದಕ್ಷಿಣಂಗೆಯ್ದು ದೇವರಂ ಪೂಜಿಸಿ ವಾಚನಾಗ್ರಹಣ ಸಮೇತಮಾರಾ ಧನೆಯಿನರ್ಚಿಸಿ ವೀರಸಂಸ್ಥಾರೂಢನಾಗೆ ಸ್ವಯಂಬುದ್ಧಂ ನಿರ್ಯಾಪಕಾಚಾರ್ಯ

ನಾಗಿ ಪಂಚ ಗುರು ಸಮಕ್ಷದೊಳ್ ಬಾಹ್ಯಾಭ್ಯಂತರ ಪರಿಗ್ರಹ ಪರಿತ್ಯಾಗ ಪುರಸ್ಸರಂ ಮಹಾಬಳನಂ ಜಾತರೂಪಧರನಂ ಮಾಡಿ ಚತುರ್ವಿಧಾಹಾರ ಶರೀರ ಪ್ರತ್ಯಾಖ್ಯಾನಮಂ ಕೊಟ್ಟು ತಾನುಂ ದೀಕ್ಷೆಯಂ ಕೈಕೊಳೆ ಮಹಾಬಳನುಂ ಪ್ರಾಯೋಪಗಮನದೊಳಿರ್ಪತ್ತೆರಡು ದಿವಸಂ ನೋಂತು ಈಶಾನ ಕಲ್ಪದ ಶ್ರೀಪ್ರಭ ವಿಮಾನದೊಳೊಂದು ಸಾಗರೋಪಮಾಯುಷ್ಯಕ್ಕೊಡೆಯನುಂ ಸಪ್ತ ಹಸ್ತೋತ್ಸೇಧನುಂ ಪಂಚ ದಶ ದಿನ ಕೃತ ಸಮುಚ್ಛ್ವಾಸನುಂ ಸಹಸ್ರ ವರ್ಷ ಕೃತಮಾನಸಾಮೃತಾಹಾರನುಂ ಸಂಪ್ರಾಪ್ತ ಭವಪ್ರತ್ಯಯಾವಧಿಜ್ಞಾನನುಮಣಿಮಾದ್ಯಷ್ಟ ಗುಣೈಶ್ವರ್ಯೋಪೇತನುಂ ನಿಷ್ಟಪ್ತ ಕನಕ ವರ್ಣನುಮಪ್ಪ ಲಲಿತಾಂಗ ದೇವನಾಗಿ ಪುಟ್ಟಿ ಸ್ವಯಂಪ್ರಭೆ ಕನಕಪ್ರಭೆ ಕನಕಲತೆ ವಿದ್ಯುಲ್ಲತೆಯೆಂಬ ನಾಲ್ವರ್ ಮಹಾದೇವಿಯರೊಳಂ ನಾಲ್ಸಾಸಿರ್ವರ್ ಮನೋನಯನ ವಲ್ಲಭೆಯರೊಳಂ ದಿವ್ಯ ಸುಖಮನನುಭವಿಸಿ ಸ್ವಯಂಪ್ರಭಾದೇವಿಯರ್ ಪಲಂಬರುಂ ಕೞಿಯೆ ತನಗೆಯ್ದು ಪಳಿತೋಪಮಾಯುಷ್ಯಮುಂಟೆನೆ ಮತ್ತೊರ್ವ ಸ್ವಯಂಪ್ರಭಾದೇವಿಯುಂ ತಾನುಮಚ್ಯುತೇಂದ್ರನ ಪೂಜೆಯಿಂ ಸ್ವರ್ಗ ಸುಖಮನನುಭವಿಸಿ ಜೀವಿತಾಂತ್ಯದೊಳ್ ಸಾಮಾನಿಕ ದೇವ ಪ್ರತಿಬೋಧಿತಂ ಪದಿನೈದು ದಿವಸಂ ತ್ರಿಭುವನ ಜಿನಭವನ ಕೃತ ಪೂಜಾವಿಧಾನಂ ಅಚ್ಯುತ ಕಲ್ಪದ ಜಿನ ಗೃಹ ಚೈತ್ಯವೃಕ್ಷ ಮೂಲದೊಳ್ ಕುಳಿತು ಮುಕುಳೀಕೃತ ಕರಕಮಲನುಮಾಗಿ ಪಂಚ ನಮಸ್ಕಾರ ಪದಮನುಚ್ಚರಿಸುತ್ತು ಮದೃಶ್ಯನಾಗಿ ಬಂದು ಜಂಬೂದ್ವೀಪದ ಪೂರ್ವ ವಿದೇಹದ ಸೀತಾ ನದಿಯ ಬಡಗಣ ತಡಿಯ ಪುಷ್ಕಲಾವತಿ ವಿಷಯದ ಉತ್ಪಲ ಖೇಟಮನಾಳ್ವ ವಜ್ರಬಾಹುಗಂ ವಸುಂಧರಾದೇವಿಗಂ ವಜ್ರಜಂಘನೆಂಬೊಂ ಮಗನಾಗಿ ಪುಟ್ಟಿ ಬಳೆದು ತನ್ನ ಮುನ್ನಿನ ಸ್ವಯಂಪ್ರಭೆಯಂ ನೆನೆಯುತ್ತಿರ್ಪಿನಮಾ ಸ್ವಯಂಪ್ರಭಾದೇವಿಯುಂ ಜೀವಿತಾಂತ್ಯದೊಳ್ ಆಱುದಿಂಗಳ್ವರಂ ಜಿನಪೂಜೆಯಂ ಮಾಡಿ ಮೇರು ಗಿರಿಯ ಸೌಮನಸ ವನದ ಪೂರ್ವ ದಿಗ್ಭಾಗದ ಚೈತ್ಯವೃಕ್ಷದಡಿಯೊಳ್ ಪಂಚನಮಸ್ಕಾರ ಪದಮನುಚ್ಚರಿಸುತ್ತುಂ ಪ್ರಾಣವಿಯೋಗಮಾಗೆ ಬಂದಾ ವಿಷಯದೊಳೆ ಪುಂಡರೀಕಿಣೀ ನಗರಮನಾಳ್ವ ವಜ್ರದಂತಂಗಂ ಲಕ್ಷ್ಮೀಮತಿಗಂ ಶ್ರೀಮತಿಯೆಂಬೊಳ್ ಮಗಳಾಗಿ ಪುಟ್ಟಿ ಪಂಡಿತೆಯೆಂಬ ದಾದಿಯೋದಿಸೆ ಬಳೆದು ಯೌವನಪ್ರಸ್ತಾವದೊಳ್ ತನ್ನ ಮಾಡದೊಳ್ ಪವಡಿಸಿ ಬೆಳಗಪ್ಪ ಜಾವದೊಳಾ ಪೊೞಲ ಬಹಿರುದ್ಯಾನವನದೊಳಿರ್ದ ಯಶೋಧರ ಗುರುಗಳ ಕೇವಲ ಜ್ಞಾನೋತ್ಪತ್ತಿಯೊಸಗೆಗೆ ಬರ್ಪ ದೇವನಿಕಾಯಮಂ ಕಂಡು ತನ್ನ ಮುನ್ನಿನ ಭವದ ಲಲಿತಾಂಗ ದೇವನಂ ನೆನೆದು ಮೂರ್ಛೆವೋಗೆ ವಜ್ರದಂತನುಂ ಲಕ್ಷ್ಮೀಮತಿಯುಂ ಬಂದು ಮೂರ್ಛೆಯಿಂದೆೞ್ಚಱಿಸಿ ಬೆಸಗೊಳೆ ತಮಗೆಂತುಂ ಬಗೆವೇೞದೆ ಮೌನವ್ರತ ಪ್ರತಿಜ್ಞೆಯಿನಿರೆ ಪಂಡಿತೆಯುಂ ನಿನ್ನ ಬಲ್ಲಂದದೊಳ್ ಬೆಸಗೊಳ್ಳೆಂದು ಪೋದರ್. ಅನ್ನೆಗಮಾತಂ ತನ್ನ ಗುರುಗಳಪ್ಪ ಯಶೋಧರ ಗುರುಗಳ್ಗೆ ಕೇವಲ ಜ್ಞಾನಮುಮಾಯು

ಥಾಗರದೊಳ್ ಚಕ್ರರತ್ನಮುಂ ಪುಟ್ಟಿದೆರಡೊಸಗೆಯೊಳ್ ಮುಖ್ಯಮಪ್ಪ ಕೇವಳಿ ಪೂಜೆಯಂ ವಿಶೋಧಿಯಿಂ ಮಾಡಿದೊಡವಧಿಜ್ಞಾನಂ ಪುಟ್ಟಿ ಬಂದು ಚಕ್ರರತ್ನ ಪೂಜೆಯಂ ಮಾಡಿ ದಿಗ್ವಿಜಯಕ್ಕೆ ಪೋದಂ.

ಅನ್ನೆಗಮಿತ್ತ ಪಂಡಿತೆ ಶ್ರೀಮತಿಯನಶೋಕ ವನದೊಳ್ ತನ್ನ ಬಲ್ಲಂದ ದೊಳೊಡಂಬಡಿಸಿ ಬೆಸಗೊಳೆ ನಿಜವೃತ್ತಾಂತವೆಲ್ಲಮುಂ ಪೇೞಲ್ ತಗುಳ್ದು ಆನೀ ಭವಕ್ಕೆ ಮೂಱನೆಯ ಭವದೊಳ್ ಧಾತಕೀ ಷಂಡದ ಮೂಡಣ ಮಂದರದಪರ ವಿದೇಹದ ಸೀತೋದಾ ನದಿಯ ಬಡಗಣ ತಡಿಯ ಗಂಧಿಲ ವಿಷಯದ ಪಾಟಲಿ ಗ್ರಾಮದೊಳ್ ನಾಗದತ್ತನೆಂಬ ಪರದಂಗಮಾತನ ಪರಿದಿತಿ ವಸುದತ್ತೆಗಂ ನೆಂದಂ ನಂದಿಮಿತ್ರಂ ನಂದಿಷೇಣಂ ವರಸೇನಂ ಜಯಸೇನನೆಂಬೈವರ್ ತನಯರಿಂದಂ ಮದನಕಾಂತೆ ಶ್ರೀಕಾಂತೆಯುಮೆಂಬಿರ್ವರ್ ತನೂಜೆಯರಿಂದಂ ಕಡೆಯಗರ್ಭ ದೊಳಾಂ ನೆಲಸಲೊಡನೆನ್ನದೊಂದಶುಭ ಕರ್ಮೋದಯದಿನೆನ್ನೊಡವುಟ್ಟಿದರುಂ ತಂದೆಯುಂ ಕಳೆದೊಡೆ ಅರಸರ ದೆಸೆಯಿಂ ಮನೆ ಕವರ್ತೆವೋಗೆ ಪೆಱರ ಕೇೞಲೊಳ್ ಸಾರ್ದೆಮ್ಮಬ್ಬೆಯುಂ ಮುತ್ತಬ್ಬೆಯುಂ ಬದಗು ಗೆಯ್ದುಣುತಿರ್ಪಿನಂ ಆಂ ಪುಟ್ಟ ಲೊಡೆನ್ನ ಮೆಯ್ಯ ದುರ್ಗಂಧಕ್ಕೆ ಪೇಸಿ ಕಂಡರೆಲ್ಲಮೆೞೆದು ಕಳೆಯೆ ಪ್ರೇತ ವನದೊಳ್ ನನ್ನಂ ಜೀರ್ಣ ಶೀರ್ಣ ಚೀರಂಗಳಿಂದಂ ಪುದಿದಿರಿಸಿ ತಾಮಿರ್ವರುಂ ತಿರಿದು ತಂದಿಕ್ಕಿದೆಂಜಲೆವುಱುಮಂ ತಿಂದು ಪೆಸರುಮಿಲ್ಲದೆ ನಿರ್ನಾಮಿಕೆಯಾಗಿ ಬಳೆವನ್ನೆಗಮವರಿರ್ವರುಮೆನ್ನ ಮೊಗದೊಳ್ ನಿಲ್ಲದೆ ಪೋದೊಡಾನುಮಂಬರ ತಿಲಕ ಮೆಂಬ ಚಾರಣ ಚರಿತಮೆಂಬ ಪರ್ವತದ ಮೇಲೆ ವಿಹಿತಾಸ್ರವರೆಂಬವಧಿ ಜ್ಞಾನಿಗಳಂ ಕಂಡಱಿವಿಲ್ಲದೆಯುಂ ಮನದೆಱಕದಿಂ ಪೊಡೆವಟ್ಟು ಎನ್ನ ಗೆಯ್ದ ಪಾಪಮೇನೆಂದು ಬೆಸಗೊಂಡೊಡವರಿಂತೆಂದರ್:

ಈ ವಿಷಯದ ಪಳಾಳಕೂಟಗ್ರಾಮದೊಳ್ ದೇವಿಲನೆಂಬ ಗಾವುಂಡಂಗಂ ಸುದತಿಯೆಂಬ ಗಾವುಂಡಿತಿಗಂ ಧನಶ್ರೀಯೆಂಬ ಮಗಳಾಗಿ ನೀನಾಡುವೆಡೆಯೊಳ್ ಸಮಾಧಿಗುಪ್ತ ಯತಿ ಪತಿಗಳಧ್ಯಯನಂ ನಿನಗನಿಷ್ಟಮಾದೊಡಂ ಮಾಣಿಸಲೆಂದು ನಾಯ ಪಡುಕೆಯನಿಕ್ಕಿದೊಡವರ್ ನಿನ್ನ ಪಾಪೋಪಚಯಮನಱಿದು ಬಗ್ಗಿಸಿದೊಡೆ ನೀಂಬೆರ್ಚಿ ಬೇಗಮದನೆೞೆದು ಕಳೆದಱಿಯದೆ ಗೆಯ್ದೆನೆಂದವರ ಕಾಲ್ಗೆಱಗಿ ಪಶ್ಚಾತ್ತಾಪದಿಂದಂ ಮನುಷ್ಯ ಗತಿಯುಂ ಪಡೆದೊಡಂ ಮುಂ ನೀಂ ಗೆಯ್ದ ಪಾಪ ಫಲದಿನಿನಿತು ದುಃಖಮನುಂಡೌ. ನೀನಿನ್ನಪ್ಪೊಡಂ ಜಿನಧರ್ಮಮಂ ಕೈಕೊಳ್ವು ದೆಂದೊಡವರ್ ಬೆಸಸಿದಂದದೊಳೆ ಶ್ರಾವಕ ವ್ರತಮಂ ಕೈಕೊಂಡು ಷೋಡಶ ಕಾರಣಂಗಳುಮಂ ಪಂಚ ಮಹಾಕಲ್ಯಾಣಮುಮಂ ಅಷ್ಟ ಮಹಾ ಪ್ರಾತಿ ಹಾರ್ಯಮುಮಂ ಚತುಸ್ತ್ರಿಂಶದತಿಶಯಮುಮನುಪದೇಶಂಗೆಯ್ದುಱುವತ್ತು ಮೂಱು ದಿವಸಂ ನೋಂಪ ಜಿನಗುಣ ಸಂಪತ್ತಿಯುಮನಿರ್ಪತ್ತೆಂಟು ತೆಱದ ಮತಿ ಜ್ಞಾನಮುಮಂ ಪನ್ನೊಂದು ತೆಱದಂಗಮುಮಂ ಪನ್ನೆರಡು ತೆಱದ ಪರಿಕರ್ಮ

ಮುಮನೆಣ್ಬತ್ತೆಂಟು ತೆಱದ ಸೂತ್ರಮುಮನೊಂದು ತೆಱದ ಪ್ರಥಮಾನುಯೋಗ ಮುಮಂ ಪದಿನಾಲ್ಕು ತೆಱದ ಪೂರ್ವಮುಮನೆಯ್ದು ತೆಱದ ಚೂಳಿಕೆಯುಮನಾಱು ತೆಱದವಧಿಜ್ಞಾನಮುಮನೆರಡು ತೆಱದ ಮನಃಪರ್ಯಯ ಜ್ಞಾನಮುಮನೊಂದು ತೆಱದ ಕೇವಳಜ್ಞಾನಮುಮನುದ್ದೇಶಿಸಿ ನೂಱಯ್ವತ್ತೆಂಟು ದಿವಸಂ ನೋಂಪ ಶ್ರುತ ಜ್ಞಾನಮುಮಂ ಯಥೋಚಿತ ವಿಧಿಯಿಂ ನೋಂತಾಯುಷ್ಯಾವಸಾನದೊಳ್ ಈಶಾನ ಕಲ್ಪದೊಳ್ ಶ್ರೀಪ್ರಭ ವಿಮಾನದೊಳ್ ಲಲಿತಾಂಗ ದೇವಂಗೆ ದೇವಿಯೆಂ ಸ್ವಯಂಪ್ರಭೆಯೆನಾಗಿ ಪೂರ್ವೋಪಕಾರಮಂ ಬಗೆದು ಪಿಹಿತಾಸ್ರವ ಗುರುಗಳನಾನು ಮಾತನುಂ ಪೋಗಿ ಪೂಜಿಸಿ ಸುರಲೋಕ ಸುಖಮನುಭವಿಸೆ ಲಲಿತಾಂಗ ದೇವಂ ದೇವಲೋಕದಿಂ ಬಂದೆಲ್ಲಿ ಪುಟ್ಟಿದನೆಂದು ಅಱಿಯೆಂ. ಆನುಮಾತನ ವಿಯೋಗ ದೊಳ್ ಆಱುದಿಂಗಳ್ವರಂ ಜಿನಮಹಿಮೆಯುಂ ಮಾಡಿ ಬಂದಿಲ್ಲಿ ಪುಟ್ಟಿದೇವಾಗ ಮನಮಂ ಕಂಡು ಜಾತಿಸ್ಮರೆಯೆನಾಗಿ ಲಲಿತಾಂಗ ದೇವನಂ ನೆನೆದು ಮೂರ್ಛೆಗೆ ಸಂದೆಂ. ಇನ್ನೀ ಭವದೊಳಾತನೆ ಗಂಡನಲ್ಲದಂದಿಂತೆ ಕಾಲಮಂ ಕಳಿಪುವೆನೆನೆ ಪಂಡಿತೆ ನಿನ್ನ ನಲ್ಲನನೆಲ್ಲಿರ್ದೊಡಂ ಪೊಕ್ಕಱಸಿ ತರ್ಪೆನೆಂದಾಕೆ ಬರೆದ ಪಟಮಂ ಕೊಂಡಲ್ಲಿ ಬರೆಯದ ವಿನ್ನಾಣಂಗಳಂ ಬೆಸಗೊಂಡು ಪೋಗಿ ನಗರ ಮಧ್ಯಸ್ಥಿತ ಮಹಾ ಪೂತ ಜಿನಾಲಯದ ಪಟ್ಟಸಾಲೆಯ ಮುಂದೆ ನೇಲಿಸಿ ಕಾರ್ಯಸಿದ್ಧಿಯಂ ಪಾರುತ್ತಿರ್ದಳ್.

ಅನ್ನೆಗಮಿತ್ತ ವಜ್ರದಂತ ಚಕ್ರವರ್ತಿ ದಿಕ್ಚಕ್ರಮಂ ಕ್ರಮದಿಂ ಬಾಯ್ಕೇಳಿಸಿ ಬಂದು ಪೊಟಲಂ ಪೊಕ್ಕು ಮಗಳ್ಗೆ ಬೞಿಯನಟ್ಟಿ ನೀನಿನ್ನುಬ್ಬೆಗಂಬಡದಿರ್ ನಾಳೆಯೊ ನಾಳಿದೊ ನಿಜಪ್ರಿಯ ಸಮಾಗಮಮಕ್ಕುಂ. ಅದೆಂತೆಂದೊಡೆ ಯಶೋಧರ ಗುರುಗಳೊಳಪ್ಪ ಅಧಿಕ ಭಕ್ತಿಯಿಂದೆನಗೆ ಪುಟ್ಟಿದವಧಿ ಜ್ಞಾನದೊಳಿನ್ನ ನಿನ್ನ ನಿನ್ನ ಕಾಂತನ ಜನ್ಮಾಂತರಮನಱಿದೆನೆಂದಿಂತೆಂದು ಪೇೞಲ್ ತಗುಳ್ದಂ ಆನೀ ಭವಕ್ಕೈದ ನೆಯ ಭವದೊಳೀ ಪುಂಡರೀಕಿಣಿಯೊಳರ್ಧ ಚಕ್ರವರ್ತಿ ವಾಸುದೇವಂಗೆ ಚಂದ್ರ ಕೀರ್ತಿಯೆಂಬ ಮಗನಾಗಿ ಜಯಕೀರ್ತಿಯೆಂಬ ಕೆಳೆಯನುಮಾನುಮೊಡವಳೆದು ಗೃಹೀತಾಣುವ್ರತರೆ ಗೃಹಸ್ಥಧರ್ಮದೊಳಿರ್ಪರುಂ ನೆಗೞ್ದು ಜೀವಿತಾಂತ್ಯದೊಳ್ ಪ್ರೀತಿವರ್ಧನೋದ್ಯಾನದೊಳ್ ಚಂದ್ರಸೇನಾಚಾರ್ಯರ ಪಕ್ಕದೊಳ್ ಸಂನ್ಯಾಸಂ ಗೆಯ್ದು ಸಮಾಧಿವಡೆದು ಮುಡಿಪಿ ಮಹೇಂದ್ರ ಕಲ್ಪದೊಳ್ ಸಪ್ತ ಸಾಗರ ಪ್ರಮಿತ ಜೀವಿತನೆಂ ದೇವನಾಗಿ ಪುಟ್ಟಿದೆಂ. ಜಯಕೀರ್ತಿಯುಮಾ ಕಲ್ಪದೊಳೆ ಸಮಾನ ವಿಭವನಾಗಿ ಪುಟ್ಟಿದೊಂ. ಅಂತಿರ್ವರುಮಮರ ಲೋಕ ಸುಖಮನನುಭವಿಸಿ ಬಂದು ಪುಷ್ಕರವರ ದ್ವೀಪದ ಮೂಡಣ ಮಂದರದ ಪೂರ್ವ ವಿದೇಹದ ಮಂಗಳಾವತೀ ವಿಷಯದ ರತ್ನಸಂಚಯ ಪುರಮನಾಳ್ವ ಶ್ರೀಧರನರಸಿಯರಪ್ಪ ಮನೋಹರಿಗಂ ಮನೋರಮೆಗಂ ಶ್ರೀವರ್ಮಂ ವಿಭೀಷಣನೆಂಬ ಪೆಸರೊಳ್ ಬಲ ವಾಸುದೇವರೆನಿಸಿ ಬಳೆಯೆ ಮದೀಯ ಜನಕನಿರ್ವರುಮನಧಿರಾಜ ಯುವರಾಜಪದವಿಗೊಳ್ ನಿಱಿಸಿ

ಸುಧರ್ಮ ಗುರುಗಳ ಪಕ್ಕದೆ ತಪಮಂ ಕೈಕೊಂಡು ಕರ್ಮಂಗಳಂ ಕಿಡಿಸಿ ಕೃತಾರ್ಥ ನಾದಂ. ಎನ್ನ ತಾಯ್ ಮನೋಹರಿಯುಮೆನ್ನೊಳಿರ್ಪ ಮೋಹಂ ಕಾರಣಮಾಗೆ ಸಕಲ ಶ್ರಾವಕ ವ್ರತಂಗಳಂ ಕೈಕೊಂಡು ನೂಱು ನಾಲ್ವತ್ತು ದಿವಸಂ ನೆಱೆವ ಕರ್ಮಕ್ಷಪಣಮೆಂಬ ನೋಂಪಿಯಂ ನೋಂತು ಜೀವಿತಾಂತ್ಯದೊಳೀಶಾನ ಕಲ್ಪದ ಶ್ರೀಪ್ರಭ ವಿಮಾನದೊಳ್ ಲಲಿತಾಂಗ ದೇವನಾದಳ್.

ಅನ್ನೆಗಮೆನ್ನನುಜನಪ್ಪ ವಿಭೀಷಣನ ವಿಪತ್ತಿಯೊಳ್ ಪ[illegible]ವಿಸುತ್ತಿರ್ದೆನ್ನ ಶೋಕಮನಱಿದು ಮುನ್ನಿನ ಭವದ ಜನನಿಯಪ್ಪ ಲಲಿತಾಂಗದೇವಂ ವಿಭೀಷಣನ ರೂಪದಿಂ ಬಂದು ಬ[illegible]ಯಂ ದೇವರೂಪದಿನೆನ್ನಂ ಪ್ರತಿಬೋಧಿಸೆ ವಿಭೀಷಣನ ಸುತಂಗೆ ರಾಜ್ಯಮಂ ಕೊಟ್ಟು ಶ್ರೀವರ್ಮಂ ಯುಗಂಧರ ತೀರ್ಥಕರರ ಪಕ್ಕದೆ ಪತ್ತುಸಾಸಿರ್ವರರಸು ಮಕ್ಕಳ್ವೆರಸು ಜಿನರೂಪಮಂ ತಾಳ್ದು ಸರ್ವತೋಭದ್ರ ಸಿಂಹವಿಕ್ರೀಡಿತಮೆಂಬ ತಪದೊಳ್ ನೆಗುೞ್ದು ಸಮಧಿಗತಮತಿಶ್ರುತಾವಧಿವಿಜ್ಞಾನನೆಂ ಮುಡಿಪಿ ಸಂನ್ಯಸನ ವಿಧಿಯಿಂ ಅಚ್ಯುತ ಕಲ್ಪದೊಳಿರ್ಪತ್ತೆರಡು ಸಾಗರೋಪ ಮಾಯುಷ್ಯದೊಡೆಯನಚ್ಯುತೇಂದ್ರನಾಗಿ ಜನನೀ ಚರನಪ್ಪ ಲಲಿತಾಂಗದೇವ ನಿಂದೆನಿತೊಂದಾದುದೆಂದು ಬಂದು ಲಲಿತಾಂಗದೇವನಂ ಪೂಜಿಸಿ ಪ್ರೀತಿವರ್ಧನ ವಿಮಾನಮನೇಱಿಸಿಕೊಂಡುಯ್ದೆನ್ನ ಕಲ್ಪದೊಳಗ್ಗಳಮಪ್ಪ ದಿವ್ಯಾಂಬರಾದಿಗಳಿಂ ಮನ್ನಿಸಿದೆಂ. ಆ ದಿವಿಜನುಮೇಕಸಾಗರೋಪಮ ಜೀವಿತಾಂತ್ಯದೊಳ್ ಜಂಬೂ ದ್ವೀಪದ ಪೂರ್ವ ವಿದೇಹದ ಸೀತಾ ನದಿಯ ತೆಂಕಣ ತಡಿಯ ಮಂಗಳಾವತೀ ವಿಷಯದ ವಿಜಯಾರ್ಧ ಪರ್ವತದುತ್ತರ ಶ್ರೇಣಿಯ ಗಾಂಧರ್ವ ಪುರಮನಾಳ್ವ ವಿದ್ಯಾಧರರಾಜಂ ವಾಸವಂಗಂ ಪ್ರಭಾವತಿಯೆಂಬಳಾತನ ಪಿರಿಯರಸಿಗಂ ಮಹೀಧರ ನೆಂಬ ತನೂಜನಾಗೆ ವಾಸವಂ ಮಹೀಧರಂಗೆ ವಿದ್ಯಾಧರಶ್ರೀಯಂ ಕೊಟ್ಟರಿಂಜಯ ಮುನಿಪತಿಗಳ ಪಕ್ಕದೆ ಮುಕ್ತಾವಳಿ ತಪಮಂ ಕೈಕೊಂಡು ಗೆಲ್ಲಂಗೊಂಡಂ ಪ್ರಭಾ ವತಿಯುಂ ಪದ್ಮಾವತಿಯುರೆಂಬ ಕಂತಿಕೆಯರ ಸಾರೆ ರತ್ನಾವಳಿ ತಪದೊಳ್ ನೆಗ[illegible]ದು ಅಚ್ಯುತ ಕಲ್ಪದೊಳ್ ಪ್ರತೀಂದ್ರನಾದೊಳ್.

ಇತ್ತ ಮಹೀಧರನುಮೊರ್ಮೆ ಪುಷ್ಕರಾರ್ಧದ ಪಡುವಣ ಮಂದರದ ಪೂರ್ವ ವಿದೇಹದ ಸೀತಾ ನದಿಯ ತೆಂಕಣ ತಡಿಯ ವತ್ಸಕಾವತೀ ವಿಷಯದ ಪ್ರಭಾಕರೀ ಪುರಿಯ ಪಡುವಣ ದೆಸೆಯ ದೇವದಾರು ವನದೊಳ್ ವಿನಯಂಧರ ಯೋಗಿಗಳ ಪರಿನಿರ್ವಾಣ ಪೂಜೆಯಂ ಮಾಡಿ ಮೇರು ಗಿರಿಯ ನಂದನ ವನದ ಪೂರ್ವ ದಿಗ್ಭಾಗದಕೃತ್ರಿಮ ಚೈತ್ಯಾಲಯದೊಳ್ ವಂದನ ಭಕ್ತಿಗೆ ಬಂದಿರೆ ಮಹೀಧರನ ನಾನಲ್ಲಿ ಕಾಣಲೊಡಮಱಿದು ಎಲೆ ವಿಯಚ್ಚರ ನೀಂ ಲಲಿತಾಂಗ ದೇವನಪ್ಪಂದು ಮಾತೃಚರನೆಂದು ಪೂಜಿಸಿದೆಂ ನಾನಚ್ಯುತೇಂದ್ರಂ ನೀನೆನಿತು ವಿಷಯಾಸಕ್ತನಪ್ಪೆ ಯೆನಲೊಡಂ ಮಹೀಕಂಪನೆಂಬ ನಿಜ ನಂದನಂಗೆ ರಾಜ್ಯಮಂ ಕೊಟ್ಟು ಜಗನ್ನಂದ ಗುರುಗಳಲ್ಲಿ ಶಿಷ್ಯತ್ವಮಂ ಪೂಣ್ದು ಕನಕಾವಳಿ ತಪದೊಳ್ ನೆಗೞ್ದು ಮುಡಿಪಿ ಪ್ರಾಣ

ತೇಂದ್ರನಾಗಿ ಸುರ ಲೋಕದ ಸುಖಮನಿರ್ಪತ್ತು ಸಾಗರೋಪಮಂಬರಮುಂಡು ಬಂದು ಧಾತಕೀಷಂಡದ ಮೂಡಣ ಮಂದರದಪರ ವಿದೇಹದ ಸೀತಾ ನದಿಯ ಬಡಗಣ ತಡಿಯ ಗಂಧಿಳ ವಿಷಯದ ಅಯೋಧ್ಯೆಯನಾಳ್ವ ಜಯವರ್ಮಂಗಂ ಸುಪ್ರಭೆಗಂ ಅರಿಂಜಯನೆಂಬ ಮಗನಾದೊಡಾತಂಗೆ ಧರಾಭಾರಮಂ ಕೊಟ್ಟು ಅಭಿನಂದನರಂ ಸಾರ್ದು ಆಚಾಮ್ಲವರ್ಧನ ತಪದಿಂ ನೆಗೞ್ದು ಜಯವರ್ಮಂ ಪರಮ ಪದಮನೈದಿದೊಂ. ಸುಪ್ರಭೆಯುಂ ಸುದರ್ಶನ ಕಂತಿಕೆಯರ ಸಾರೆ ರತ್ನಾವಳಿಯಂ ನೋಂತು ಅಚ್ಯುತ ಕಲ್ಪದೊಳ್ ಅನುದ್ಧತ ವಿಮಾನದೊಳ್ ದೇವನಾಗಿ ಪುಟ್ಟಿದಳ್. ಇತ್ತಲ್ ಅರಿಂಜಯನುಂ ಷೋಡಶ ವರ್ಷ ವಯದೊಳ್ ಚಕ್ರವರ್ತಿ ಪದವಿಯ ನೈದಿದಂ. ಬೞಿಯಂ ಅರಿಂಜಯಂ ಜಿನ ಮಹಿಮೆಯಂ ಮಾಡಿ ಪಿಹಿತ ಪಾಪಾ ಸ್ರವಪ್ಪಾರನಾದುದಱಿಂದೆ ಪಿಹಿತಾಸ್ರವನೆಂಬ ಪೆಸರಂ ಪಡೆದು ರಾಜ್ಯಂ ಗೆಯ್ಯು ತ್ತುಮಿರೆ ಮತ್ತಮಾನೊರ್ಮೆ ಕಂಡಾತನಂ ಪ್ರತಿಬೋಧಿಸೆ ಪರಿಚ್ಛೇದಿಯಾಗಿ ಸಾಸಿರ್ವ ರರಸುಗಳ್‌ವೆರಸು ಮಂದರಸ್ಥವಿರ ಮುನಿಪತಿಗಳ ಪಕ್ಕದೆ ಮೋಕ್ಷ ಮಾರ್ಗಮಂ ಕೈಕೊಂಡು ಅವಧಿಜ್ಞಾನಧರನುಂ ಗಗನಚಾರಣ ಋದ್ಧಿಸಂಪನ್ನರಯ್ಯೂರ್ವರೆಂಬರ ಚಾರಣರೊಡನೆ ವಿಹಾರಿಸುತ್ತುಂ ಚಾರಣಚರಿತಮೆಂಬ ಪುಣ್ಯಾರಣ್ಯದೊಳಗಣಂ ಬರತಿಳಕ ಗಿರಿಯೊಳ್ ಯೋಗಸ್ಥರಾಗಿರ್ದಂದು ನಿರ್ನಾಮಿಕೆಯಪ್ಪ ಭವದೊಳೆನ್ನ ಜನನೀಚರ ಗುರುಗಳ್ ಎನಗಂ ನಿನಗಂ ಗುರುಗಳಾದರ್. ಅವರ್ ಪೇೞ್ದುಪದೇಶ ದೊಳ್ ನೋಂತು ಮಹಾಬಲಚರ ಲಲಿತಾಂಗದೇವಂಗೆ ಸ್ವಯಂಪ್ರಭೆಯೆಂಬ ದೇವಿಯಾದಯ್. ಆನುಮೆನ್ನ ಜನನೀಚರ ಲಲಿತಾಂಗದೇವನೊಳನುಭವಿಸಿದ ಮೋಹದೊಳ್ ನಿನ್ನ ದೇವನಪ್ಪ ಲಲಿತಾಂಗಂಬೆರಸಿರ್ಪತ್ತಿರ್ವರ್ ಲಲಿತಾಂಗ ದೇವರಂ ಪೂಜಿಸಿದೆಂ. ಅದಂ ನೀನುಮರಿವಾ. ಅದಲ್ಲದೆಯುಂ ನೀನುಂ ನಿನ್ನ ದೇವನುಂ ಕೇಳುತ್ತಿರೆ ಲಾಂತವೇಂದ್ರನುಂ ಬ್ರಹ್ಮೇಂದ್ರನುಂ ನಮ್ಮ ಮೂವರ ಮುನ್ನಿನ ಭವದ ಗುರುಗಳಪ್ಪ ಯುಗಂಧರ ತೀರ್ಥಂಕರರ ಚರಿತಮಂ ಪೇೞಿಸೆ ಯುಗಂಧರ ಚರಿತಮನಾಂ ಪೇೞ್ದಿಂ.

ಅದೆಂತೆಂದೊಡೆ ಜಂಬೂದ್ವೀಪದ ಪೂರ್ವ ವಿದೇಹದ ಸೀತಾನದಿಯ ತೆಂಕಣ ತಡಿಯ ವತ್ಸಕಾವತೀ ವಿಷಯದ ಸುಸೀಮಾ ನಗರಮನಾಳ್ವ ಅಜಿತಂಜಯನೆಂಬ ರಸನ ಸಚಿವನಮಿತಮತಿಗಮಾತನ ಕುಲ ಲಲನೆ ಸತ್ಯಭಾಮೆಗಂ ಪ್ರಹಸಿತನೆಂಬೊಂ ಮಗನಾತನ ಕೆಳೆಯಂ ವಿಕಸಿತನೆಂಬೊಂ. ಇರ್ವರುಂ ಮಿಥ್ಯಾಜ್ಞಾನಿಗಳ್ ಶೂನ್ಯ ವಾದಿಗಳೊಂದು ದಿವಸಂ ಅಜಿತಂಜಯನೊಡನೆ ಪೋಗಿ ತತ್ಪುರೋಪವನದೊಳಿರ್ದ ರಸರ್ಧಿಯೊಳಮೃತಾಸ್ರವತ್ವಮೆಂಬ ಋದ್ಧಿಪ್ರಾಪ್ತರಪ್ಪ ಮತಿಸಾಗರ ಮುನಿಪತಿ ಗಳೊಳ್ ವಾದು ಗೆಯ್ದು ಹತಪ್ರತಿಭರಾಗಿ ಶಿಷ್ಯತ್ವಮಂ ಪೂಣ್ದು ಮಹಾವ್ರತ ದೊಳಾಚಾಮ್ಲವರ್ಧನಮಂ ನೋಂತು ಸಮಾಧಿವಡೆದು ಮಹಾ ಶುಕ್ರ ಕಲ್ಪಕ್ಕೆ ಸಂದು ಪ್ರಹಸಿತನಿಂದ್ರನಾದೊಂ. ವಿಕಸಿತನುಂ ವಾಸುದೇವನ ವಿಭೂತಿಯಂ ಕಂಡು

ನಿಧಾನಂಗೆಯ್ದು ಹತ ಪ್ರಭನಾಗಿ ಸಮಾಧಿ ವಿಧಿಯಿಂ ಕಾಲಾಂತರದೊಳಲ್ಲಿಯೆ ಪ್ರತೀಂದ್ರನಾಗಿ ಪದಿನಾಱು ಸಾಗರೋಪಮ ವರ್ಷಂಬರಂ ಸುರಲೋಕ ಸುಖ ಮನನುಭವಿಸಿ ಬಂದು ಧಾತಕೀ ಷಂಡದ ಪಡುವಣ ಮಂದರದ ಪೂರ್ವ ವಿದೇಹದ ಪುಷ್ಕಲಾವತೀ ವಿಷಯದ ಪುಂಡರೀಕಿಣಿಯನಾಳ್ವ ಧನಂಜಯನರಸಿಯರಪ್ಪ ಯಶಸ್ವತಿಗಂ ಜಯಸೇನೆಗಂ ಮಹಾಬಲನುಮತಿಬಲನುಮೆಂಬರ್ ರಾಮ ಕೇಶವ ರಾಗಿ ಪುಟ್ಟಿ ತಂದೆಯ ಪರೋಕ್ಷದೊಳ್ ರಾಜ್ಯಂಗೆಯ್ಯುತತಿಬಲನೆಂಬ ಕೇಶವನ ವಿಪತ್ತಿಯೊಳ್ ಮಹಾಬಲಂ ಸಮಾಧಿಗುಪ್ತರ ಪಕ್ಕದೆ ಮಹಾ ವ್ರತಮನಾಂತು ಜೀವಿತಾಂತ್ಯದೊಳ್ ಪ್ರಾಣತ ಕಲ್ಪದೊಳ್ ಪ್ರಾಣತೇಂದ್ರನಾಗಿ ವಿಂಶತಿ ಸಮುದ್ರೋಪಮ ವಿರಾಮದೊಳ್ ಧಾತಕೀ ಷಂಡದ ಪಡುವಣ ಮಂದರದ ಪೂರ್ವ ವಿದೇಹದ ಸೀತಾನದಿಯ ತೆಂಕಣ ತಡಿಯ ವತ್ಸಕಾವತೀ ವಿಷಯದ ಪ್ರಭಾಕರೀ ಪುರಮನಾಳ್ವ ಮಹಾಸೇನಂಗಂ ವಸುಂಧರೆಗಂ ಜಯಸೇನನೆಂಬ ಮಗನಾಗಿ ನಿಜ ಗುರು ಗೃಹೀತ ಮಹಾ ವ್ರತನಾಗಿ ಪೋಗಿ ತನಗಾದ ಚಕ್ರವರ್ತಿ ಪದಮಂ ಬಿಸುಟು ಸೀಮಂಧರ ಜಿನರ ಪಕ್ಕದೆ ದಿಗಂಬರನಾಗಿ ಷೋಡಶ ಭಾವನೆಗಳಂ ಭಾವಿಸಿ ಜೀವಿ ತಾಂತ್ಯದೊಳ್ ಸೌಮನಸಮೆಂಬುಪರಿಮ ಮಧ್ಯಮ ಗ್ರೈವೇಯಕದೊಳಹಮಿಂದ್ರ ನಾಗಿ ಮೂವತ್ತು ಸಾಗರೋಪಮಾಯುಷ್ಯಂಬರಂ ಸುಖಮನನುಭವಿಸಿ ಬಂದು ಪುಷ್ಕಲಾರ್ಧದ ಮೂಡಣ ಮಂದರದ ಪೂರ್ವ ವಿದೇಹದ ಸೀತಾನದಿಯ ತೆಂಕಣ ತಡಿಯ ಮಂಗಳಾವತೀ ವಿಷಯದ ರತ್ನ ಸಂಚಯ ಪುರಮನಾಳ್ವಜಿತಂಜಯ ಮಹಾರಾಜಂಗಂ ವಸುಮತಿಗಂ ಯುಗಂಧರನೆಂಬ ಮಗನಾಗಿ ದೀಕ್ಷೆಯಂ ಪೂಣ್ದು ಘಾತಿಕ್ಷಯಾನಂತರೋತ್ಪನ್ನ ಕೇವಲಜ್ಞಾನ ತೀರ್ಥಕರ ಪರಮದೇವಂ ವೇದ ಸಮ್ಯಕ್ತ್ವದುತ್ಕೃಷ್ಟಸ್ಥಿತಿಯೊಳಮುಱುವತ್ತು ಸಾಗರೋಪಮ ಕಾಲಮಭ್ಯುದಯ ಸುಖಮನನುಭವಿಸಿ ನಿರ್ವಾಣಕ್ಕೆ ಸಂದಂ. ಅದಂ ಕೇಳ್ದು ಪಲರುಂ ಸಮ್ಯಗ್ದರ್ಶನ ವಿಶುದ್ಧರಾದರ್. ಅದಲ್ಲದೆಯುಂ ನಮ್ಮಿರ್ವರ ಗುರುಗಳಪ್ಪ ಪಿಹಿತಾಸ್ರವ ಭಟ್ಟಾರಕರ ಕೇವಲಜ್ಞಾನೋತ್ಪತ್ತಿಯೊಸಗೆಯನಂಬರತಿಲಕ ಗಿರಿಗೆ ಪೋಗಿ ಮಾಡಿದೆವು. ಅದಲ್ಲ ದೆಯುಂ ಮೇರು ಗಿರಿಯೊಳ್ ವನಕೇಳಿಯುಮಂ ಸ್ವಯಂಭೂರಮಣ ಸಮುದ್ರ ದೊಳ್ ಜಲಕೇಳಿಯುಮನಾಡಿದೆವೆಂದಿವು ಮೊದಲಾಗೆ ಮುನ್ನಿನ ಜನ್ಮದ ಕಥಾಂತರ ಮನಱಿಪಿದೊಡದೆಲ್ಲಮನಱಿದೆಂ. ಎನ್ನ ವಲ್ಲಭಂ ಲಲಿತಾಂಗದೇವನೆಲ್ಲಿ ಪುಟ್ಟಿದ ನೆಂಬುದುಂ ಆಂ ನಿಮ್ಮಿಂ ಮುನ್ನಮಚ್ಯುತ ಕಲ್ಪದೊಳ್ ಬಂದಿಲ್ಲಿ ಯಶೋಧರಂಗಂ ವಸುಮತಿಗಂ ವಜ್ರದಂತನಾದೆಂ. ನಿನ್ನ ವಲ್ಲಭಂ ಲಲಿತಾಂಗನುಂ ಈಶಾನಕಲ್ಪದಿಂ ಬಂದು ಉತ್ಪಲಖೇಟಮನಾಳ್ವ ಎನ್ನ ಮೆಯ್ದುನಂ ವಜ್ರಬಾಹುಗಮೆನ್ನ ತಂಗೆ ವಸುಂಧರೆಗಂ ವಜ್ರಜಂಘನೆಂಬ ಮಗನಾದಂ. ಆ ಸ್ವಯಂಪ್ರಭೆಯೆ ನೀನೆನಗೆ ಮಗಳಾದೌ. ವಜ್ರಬಾಹುವುಂ ನಿಮ್ಮತ್ತೆಯುಂ ಮೂಱನೆಯ ದಿವಸಕ್ಕೆ ಬರ್ಪರ್. ಆಮುಮವರ್ಗಿದಿರ್ಪೋಪ ಒಸಗೆಯ ಮಾತಂ ಕೊಂಡು ಪಂಡಿತೆಯುಮಿಗಳೆ

ಬರ್ಪಳೆಂದು ಪೋದಂ. ಅನ್ನೆಗಂ ಶ್ರೀಮತಿಯುಂ ಪಂಡಿತೆ ಬಂದು ಕಂಡು ನಿನ್ನ ಬರೆದ ಪಟಮಂ ಮಹಾಪೂತ ಜಿನಾಲಯದ ಮುಂದೆ ನೇಲಿಸಿದೆನನ್ನೆಗಂ ಕೇಶವ ದುರ್ಮುಖರ ಮಕ್ಕಳ್ ವಾಸವ ದುರ್ದಂತರೆಂಬಿರ್ವರ್ ದುರ್ವಿದಗ್ಧರದಂ ಕಂಡಿ ದೆಲ್ಲಮೆಮ್ಮ ಪ್ರಪಂಚಮೆಂದು ಪುಸಿಯನೆ ಮೂರ್ಛೆವೋದರನೆಟ್ಟಿಱಿಸಿಯಲ್ಲಿಯ ವಿನ್ನಾಣಂಗಳಂ ಬೆಸಗೊಂಡೊಡವರಱಿಯದಿರ್ದೊಡೆ ಉಸಿರದೆ ಬಂದ ಬಟ್ಟೆಯಿಂ ಬಿಜಯಂಗೆಯ್ಯಿಮೆಂದು ನಿರಾಕರಿಸಿ ಕಳೆದೆಂ. ಅನ್ನೆಗಮೊರ್ವಂ ರಾಜಕುಮಾರಂ ಬಂದು ದೇವರಂ ವಂದಿಸಿ ಸಿದ್ಧಶೇಷಯುಂ ಕೊಂಡು ಪೊಱಮಟ್ಟು ಪಟಮಂ ನಿಂದು ನೋಡಿ ಪೂರ್ವ ಭವಾನುಸ್ಮರಣಮಾಗೆ ಮೂರ್ಛಾನುಗತನಾಗಿ ಶೀತಲ ಕ್ರಿಯೆ ಗಳಿನೆೞ್ಚತ್ತಿದನಿಲ್ಲಿಗಾರ್ತಂದರೆಂಬುದುಮಾಂ ತಂದೆನೆಂದೊಡೆನಗೆ ನಿನ್ನ ಬರೆಯದೆ ಬಂಚಿಸಿದವಿನ್ನಾಣಂಗಳನಾತನಱಿಪಿದೊಡಾಂ ನಿನ್ನ ವಲ್ಲಭಂ ಲಲಿತಾಂಗ ನಪ್ಪುದುಂ ತಪ್ಪಿಲ್ಲದುದಱಿಂದಾತನನೆಂದೆಂ :—

ನೀಂ ಲಲಿತಾಂಗಚರನಪ್ಪುದಱಿನಾ ಸ್ವಯಂಪ್ರಭೆ ನಿಮ್ಮಮಾವಂ ವಜ್ರ ದಂತಂಗಂ ನಿಮ್ಮತ್ತೆ ಲಕ್ಷ್ಮೀಮತಿಗಂ ಶ್ರೀಮತಿಯಾಗಿ ಪುಟ್ಟಿದುದಱಿಂ ನಿನ್ನ ತನ್ನ ಬಯಕೆಗಳ್ ಕೂಡಿ ಬಂದುವೆಂಬುದುಮಾತನೆನ್ನುಯ್ದ ಪಟಮಂ ಕೊಂಡು ತಾನೀ ಪಟಮಂ ಬರೆದಿತ್ತನೆಂದಡಂ ತೋಱಿ ವಿವಾಹೋತ್ಸವಕ್ಕೆ ಬರ್ಪ ವಜ್ರಬಾಹುವ ವಜ್ರಜಂಘನ ಬರವನಱಿಪಿ ಬರ್ಪನ್ನೆಗಮರಸನವರ ಬರವಿಂಗಿದಿರ್ವೋಗಿ ಮುಂದಿ ಟ್ಟೊಡಗೊಂಡು ಬಂದು ಪೊೞಲಂ ಪೊಕ್ಕಭ್ಯಾಗತ ಪ್ರತಿಪತ್ತಿಗೆಯ್ದು ಅನರ್ಘ್ಯ ವಸ್ತುವಂ ವಜ್ರಬಾಹುವಿಗೆ ಕೊಟ್ಟೊಡೇನುಮನೊಲ್ಲೆಂ ನಿಮ್ಮಳಿಯಂಗೆ ಶ್ರೀಮತಿಯಂ ಕುಡುವುದೆನೆ ಪಿರಿದುತ್ಸವದಿಂ ಶ್ರೀಮತಿಗಂ ವಜ್ರಜಂಘಂಗಂ ಮದುವೆಯಂ ಮಾಡಿ ವಧೂವರರ್ಗೆ ಮೂವತ್ತಿರ್ಛಾಸಿರ್ವರ್ಮಕುಟಬದ್ಧರಿಂ ಮೂವತ್ತಿರ್ಛಾಸಿರ ಕಲ್ಯಾ ಣಾಭಿಷೇಕಂಗೆಯ್ಸಿ ವೀರಬಾಹು ಸುಬಾಹು ಪ್ರಭೃತಿಗಳಪ್ಪ ಮಕ್ಕಳ್ವೆರಸು ಉತ್ಪಲ ಖೇಟಕ್ಕೆ ಕಳಿಪುವುದುಂ ವಜ್ರಜಂಘನ ತಂಗೆಯಪ್ಪನುಂದರಿಯಂ ಶ್ರೀಮತಿಯಣ್ಣನ ಮಿತತೇಜಂಗೆ ಕೊಟ್ಟವರಂ ಪಂಡಿತೆಯುಮಂ ಪುಂಡರೀಕಿಣಿಗೆ ಕಳಿಪಿ ವಧೂ ವರರ್ ಸುಖಮಿರ್ಪಿನಮವರ್ಗೆ ನಾಲ್ವತ್ತೊಂಬತ್ತುಮಳ್ಗಳ್ ಪುಟ್ಟಿದುವು. ಅನ್ನೆಗಮೊಂದು ದಿವಸಂ ವಜ್ರಬಾಹು ಮಾಡದ ಮೇಗಣ ನೆಲೆಯೊಳಿರ್ದು ಶರತ್ಕಾಲದ ಜಲಧರಮಂ ಕಂಡು ಇದಱ ದೊರೆಯ ಚೈತ್ಯಾಲಯಮಂ ಮಾಡಿಸುವೆನೆಂದು ಬಟ್ಟಿಗೆವಲಗೆಯಂ ತರಿಸಿ ತದಾಕಾರಮಂ ಬರೆಯೆ ಮುಗಿಲ್ ಕರಗಿದುದಂ ಕಂಡು ಅದುವೆ ನಿರ್ವೇಗ ಮಾಗಿ ವಜ್ರಜಂಘಂಗೆ ಪಟ್ಟಮಂ ಕಟ್ಟಿ ವಸುಂಧರೆವೆರಸು ಪಲರುಮರಸಿಯರು ವ್ಯೆಸಾಸಿರ್ವರರಸುಗಳುಂ ಶ್ರೀಮತಿಯ ಮಕ್ಕಳಪ್ಪ ನಾಲ್ವತ್ತೊಂಬತ್ತುಮಳ್ಗಳುಂ ವೆರಸು ಯಶೋಧರ ಮುನೀಂದ್ರನ ಪಕ್ಕದೆ ತಪಮಂ ಕೈಕೊಂಡು ಮುಕ್ತಿಯಂ ಸಾಧಿಸಿಕೊಂಡಂ.

ಇತ್ತ ವಜ್ರದಂತನುಂ ಬಂದು ಮುಕುಳಿತ ನೀಳಾರವಿಂದಮಂ ಪಿಡಿದು

ನೋಡುತ್ತಿರ್ದಂ. ಅದಱಿಂದೊಳಗೆ ಸತ್ತಿರ್ದ ತುಂಬಿಯಂ ಕಂಡೊಂದಿಂದ್ರಿಯದ ಬೆಸನದೊಳೆಸಗಿದುದಕಿಂತಾದುದು ಐದುಮಿಂದ್ರಿಯದ ಬಸನದೊಳೆಸಗುವೆಮ ಗೆಂತಕ್ಕುಮೆಂದು ವಿಷಯ ವಿರಕ್ತನಾಗಿ ನಿಜಾಗ್ರ ತನೂಜಂಗೆ ಅಮಿತತೇಜಂಗೆ ರಾಜ್ಯಭಾರಮಂ ಕೊಟ್ಟೊಡಾತನೆಂತುಮೊಲ್ಲದಿರ್ದೊಡುೞಿದ ಮಕ್ಕಳುಮನೊಡಂ ಬಡಿಸಲಾದಱಿದಮಿತತೇಜಂಗಮನುಂದರಿಗಂ ಪುಟ್ಟಿದ ಪುಂಡರೀಕನೆಂಬ ಶಿಶುಗೆ ರಾಜ್ಯಮಂ ಕೊಟ್ಟು ಸಾಸಿರ್ವರ್ ಮಕ್ಕಳುಮಱುವತ್ತು ಸಾಸಿರ್ವರರಸಿಯರು ಮಿರ್ಪತ್ತು ಸಾಸಿರ್ವರ್ ಮಕುಟಬದ್ಧರುಂ ಪಂಡಿತೆಯುಂ ಬೆರಸು ಯಶೋಧರ ಜಿನರ ಪ್ರಥಮ ಗಣಧರರಲ್ಲಿ ದೀಕ್ಷೆಯಂ ಕೈಕೊಂಡು ಮೋಕ್ಷಮಂ ಸಾಧಿಸಿದಂ.

ಲಕ್ಷ್ಮೀಮತಿಯುಮನುಂದರಿಯುಂ ಇರುತ್ತಿರಲ್ ಗಾಂಧರ್ವ ಪುರಾಧಿಪತಿ ಮಂದರಮಾಲೆಗಂ ಸುಂದರಿಗಂ ಪುಟ್ಟಿದ ಚಿಂತಾಗತಿ ಮನೋಗತಿಯೆಂಬ ವಿದ್ಯಾ ಧರರ ಕಯ್ಯೊಳ್ ಕಪ್ಪಮಂ ಬೇಡೆ ದೂತರಂ ಕಳಿಪಲ್ ಅವರುಂ ವಜ್ರದಂತಂ ತಪಂಬಟ್ಟುದುಮಂ ಪುಂಡರೀಕಂಗೆ ನವರಾಜ್ಯದೊಳಾರುಂ ಬೆಸಕೆಯ್ಯದುದು ಮನಱಿಪಿಯಟ್ಟಿದೊಡೆ ತಮ್ಮಯ್ಯನ ತನ್ನೊಡವುಟ್ಟಿದರ ಬ್ಯತಿಕರಮುಮಂ ಕೇಳ್ದು ಶೋಕಾಕುಲೆಯಾದ ಶ್ರೀಮತಿಯಂ ವಜ್ರಜಂಘಂ ಸಂತೈಸಿ ನಿಜಮಂತ್ರಿ ಮತಿವರ ನೊಳಂ ಸೇನಾ ನಾಯಕನಕಂಪನೊಳಂ ಸೆಟ್ಟಿ ಧನಮಿತ್ರನೊಳಂ ಪುರೋಹಿತನಾ ನಂದನೊಳಂ ರಾಜಶ್ರೇಷ್ಠಿ ಧನಮಿತ್ರನೊಳಮಾಳೋಚಿಸಿ ಬೀಡಂ ಪೆಱಗೆ ಬರ್ಪಂತು ನಿಯಮಿಸಿ ಪಯಣದಿಂ ಪಯಣಂ ಬಂದು ಸರ್ಪಸರೋವರಮೆಂಬ ಕೊಳನ ತಡಿಯೊಳ್ ಬೀಡಂ ಬಿಟ್ಟಿರ್ಪನ್ನೆಗಮಲ್ಲಿಗೆ ಧರ್ಮವರರುಂ ಸಾಗರ ಸೇನರುಮೆಂಬ ಚಾರಣರ್ ಕಾಂತಾರಚರ್ಯಾ ಮಾರ್ಗದೊಳ್ ಬರ್ಪರಂ ತಾನುಂ ಶ್ರೀಮತಿಯುಂ ಕಂಡು ನಿಲಿಸಿ ನವವಿಧ ಪುಣ್ಯ ಸಪ್ತ ಗುಣ ಸಂಪನ್ನರಾಗಿ ಚರಿಗೆಯಂ ಮಾಡೆ ಪಂಚಾಶ್ಚರ್ಯಮಂ ನೆಗೞ್ದುವು. ಆಗಳ್ ಅರಸನಿವರೊಳಗೆಮಗಿನಿತುವರಂ ಮೋಹ ಮಾದುದೇಕೆನೆ ವೃದ್ಧ ಕಂಚುಕಿ ಪೇೞ್ದಳ್: ಇವರ್ಗಳ್ ನಾಲ್ವತ್ತೊಂಬತ್ತನೆಯ ಮಳ್ಗಳ್ ನಿನ್ನ ಕನ್ನೆಯರ್ ಎಂಬುದುಂ ಅಱಿದೆನುಸಿರದಿರೆಂದು ಬಾರಿಸಿ ತನ್ಮುನಿ ಯುಗಳದ ಕಾಲ್ಗರ್ಚಿದ ನೀರೊಳ್ ಪೊರಳ್ದು ದಾನಾನುಮೋದದಿಂದುಪಶಾಂತಂ ಗಳಾಗಿ ಮುನಿ ಮುಖಾವಲೋಕನಂಗೆಯ್ವ ಶಾರ್ದೂಲ ವರಾಹ ಗೋಲಾಂಗೂಲ ನಕುಲಂಗಳಂ ನೋಡುತ್ತುಮವರ್ಕೆ ಭಕ್ಷ್ಯ ರೂಪಂಗಳಂ ತರಿಸಿ ನೀಡುತ್ತುಮರಸಂ ತನ್ನ ಶ್ರೀಮತಿಯ ಭವ ಸಂಬಂಧಮುಂ ಕೇಳ್ದು ಮತಿವರಾಕಂಪಾನಂದ ಧನಮಿತ್ರ ರೆಂಬ ನಾಲ್ವರ ಭವಾವಳಿಯಂ ಬೆಸಗೊಂಡೊಡವರವಧಿ ಜ್ಞಾನಿಗಳ್ ದಮವರ ರಿಂತೆಂದರ್ :—

ಮತಿವರನೀ ಭವಕ್ಕೈದನೆಯ ಭವದೊಳ್ ಜಂಬೂದ್ವೀಪದ ಪೂರ್ವವಿದೇಹದ ಕಚ್ಛವಿಷಯದ ಪ್ರಭಾಕರೀಪುರದೊಳತಿಗೃದ್ಧನೆಂಬರಸನತಿಲುಬ್ಧನಾಗಿ ತನ್ನೊಡ ಮೆಯನುಪಾದ್ರಿಯೊಳ್ ಬಯ್ತು ಸತ್ತು ಪಂಕಪ್ರಭೆಯೊಳ್ ಪತ್ತು ಸಾಗರೋಪ

ಮಂಬರಂ ದುಃಖಮನುಂಡು ಬಂದು ತನ್ನ ಮುನ್ನಿನ ಬಯ್ತ ಕೆಲದೊಳ್ ಪುಲಿ ಯಾಗಿ ಪುಟ್ಟಿದಂ. ಅನ್ನೆಗಮಾ ನಗರಮನಾಳ್ವ ಪ್ರೀತಿವರ್ಧನಂ ಪರರಂ ಕಾದಲ್ ಪೋದೊಡೆ ತನ್ನ ತಮ್ಮಂ ವಿಜಿಗೀಷುವಾಗಿ ಪೋದೊಡಾತನಂ ಸಾಮಾದಿಗಳಿನೊಡಂ ಬಡಿಸಿ ತಂದಲ್ಲಿ ಬೀಡುವಿಟ್ಟಿರೆ ಶಕುನದ ನಯದಿಂ ಪುರೋಹಿತನರಸಂಗಿಂತೆಂದಂ: ಉತ್ತಮ ಪಾತ್ರ ದಾನದಿಂ ಕನಕ ಲಾಭಮುಂ ಪೂಜಾ ಲಾಭಮುಂ ಈಗಳೆ ನಿನಗಾದಪುದೆಂದೊಡೆ ಇದಿರ್ಗೆ ಮುನಿಗಳ್ ಚರಿಗೆವರ್ಪಂದವಾವುದೆನೆ ಪುರೋಹಿತ ನಾನಱಿವೆನೆಂದು ಪೊೞಲ ವೀಧಿಗಳೊಳೆಲ್ಲಂ ನೀರಂ ತಳಿಯಿಸಿ ಫಲ ಪುಷ್ಪಂಗಳಂ ಕೆದರಿಸಿದೊಡೆ ಚತುರಂಗುಲ ಚಾರಣ ಪಿಹಿತಾಸ್ರವ ಮುನಿ ಮಾಸೋಪವಾಸಂ ಗೆಯ್ದು ಅಪ್ರಾಸುಕವೆಂದು ಪೊೞಲಂ ಪುಗದೆ ಬೀಡಂ ಪುಗೆ ನಿಱಿಸಿದಾಗಳೆ ಪಂಚಾಶ್ಚರ್ಯಮಾದೊಡಾ ಪರ್ವತದೊಳಿರ್ದ ಶಾರ್ದೂಲಂ ಜಾತಿಸ್ಮರನಾಗಿ ತೊೞಲ್ತಿ ದಿರ್ದುದೆಂಬುದನಾ ಮುನಿಪನವಧಿಯಿನಱಿದು ಆ ಪ್ರೀತಿವರ್ಧನಂ ಪ್ರತಿಬೋಧಿಸುವ ಬಗೆಯೊಳಾ ಪುಲಿಯ ಪೂರ್ವಭವದ ವೃತ್ತಾಂತಮುಂ ಕಾಲ ಬ್ಧಿ ದೊರೆಕೊಳೆ ತೊೞಲ್ತಿದಿರ್ದುದುಮನಱಿಪಿ ತದ್ಗಿರಿ ತಟದೊಳ್ ಮುನ್ನೆ ಪೂಳ್ದ ಪೊನ್ನ ಕಡಾಹಂ ಗಳಂ ತೋಱಿ ಚೋದ್ಯಂಬಟ್ಟು ಮಹಾಪೂಜೆಯಂ ಅಲ್ಲಿ ಅರಸಂ ಮಾಡೆ ತನ್ಮುನಿಯ ಪಾದ ಮೂಲದೊಳ್ ಪದಿನೆಂಟು ದಿವಸಂ ನೋಂತು ಸಮಾಧಿವಡೆದು ಮುಡಿಪಿ ಶಾರ್ದೂಲಂ ಈಶಾನ ಕಲ್ಪದೊಳ್ ದಿವಾಕರ ಪ್ರಭಮೆಂಬ ವಿಮಾನದೊಳ್ ದಿವಾಕರ ಪ್ರಭನೆಂಬ ದೇವನಾದೊಂ. ಆ ಪ್ರೀತಿ ವರ್ಧನನುಮಲ್ಲಿಯೆ ತಪಂಬಟ್ಟು ಮೋಕ್ಷ ಪದವಿಯಂ ಪಡೆದೊಂ. ಆತನ ಮಂತ್ರಿ ಪುರೋಹಿತ ಸೇನಾಪತಿಗಳ್ ಮೂವರುಂನೃಪನ ದಾನಾನುಮೋದದ ದಿ ಂದಮುತ್ತರಕುರುವಿನೊಳಾರ್ಯರಾಗೆ ಜೀವಿತಾಂತ್ಯದೊಳೀಶಾನ ಕಲ್ಪದೊಳ್ ಸೇನಾನಾಯಕನಪ್ಪಾರ್ಯಂ ಪ್ರಭಾಕರ ವಿಮಾನದೊಳ್ ಪ್ರಭಾಕರನೆಂಬೊಂ ದೇವನಾದೊಂ. ಮಂತ್ರಿಯಪ್ಪಾರ್ಯ ಕಾಂಚನ ವಿಮಾನದೊಳ್ ಕನಕಪ್ರಭನೆಂಬೊನಮರನಾದೊಂ. ಪುರೋಹಿತ ನಪ್ಪಾರ್ಯಂ ತುಷಿತಾಖ್ಯ ವಿಮಾನದೊಳ್ ಪ್ರಭಂಜನನೆಂಬೊಂ ದೇವನಾದೊಂ. ಮುನ್ನಿನ ಪೇೞ್ದ ಶಾರ್ದೂಲಚರನಪ್ಪ ದೇವಂ ಬೆರಸು ಅಂತು ನಾಲ್ವರುಂ ದೇವರ್ ನೀಂ ಲಲಿತಾಂಗದೇವನಾದಂದು ನಿನಗೆ ಪರಿವಾರ ದೇವರಾದೊಡಾ ಲಲಿತಾಂಗ ದೇವನೆ ನೀನಿಲ್ಲಿ ಬಂದು ವಜ್ರಜಂಘನಾದೈ. ನಿನ್ನ ದೇವಿ ಸ್ವಯಂಪ್ರಭೆ ಶ್ರೀಮತಿ ಯಾದಳ್. ಶಾರ್ದೂಲಚರ ದಿವಾಕರ ಪ್ರಭದೇವಂ ಬಂದು ಮತಿಸಾಗರಂಗಂ ಆತನ ಭಾರ್ಯೆ ಶ್ರೀಮತಿಯೆಂಬಳ್ಗಂ ಮಗನಾಗಿ ನಿಮಗೆ ಮಂತ್ರಿವರನಾದೊಂ. ಪ್ರಭಾ ಕರಾಮರಂಬಂದು ಅಪರಾಜಿತಂಗಮಾರ್ಜವೇಗಂ ಮಗನಾಗಿ ನಿನಗೆ ಸೇನಾನಾಯಕನ ಕಂಪನಾದೊಂ. ಕನಕಪ್ರಭ ದಿವಿಜಂ ಶ್ರುತಕೀರ್ತಿಗಮನಂತಮತಿಗಂ ಮಗನಾಗಿ ಪುರೋಹಿತನಾನಂದನನಾದೊಂ. ಪ್ರಭಂಜನದೇವಂ ಬಂದು ಧನದತ್ತಂಗಂ ಧನ ದತ್ತೆಗಂ ಮಗನಾಗಿ ನಿನ್ನ ಸೆಟ್ಟಿ ಧನಮಿತ್ರನಾದೊಂ. ಅದು ಕಾರಣದಿಂ ಇವರೊಳತಿ

ಪ್ರೀತಿಯಾದುದು. ಈ ಭವಕ್ಕೆಂಟನೆಯ ಭವದೊಳ್ ನೀನಾದಿ ತೀರ್ಥಂಕರ ನಾದಂದು ಶ್ರೀಮತಿ ದಾನತೀರ್ಥಪ್ರವರ್ತಕಂ ಶ್ರೇಯಾಂಸನಕ್ಕುಂ ಈ ನಿನ್ನ ಮಂತ್ರಿ ಮತಿವರನಂದು ನಿನಗೆ ಭರತೇಶ್ವರನೆಂಬೊನಾತ್ಮಜನಕ್ಕುಂ ಈ ನಿನ್ನ ಸೇನಾನಾಯಕ ನಕಂಪನುಂ ಬಾಹುಬಲಿಯೆಂಬೊಂ ತನಯನಕ್ಕುಂ ಈ ಪುರೋಹಿತನಾನಂದಂ ವೃಷಭಸೇನನೆಂಬೊಂ ತನೂಜನಕ್ಕುಂ ಈ ಸೆಟ್ಟಿ ಧನಮಿತ್ರಂ ಅನಂತವೀರ್ಯ ನೆಂಬೊಂ ಸುತನಕ್ಕು ಎಂಬುದುಮರಸು ಸಂತೋಷಂಬಟ್ಟು ಮತ್ತಮಿಂತೆಂದಂ :

ನಿಮ್ಮೆಮ್ಮ ಮುಂದಿರ್ದ ಪುಲಿ ಪಂದಿ ಕೋಡಗ ಮುಂಗುರಿಯೆಂಬ ನಾಲ್ವರ ಭವಾವಳಿಯಂ ಬೆಸಸಿಮೆಂಬುದುಮುಂಬರಚಾರಣರಿಂತೆಂದರ್ : ಈ ಶಾರ್ದೂಲಂ ಪೂರ್ವ ಜನ್ಮದೊಳೀ ವಿಷಯದ ಹಸ್ತಿನಪುರದ ಪರದಂ ಸಾಗರದತ್ತಂಗಂ ಆತನ ಪಣಿತಿ ಧನದತ್ತೆಗಮುಗ್ರಸೇನನೆಂಬ ಮಗನ ಪ್ರತ್ಯಾಖ್ಯಾನ ಕ್ರೋಧದಿಂ ತಿರ್ಯ ಗಾಯುಷ್ಯಮಂ ಕಟ್ಟಿಕೊಂಡು ಕೊಟ್ಟಾರದ ಕರಣಂಗಳಂ ಬಂಚಿಸಿ ಕಳ್ದು ದ್ರವ್ಯಮಂ ಸೂಳೆಗೆ ಕೊಟ್ಟೊಡರಸಂ ಪಿಡಿತರಿಸಿ ಪತಿಯಿಸೆ ಸತ್ತು ಪುಲಿಯಾದೊಂ. ಪೋದ ಭವದೊಳೀ ವರಾಹನುಮೀ ವಿಷಯದ ವಿಜಯಪುರದೊಳ್ ಆನಂದನೆಂಬ ನೃಪತಿಗಂ ವಸಂತಸೇನೆಗಂ ಹರಿವಾಹನನೆಂಬ ಮಗನಪ್ರತ್ಯಾಖ್ಯಾನಮಾನದೊಳ್ ತಂದೆಗವಿ ನೀತನಾಗಿ ಪೇಟ್ಟುದುಂ ಗೆಯ್ಯದೆ ಶಿಲೆಯೊಳ್ ತಲೆಯ ತಾಟಿಸಿ ಸತ್ತು ವರಾಹ ನಾದೊ. ಈ ವಾನರನುಂ ಮುನ್ನಿನ ಭವದೊಳ್ ಧ್ಯಾನಪುರದ ಪರದಂ ಕುಬೇರ ದತ್ತಂಗಂ ವಸುದತ್ತೆಗಂ ಸಾಗರದತ್ತನೆಂಬೊಂ ಮಗನಪ್ರತ್ಯಾಖ್ಯಾನಮಾಯೆಯಿಂ ತನ್ನ ತಂಗೆಯೊಡವೆಯಂ ಬಂಚಿಸಿಕೊಂಡು ಕಳೆದು ಸತ್ತೀ ವಾನರನಾದಂ. ಈ ನಕುಳನುಂ ಪೂರ್ವ ಜನ್ಮದೊಳ್ ಸುಪ್ರತಿಷ್ಠಾಪುರದೊಳಪ್ರತ್ಯಾಖ್ಯಾನ ಲೋಭಾಭಿ ಭೂತಂ ಲೋಲುಪನೆಂಬೊಂ ಕಲ್ಲುರಿಗನಾಗಿ ಪೊಟಲ ಜಯಸೇನನೆಂಬರಸನ ಬಸದಿಗೆ ಬಿಟ್ಟಿಟ್ಟಿಗೆಗಳಂ ಪೂರಿಗೆಯಂ ಕೊಟ್ಟು ಕೊಂಡೊರಸಿ ನೋಟ್ಪುದುಮೊಂದು ಪೊನ್ನಿಟ್ಟಿಗೆಯಾದೊಡೆ ಬಿಟ್ಟಿಯವರ ಕಯ್ಯಿಂದಿಟ್ಟಿಗೆಗಳಂ ಕೊಂಡೊಟ್ಟಿ ಮತ್ತೊಂದು ದಿವಸಂ ತನ್ನ ಮಗಳ ಕೆಲದೂರ್ಗೆ ಪೋಗುತ್ತುಂ ತನ್ನ ಮಗಂಗಿಟ್ಟಿಗೆಗೊಳ್ಳ ಬೆಸಸಂ ಪೇಟ್ಟೊಡವನೊಂದುಮಂ ಕೊಳದಿರೆ ಮುಳಿದವನ ತಲೆಯನೊಡೆಯೆ ಬಡಿದೆನ್ನ ಪಡೆವುಗಿಡಿಸಿಕೊಂಡು ಪೋದುದೆಂದು ತನ ಕಾಲ್ಗಳಂ ಪಿಡಿದುಡಿವುದುಮದನರಸ ನಱಿದು ದಂಡಿಸೆ ಸತ್ತು ಬಂದಿಲ್ಲಿ ನಕುಳನಾದೊಂ. ಇಂತೀ ಶಾರ್ದೂಲ ವರಾಹ ಗೋಲಾಂಗೂಲ ನಕುಳಂಗಳ್ ಜಾತಿಸ್ಮರಂಗಳಾಗಿ ನಿನ್ನ ದಾನಾನುಮೋದದಿನನುತ್ತ ರೆಗೆ ಬದ್ಧಾಯುಷ್ಯಂಗಳಾದುವು. ಅಂತು ದಿವ್ಯ ಮಾನುಷ ಗೋಚರ ಸುಖಂಗಳಂ ನಿನ್ನೊಡನುಣುತುಂ ನೀಂ ಭರತದೊಳ್ ಆದಿ ತೀರ್ಥಂಕರನಾದಂದು ಅನುಕ್ರಮ ದೊಳ್ ನಿನಗನಂತವೀರ್ಯಾಚ್ಯುತವೀರ ಸುವೀರರೆಂಬ ಮಕ್ಕಳಪ್ಪರೆಂದಿಂತು ಚಾರಣ ಮುನೀಂದ್ರರ್ ಬೆಸಸಿ ಪೋದರಾಗಳ್ ವಜ್ರಜಂಘನುಂ ಶ್ರೀಮತಿಯು ಮಂದೆಲ್ಲರುಮವರ ಗುಣಮನೆ ಮತಿವರಾದಿಗಳೊಳ್ ನುಡಿಯುತ್ತಮಿರ್ದು ಮಱು

ದಿವಸಂ ಪಯಣಂಬೋಗಿ ಪುಂಡರೀಕಿಣಿಯನೆಯ್ದಿ ಲಕ್ಷ್ಮೀಮತಿಯನನುಂದರಿಯುಮಂ ಸಂತೈಸಿ ಪುಂಡರೀಕಂಗೆ ನಿಷ್ಕಂಟಕಂ ಮಾಡಿಕೊಟ್ಟು ಉತ್ಪಲಖೇಟಕ್ಕೆ ಮಗುಳ್ದುವಂದು ಪಲಕಾಲಂ ರಾಜ್ಯಂಗೆಯ್ಯುತ್ತುಮಿರ್ದೊಂದು ದಿವಸಂ ಶಯ್ಯಾಗೃಹದೊಳ್ ನಿದ್ರಾವಶಗತರಾದರ್.

ಅನ್ನೆಗಮಲ್ಲಿ ಮುಚ್ಚಿರ್ದ ಗವಾಕ್ಷಂಗಳಂ ತೆಱೆಯಲ್ ಮಱೆದು ಧೂಪ ಗುಂಡಿಗೆಯೊಳಳವಱಿಯದೆ ಸೆಜ್ಜೆವಳನಿಕ್ಕಿವ ಕೇಶ ಸಂಸ್ಕಾರದ ಧೂಪದ ಪೊಗೆ ಪುದಿದುಕೊಳೆ ವಜ್ರಜಂಘನುಂ ಶ್ರೀಮತಿಯುಂ ಪೊಗೆ ಸುತ್ತಿ ಸತ್ತುದಂ ನೇಸಱ್ ಮೂಡಿದಾಗಳಱಿದು ಮತಿವರಾದಿಗಳವರುಮನಲ್ಲಿ ಸತ್ತ ತಿರ್ಯಗ್ಜಾತಿಗಳುಮಂ ಸಂಸ್ಕರಿಸಿ ಶ್ರೀಮತಿಯ ಮಗಂ ವಜ್ರಬಾಹುಕುಮಾರಂಗೆ ಪಟ್ಟಂಗಟ್ಟಿ ದೃಢಧರ್ಮ ಗುರುಗಳ ಪಕ್ಕದೆ ತಪಂಬಟ್ಟು ಜೀವಿತಾಂತ್ಯದೊಳ್ ಅಧೋಗ್ರೈವೇಯಕದೊಳ್ ಹೆಟ್ಟಿಮಹೆಟ್ಟಿಮದೊಳ್ ಅಹಮಿಂದ್ರರಾದರ್.

ಅತ್ತಲ್ ತಿರುಮಲರಾಜಂ—"ರಾಜನೃಪಂ ಮೀಱಿ ಪೋದುದಂ ಕೇಳ್ದು ಕಜ್ಜಂ ಕೈಗಣ್ಮಿದುದು. ಬಲ್ಲಿದನೊಳ್ಪೇರಂ ಬಳೆದುದು. ಇನ್ನು ಪೇಕ್ಷಿಸಲ್ತಕ್ಕುದಲ್ತು. ಎಂತಾನುಂ ಸಾಸಂಗೈದರ್ಥಪ್ರಾಣಂಗಳನಾದೊಡಂ ವೆಚ್ಚಿಸಿಯುವಂಗೆ ಪರಿವಂ ಕಾಣಿಪೆಂ." ಎಂದು ನೆಱೆದ ನಿಖಿಲಪ್ರಭುಗಳಂ ಕರೆಯಿಸಿ ಮೈಸೂರ್ಗೆ ಮುತ್ತಿಗೆ ಯಿಡಲ್ವೋಪಮೆಂಬುದುಂ; ಅವರ್ ವಿನಯಂಗೂಡಿ ಕೈಮುಗಿದು—"ದೇವರಾಣತಿ ಯನಾಂ ಶಿರದೊಳಾಂತೆಸಗುವರಲ್ಲದೆ ಪಡಿಸುಡಿವೇೞಲ್ತಕ್ಕರಲ್ತು. ಮುನ್ನೊರ್ಮೆ ಪಿರಿಯರಸಂ ರಾಮರಾಜನೆಮ್ಮೆಲ್ಲರೊಡಗೊಂಡಾಮೈಸೂರಂ ಮುತ್ತಿ ಮೂಱು ತಿಂಗಳಿರ್ದಂದಂದಿಂಗಾಮೈಸೂರ ಚಾಮರಾಜನೆಸಗುವ ಮಱೆವುಯಿಲುಪಟಳದಿಂ ಪಾಳೆಯಕ್ಕೆ ಬರ್ಪ ಸಕಲವಸ್ತುಗಳುಮಿಲ್ಲದೊಂದೆರಟ್ಪಗಲುಪವಾಸಮಿರ್ದು ಪಿಂದೆ ಗಿದು ಪೋಪುಪರ್ಕಂ, ದಾರಿಯಿಲ್ಲದೊಂದು ದಿನಂ ನಟ್ಟಿರುಳ್ಕರ್ಬಿನೊಳೋಡಿ ಬರ್ಪಾಗಳೂರವರ್ಗೆ ಜೇಹುಸಂದು ದಾರಿಯನಡ್ಡಗಟ್ಟಿ ಕೆಲವಾನೆಕುದುರೆಗಳ ನೀೞ್ದು ಕೆಲಕೆಲರ ಕೈದುಗಳಂ ಸೆಳೆದಿದಿರಾದರ ಮೂಗಂ ಕೊಱೆದು ಕಳುಪಿದರ್. ಅದುಮಲ್ಲದೆ ಮತ್ತವರ ಗಾವಳಿಯಿಂ ಪಟ್ಟಣದೊಳಂ ಪದುಳಮಿಲ್ಲದೆ ಬನ್ನಂಬಟ್ಟು ಮಗುೞೆ ಮೈಸೂರವರೊಳ್ನೇಹಂಬೆರಸುವುದರ್ಕೆ ಕಾಳ್ವೆಯ ಕೊತ್ತಾಗಾಲಮ ನಿತ್ತರ್. ಅದಱಿಂದೀಗಳುಮಾ ಮೈಸೂರಂ ಮುತ್ತುವುದು ಮೋಸಂ. ಮೊದಲ್ಕೆ ಸಱೆಯಂ ಮುತ್ತಿ ನೋೞ್ಪಂ." ಎಂಬುದುಮದರ್ಕೊಡಂಬಟ್ಟು ಆಗಳೆ ನಿಸ್ಸಾಳ ಗಳಂ ಪೊಡೆಯುಸಿ ಸಂದಣಿಸಿ ಮುಂದೆ ಪರಿವ ತುರಗಂಗಳ ಪದಧೂಳಿ ಬಾಂಬೊೞಲ್ಗಂ ಶಂಖಭೇರೀಪಣವಾನಕ ಗೋಮುಖಾದಿ ವಾದ್ಯ ಕಳಕಳಮೆಣ್ದೆಸೆವಳರ ಪೊೞಲ್ಗಂ ನಡೆಯೆ ಕೆಸಱೆಗೆ ನಡೆದು ಬಳಸಿ ಪಾಳೆಯವಿೞಿದು ತಳಿಮೇರುವೆಗಳನೊಡರ್ಚು ತಿರ್ಪಿನಂ;

ಆವೂರೊಳಿರ್ಪ ಬೆಟ್ಟದ ಚಾಮರಾಜ ಚೆನ್ನರಾಜರ್ ಕೋಂಟೆ ಕಿಱಿದು ಮಗಱಾಳ್ವೇರಿಗಳಸಿದುವಾಗಿರ್ದೊಡಮಾೞಿಮಾದ ತಮ್ಮಳವನೆ ಪಡಿಯಗೞ ಮುಮುದ್ದವರಿದ ಬೀರಮನೆ ವಡಿಗೋಂಟೆಯುಮಂ ಬಿತ್ತರಂಬಡೆದ ಬಿನ್ನಣಮನೆ ಪಡಿಯಾಳ್ವೇರಿಯುಮನೆೞ್ತರಂಬೆತ್ತ ಶಕ್ತಿಯನೆ ಕೊತ್ತಳಮುಮಂ ಸಾಸಮನೆ ಶತಘ್ನಿಗಳುಮಂ ಮೊನೆಗಾಱತನಮನೆ ಮುಗಿಲಟ್ಟಳೆಗಳುಮಂ ಗೆಯ್ದು ಕಾದುತ್ತೆ ಕೞ್ತಲೆಯೊಳ್ಪೊಱಮಟ್ಟು ಪಾಳೆಯಮಂ ದೞಿದುೞಿವಾಯ್ದು ಪೊಯ್ದು ಆನೆ ಕುದುರೆಗಳನುಯ್ದು ಕೋಂಟೆಯನೊಳಪುಗಲೊಡಂ;

ಮಱುವಗಲ್ ಪೊೞ್ತಱೆಯುವರನಿಬರುಂ ಕಳ್ಗೊಲೆಗೊಳಲೆಂದು ಕವಿದೊತ್ತ ರಿಸಿ ಮೇಲ್ವಾಯ್ದು ಗುಂಡುವಱೆಗೆ ಪಲಗೆಯಂ ಮಱೆಗೊಂಡು ಕೋಂಟೆಗೇಣಿಗಳಂ ಸಾರ್ಚೆ ಸಗ್ಗಮನೇಱುವಲ್ಪಪುಣ್ಯರಂತೇಱುತಿರ್ಪಿನಂ; ಊರವರ್ ಕವೆಗೋಲ್ಗಳಿಂ

ನೂಂಕಿಯುಂ ಕೈಯಿಟ್ಟಿಗಳಿಂದಿಟ್ಟುಂ ಕಾಯ್ದೆಣ್ಣೆಗಳಂ ಸೂಸಿಯುಂ ಪುರಿವಳಲಂ ಸುರಿದುಂ ಮರ್ದಿನುರಿಯಿಂ ಚುರ್ಚಿಯುಂ ಕವಣೆಗಲ್ಗಳಂ ಬೀಱಿಯುಂ ಕಣೆಗಳಿಂ ದೆಚ್ಚುಂ ಮತ್ತಂ ಮೀಱಿಯೇಱುವರ್ಪರಂ ಕತ್ತಿಗಳಿಂ ಕಡಿಕಡಿದುಂ ಕೆಡಪುತಿರ್ದೊಡಂ ಮಾಣದೆ ಮುಱುಕೊಳಿಸಿ ದೀವಿಗೆಗುಡಿಗೆಱಗುವ ಪತಂಗದ ಪುೞುಗಳಂತೆ ಬೀೞ್ವರಂ ಕಂಡು ಪೆಱಸಾರದೆ ಪಡಲ್ವಟ್ಟಿಟ್ಟಿಗಳನೆ ಮೆಟ್ಟುಗೆಯ್ದೇಱುತ್ತೆ ಮಿತಿಮೀಱುತ್ತಿರ್ದಪರೆಂಬ ವೃತ್ತಾಂತಮಂ ದೂತಮುಖದಿಂ ಕೇಳ್ದು ತಮ್ಮ ಮೂಲಬಲಮನೊಡಗೊಂಡು ರಾಜನೃಪನುಂ ದೇವರಾಜನುಂ ಕಿರ್ಚುಂ ಗಾಳಿಯುಮೊಂದಾಗಿಯೊಣಗಿದ ಪೞುವಂ ಪುಗುವಂತೆ ಅವರ ತೆಂಕಣ ಪಡುವಣ ಪಾಳೆಯಮಂ ಪೊಕ್ಕು ಬೀದಿವರಿದಿದಿರ್ಚಿದರಂ ಪೊಯ್ದು ಕಾಲ್ಗೆಱಗಿದರುಮಂ ಕಾಯವೇೞ್ವಿದೆಂದರುಮಂ ಪುಲ್ಗರ್ಚಿದರುಮಂ ಪುತ್ತನೇಱಿದರುಮಂ ನೀರ್ವೊಕ್ಕರುಮಂ ನಿನ್ನವರೆಂದರುಮಂ ಮರನನಡರ್ದರುಮಂ ಮಱೆವಿೞ್ದರುಮಂ ತಲೆಗಾದು ಮನ್ನಿಸಿ ಮಿಕ್ಕರನೊಕ್ಕಲಿಕ್ಕಿಯವರ ಸರ್ವಸ್ವಮಂ ಸೂಱೆಗೊಂಡು ಬರ್ಪಿನಂ ;

ಚೆಟ್ಟಿದಚಾಮರಾಜಚೆನ್ನರಾಜರುಂ ಲಗ್ಗೆಯೇಱಿದರನನಿಬರುಮಂ ಸಗ್ಗಕ್ಕೇಱಿಸಿ ಕಿಱಿದುಂ ದೞಮನೂರೊಳಿಟ್ಟು ಮಿಕ್ಕ ಬಲದೊಡನೆ ಪೊಱಮಟ್ಟು ತಂತಮ್ಮ ಪಾಳೆಯದೊಳ್ ದೞದುೞುವಾಯ್ದುದಂ ಕೇಳ್ದು ಬಿಟ್ಟೋಡುವ ತೆಂಕಣಪಡುವಣವರಂ ಕಳೆದು ಮೂಡಣ್ಗೆ ನಡೆದು ತಱುಬಿ ತಱಿದಿಱಿದು ತಲ್ಲಳಂಗೊಳಿಸಿ ದಾಯಗೆಡಿಸಿ ದೆಯೆಗೆಯ್ದು ಮರಲ್ದು ಬಡಗಣ್ಗೆ ಬರುತ್ತಣ್ಣನಂ ಕಂಡು ಕಾಲ್ಗೆಱಗಿ ಬೇಗದೊಳ್ನಾಲ್ವರೊಡವುಟ್ಟಿದರುಂ ಪಟ್ಟಣಕ್ಕಾಗಿ ಬಿಟ್ಟೋಡುವ ತಿರುಮಲರಾಜನಂ ಬೆನ್ನಟ್ಟಿ ಮುಟ್ಟುವರೆ; ಅವನುಮೞಿವಿಂಗಳ್ಕಿ ಬೆಳ್ಗೊಡೆಯುಂ ಬಿಟ್ಟು ಸೀಗುರಿಗಳಂ ನೀಗಿ ಚವರಮಂ ತೆವರ್ದು ಪೞಯಿಗೆಯುಂ ಪಱಿದು ವಾದ್ಯಂಗಳನುದ್ವಾಪನಂಗೆಯ್ದು ವಾರುವಮನಿೞಿದು ತೊಡವುಗಳಂ ತೊಱೆದು ಬಳ್ಳುಡೆಯನುೞಿದು ವೇಷಮಂ ಮಾಂಜಿಯಂಜಿ ಪೋಪುದುಂ ; ಅವನರಸುಗುಱುಪುಗಳೆಲ್ಲಮಂ ಕೊಂಡು ಗಂಡುಮೀಱಿ ಮೈಸೂರಂ ಸಾರ್ದರ್.

ಅತ್ತಲಾ ತಿರುಮಲರಾಜನೊರ್ವನೇ ಪಟ್ಟಣಮಂ ಪೊರ್ದಿ ಒಂದೆರೞ್ದಿನದೊಳ್ ಬಂದು ಸೇಱಿಯುೞಿದುೞಿದರಂ ಕರೆಯಿಸಿ—" ಕೊಳಗುಳದೊಳೆಮ್ಮ ದೞದೊಳೞಿದರಾರ್ ? ಏಱುವಡೆದರಾರ್? ಸೆಱೆಸಿಲ್ಕಿದರಾರ್?" ಎಂದು ಬೆಸಗೊಂಬುದುಂ ಅವರ್ ಬಿನ್ನವಿಸಿದರ್ :

"ಜೀಯ ಬಿನ್ನಪಂ :—ಈವೊಳನಾಡ ಪ್ರಭುಗಳನಿಬರುಂ ಪಲವುಂ ಸೂೞೊಳ್ ಮೈಸೂರವರಿಂ ನೊಂದವರೆಸಗುವ ಪುಯಿಲ ಚಾತುರ್ಯಮನವರ್ಬರ್ಪ ಬಟ್ಟೆಗಳಂ ತಿಳಿದಿರ್ಪುದಱಿಂದವರ ಮೂವಂಕದ ಕೊಂಬುಗಾಳೆಯ ದನಿಗೇಳ್ವುದುಂ ಸಿಂಗದ ರವಂಗೇಳ್ದಾನೆವಿಂಡಿನಂತೆಯುಂ ತಳವಱರದಿಗೋರ್ಲುಲಿಗೇಳ್ದ ಮಱೆಗಳ್ಳರಂತೆಯುಂ ಮಾಂತ್ರಿಕರ ಮಂತ್ರಾಕ್ಷರಂಗಳಂ ಕೇಳ್ದ ಪಂದೆಮರುಳ್ಗಳಂತೆಯುಂ

ಪಾಂಚಜನ್ಯಝುಂಕಾರಂಗಳಂ ಕೇಳ್ದ ರಾತ್ರಿಂಚರರಂತೆಯುಂ ನಾರಾಯಣನ ನಾಮಮಂ ಕೇಳ್ದ ಪಾಪಂಗಳಂತೆಯುಂ ಬೆರ್ಚಿ ಬಿಗುರ್ತು ಬಿಂಕಂಗುಂದಿ ಬೇವಸಂಗೊಂಡು ಬೆದಱಿ ಬೀದಿವರಿದು ಸರಿಯುತ್ತೆ ಇರ್ತರದೊಳ್ನಿಂದು ನಿಂದಿಸಿ ನೀೞ್ದಿಱುವರಂ ನಿಟ್ಟೆಸದೆ ನಿಟ್ಟೋಟದೊಳ್ನಿಂದಲ್ಲಿ ನಿಲ್ಲದೆ ನಿಜನಿವಾಸಮಂ ಸಾರ್ದು ಜಸಮಂ ಜಾಱಿಸಿಯುಸುವನಾದರಿಸಿ ಪೊಸತೊಂದು ಬಸಿಱೊಳ್ಬಂದಂತೆ ಸಂತಸದೊಳ್ಜವೆಗೊಂಕದಿರ್ದಪರ್. ಮೊರಸುಮೋಹರಂ ಮೊನೆಗಾಱತನದ ಮೋಡಿಯೊಳ್ ಮಂತಱಿಯದಿರ್ಸಿನಮವರ್ ಮೋಸಂಗೊಂಡು ಮುತ್ತಿ ಮೊಗಗೆಡಿಸಿ ನೋದಿ ಮೂದಲಿಸಿ ಮೂಗಂ ಕೊಯ್ದು ಮೊಱೆಯಿಡಿಸಿಯಱಿಯಟ್ಟಿ ಕೆಟ್ಟು ಮುಱಿದೋಡಿದರ್. ಮಲೆನಾಡವರ್ ಮಲೆತು ನಿಲ್ಪಿನಮವರ್ ವೇಢೈಸಿ ಬಿಗಿದತ್ತತ್ತಲಿನಿಸುಂ ಮಿಸುಕಲೀಯದೆ ಕೈಯ ಕೈದುಗಳನೀೞ್ದಾನೆಕುದುರೆಗಳಂ ಬಸಂಗೆಯ್ದು ಅವರೊಳ್ಕಟ್ಟರಸುಗಳಂ ಕೈಸೆಱೆಗೊಳಲುೞಿದ ಕಿಱುದೊರೆಗಳ್ ಕಪ್ಪಿನೊಳ್ಬಿೞ್ದ ಸೇರಾನೆಯುಂ ಬೞಿಸಂದ ಮಱಿಗಳಂತೆ ಚೀಱುತ್ತೆ ಕಟ್ಟುಱದಿಂ ಮಲೆಯಂ ಸಾರ್ದಿತ್ತಣ್ಗೆ ಮೋಸದೊಳಾದೊಡಮಿನ್ನೊರ್ಮೆಯುಂ ಬರಲಣ್ಮೆವೆಂದು ಬಾಸೆಗೆಯ್ದೋಡಿದರ್. ಬೇಡವಡೆ ಮುನ್ನಡವಿಯೊಳ್ಗಿಡು ಮರಂಗಳ ಮಱಿಯೊಳ್ ಪೊಂಚಿ ಬಟ್ಟೆಗರಂ ಕೋವಿಯೊಳಿಟ್ಟು ಕಣೆಯಿಂದೆಚ್ಚು ಕೆಡಪಿ ಬಟ್ಟೆಗಳಂ ಸುಲಿದ ಪಾಪದಿಂ ಕೆಸಱಿಯ ಕೆಱೆಯ ಕೋಡಿವಳ್ಳದೊಳೋಡಿವರುತ್ತೆಡಪಿ ಕಾಲುಲುಂಕಿಯುಂ ಮೊೞಕಾಲ್ಮುಱಿದುಂ ತೊಡೆಯುಡಿದುಂ ನಡು ನೆರ್ಗಿಯುಮೆರ್ದೆ ಬಿಱಿದುಂ ತೋಳ್ತೊಲಗಿಯುಂ ಕೊರಲ್ ಕುರ್ಗಿಯುಂ ತಲೆಯೊಡೆದುಂ ಪಡಲಿಟ್ಟು ಪಾಸಿದಂತಾಗಿ ಪಳ್ಳದಿಂಟೆಗಳ್ ಸಮತಳಮಾದೊಡಂ ಪಿಂದೆ ಬರ್ಪರುಮಾನೆ ಕುದುರೆಗಳ್ ತುಳಿದುದಱಿಂ ಮುೞ್ಗಿಱಿಯಾದರ ತಲೆಮಿದುಳ ಬಸಿರ್ಗರುಳ್ಗಿಸಱೊಳ್ಸಿಲ್ಕಿ ಮೊನೆಯೆಲ್ಬುಮುಳ್ಗಳಡಿದಳದೊಳ್ನಾಂಟೆ ತಟ್ಟುರ್ಚಿ ತಡಬಡಿಸುತಿರೆ ಪಿಡಿಪಿಡಿದು ತುಟಿವೆರಸು ಮೂಗಂ ಕೊಱೆದು ಪಲ್ಗಿಱಿಸಿ ಕಳುಪೆ ಮೂಗೞಿದು ಸಿರುೞಿದುದರ್ಕೆ ಪೆರ್ಕಳಿಸಿ ತಲೆಗೆ ವಂದುದೆವೆಯೊಳ್ಪೋದಂತೆ ಸಂತಸದಿಂ ಚಿಂತನಕಲ್ಮೊಂತಾದ ತಂತಮ್ಮ ನೆಲನಂ ಸಾರ್ದರ್, ಮತ್ತಂ ರಾವುತಪಾಯಕರ್ ಪೌಜೊಡೆಯದೆ ಪೊಱಗೆ ನಿಂದು ಪುಯಿಲೊಳ್ಪೊಲಂಬುಗೆಟ್ಟುದಂ ನಿಟ್ಟಿಸಿಯೋಡಿ ಪೋದರ ಪೆಂಡಿರೋಲೆಯುೞಿದುಪೆಂಬ ನಾಣ್ನುಡಿಗೀಡಾಗಿ ವಾರುವಂಗಳಂ ಪರಿಸುವದಱಿಂದೆಟ್ಟು ದೂಳಂ ಚಮ್ಮಟಿಗೆಯ ಪೊಯ್ಲಿಂದೊಡೆದ ಕುದುರೆಯ ತೊಡೆಯ ನೆತ್ತರ್ಪೊನಲಿಂದಡಂಗಿಸುತ್ತೆ ಬೆಂಬತ್ತಿ ಬರ್ಪರಂ ಮುಱಮುಱಿದು ನೋಡುತ್ತೆ ಮತ್ತಡಿಗಡಿಗೆ ಮಡದಿಂ ಪಕ್ಕಮನೊತ್ತುತ್ತೆ ಕತ್ತಿಯ ಪರಜಿನಿಂ ನೆತ್ತಿಯುಂ ತಿವಿಯುತ್ತೆ ಮುಂದಿರ್ಪ ಪಳ್ಳಕೊಳ್ಳಂಗಳಂ ತೆವರ್ದಿಂಟೆಗಳಂ ಕಲ್ಮುಳ್ಗಳಂ ಬೇಲಿಬೆಳ್ಳಾರಂಗಳುಮನಱಿಯದಱಿಯಟ್ಟುತ್ತೆ ಪೊಲಗೆಟ್ಟು ಬಗೆಯೊಳ್—‘ನೆಲಂ ಬಾಯ್ಬಿಱಿಯದೆ? ಅದೃಶ್ಯಾಂಜನಮನುಗೂಡದೆ? ಎಱಂಕೆಗಳ್ಮೊಳೆಯವೆ? ಎಮ್ಮೂರಿದಿರ್ವಾರದೆ?

ದೇವರುಂ ನೆರವಾಱರೆ ? ಇವರ್ಗಾದೊಡಂ ದಯೆದೋಱದೆ ?’ ಎಂದು ಬಗೆಯುತ್ತೆ ತಂದೆಯಾದೊಡ ಕಂದನಾದೊಡವೊಡವುಟ್ಟಿದನಾದೊಡವೊಡನಾಡಿಯಾದೊಡಂ ಮತ್ತಂ ತನ್ನೊಡೆಯನಾದೊಡಂ ಬಿೞ್ದವನನೆತ್ತದೆ ಪಿಂತಿಱುಗಿ ನೋಡದೋಡಿಸೆ ಬಸವೞಿದು ಮೞ್ಗಿ ಮೊೞಕಾಲೂಱಿ ಮುಂಗೆಡುವ ವಾರುವಂಗಳ ವಾಗೆಯಂ ಪಿಡಿದು ಜಡಿದೊತ್ತೆ ಇತ್ತಣಿಂ ಬಂದೆವಿತ್ತಣ್ಗೆ ಪೋಪೆವಿಲ್ಲಿಗಿದು ದಾರಿಯೆಂಬಾರೈಕೆ ದೋಱದೆ ಕಸ್ನರೆಯುೞಿವನ್ನಮುಸಿರ್ಕಳಿವನ್ನಂ ದೆಸೆಗೆಟ್ಟೋಡಿದರ್. ಮೂಲಬಲಂ ಮುಱಿದ [illegible]ಂ ದೇವರ ಬಗೆಯೊಳ್ತಿಳಿದಿರ್ಪುದೈಸೆ. ಆಂ ಬಿನ್ನವಿಪುದೇನಿರ್ಕುಂ ?’ ಎನೆ ; ಕೇಳ್ದು ಮನದೊಳ್—“ಅಕಟಕಟಾ ! ಈ ಕೂಟದ ದೞಂಗಳೆನಿತಾನು ಮಿರ್ದೊಡಂ ಬೞಿಸಲ್ಲದು. ಈ ದೞವಾಯ್ ಚನ್ನಮನಾಯಕನುಂ ಈ ಪ್ರಧಾನಿ ರಾಮಾನುಜಯ್ಯನುಂ ಎನ್ನೆಡಬಲದೊಳಿರ್ದುಮೆನ್ನ ಮೇಲ್ವಿೞ್ದು ಪುಯಿಲೊಱೆಯಂ ಪೋಱುವರಂತೆ ಮುಂತಣ್ಗೆ ನಡೆದು ಮೊಗವಱೆಯಪ್ಪುದುಮೆನ್ನನೊಪ್ಪಿಸಿ ತಪ್ಪ ದಾರಿವಿಡಿದೊಪ್ಪದಿಂ ನಡೆದರ್. ಆನಿನ್ನೆವರಮಿವರಂ ಮನ್ನಣೆಯಿಂದೋವಿದುದು ಕಾಡೊಳೞ್ತಂತೆಯುಂ ಕಲ್ಲಱೆಯೊಳ್ಕಡಲೆವಿತ್ತಿದಂತೆಯುಂ ಅಂಧನೊಳಾಡಿದಂತೆಯುಂ ಬಧಿರನೊಳ್ಪಾಡಿದಂತೆಯುಂ ಮೞಲಂ ಪಿೞಿದಂತೆಯುಂ ಉಯ್ಯಾನಗಿದಂತೆಯುಂ ಪೞತ್ತಿಯಂ ತುತ್ತಿದಂತೆಯುಂ ಕೊಡನಂ ಕೌಚಿ ನೀರನೆಱೆದಂತೆಯುಂ ಆದುದು. ಇವರಂ ನಚ್ಚಿ ಮೈಸೂರವರೊಳದಿರ್ಚಿದೆಂ. ಅಱಿತಱಿತುಮಱಿಯದನಾದೆಂ. ಕೊಡೆಯುಂ ಮಱೆಗೊಂಡು ಸಿಡಿಲ್ಗಿದಿರಾದೆಂ. ಜಾಯಿಲ ವಾಲಮಂ ಪಿಡಿದು ಜಾಹ್ನವಿಯಂ ದಾಂಟಲೆಳಸಿದೆಂ. ಪಳವೊಱದೆಱೆಂಕೆಯಿಂ ಪಾೞಿಲ್ಬಯಸಿದೆಂ. ಕಳಸದ ನೀರಿಂ ಕಾೞ್ಕಿರ್ಚನಡಂಗಿಸಲೊಡರ್ಚಿದೆಂ. ಮುಚ್ಚುವಱೆಯೇಂ ? ಮೋಸವೋದೆಂ. ಮುಂತೆನಗೆ ಗತಿಯಾವುದು. ಪಸಿದ ಪಾವನೇಱುಗಂಡೆಕ್ಕಲನಂ ಸೊರ್ಕಿದಾನೆಯನೀಂದ ಪುಲಿಯಂ ಕಣ್ಮುಱೆಗಳೆದ ಸಾಳ್ವನಂ ಸಿಟ್ಟೇೞ್ದ ಸಿಂಗಮಂ ಕೆಣಕಿ ಕೆಟ್ಟೆಂ. ಇನ್ನೀಪಟ್ಟಣದಾಸೆಯುಂ ಬಿಟ್ಟು ಪರಿವುದೇ ಪದುಳಂ. ಅದಱಿಂ ಮಱೆವುಯಿಲನೆಸಗಿ ಮುೞ್ಗಿಸದ ಮುನ್ನಮೆ ಬಟ್ಟೆಗಳಂ ಕಟ್ಟಿ ಬಾಧಿಸದ ಮುನ್ನಮೆ ದೞಿದುೞಿವಾಯ್ದು ದಾಯಂಗೆಡಿಸಿ ಕಳ್ಗೊಲೆವಿೞ್ದು ಕೈಸೆಱೆಗೊಳ್ಳದ ಮುನ್ನಮೆ ಮೋಸಂಗೊಂಡು ಮೂಗನರಿಯದ ಮುನ್ನಮೆ ಸಾಗುವೆಂ.” ಎಂದು ಪಯಣ ಸನ್ನದಂ ಗೆಯ್ಯುತ್ತಿರ್ದಂ.

ಅತ್ತಲಾಪುಯಿಲೊಳ್ ನೊಂದು ಪೋೞಲ್ಗಳಂ ಪೊರ್ದಿದ ತಳಕಾಡೆಳವಂದೂರ ಮಚುವಾಡಿ ತಗಡೂರ್ಮೊದಲಾದ ಮೈಸೂರ ನೆರೆದೊರೆಗಳ್-“ ಎಮಗಿನ್ನುೞಿವಿಲ್ಲ ಎಂತಾದೊಡಂ ತೆಲುಂಗುರಾಯಂಗೆ ಧೈರ್ಯಮಂ ನೆರಪಿಯುವನ ಮಱೆಯೊಳುೞಿದ ಕಾಲಮಂ ಕಳೆವೆವು, ಅವನೞಿಪಿನೊಳೞಿವೆವು.” ಎಂದನಿಬರುಮೊಂದಾಗಿ ನಿಯೋಗಿಯನೊರ್ವನಂ ಕಳುಪಲೊಡಮವಂ ರಾಯನಂ ಸಂಧಿಸಿ—“ಅಂದು ಮೊರಸ ಬೇಡಮಲೆನಾಡವರ್ ಬಂದು ಬೆರಸಿರ್ದುದಱಿಂದವನೊಡನೆಲ್ಲರುಂ ಪಂದೆಗಳಾಗಿ

ಪುಯಿಲೊಳ್ಪೊಲಂಬುಗೆಟ್ಟುದು. ಅದರ್ಕೆ ಮನದೊಳ್ ಕಕ್ಕುಲಿತೆಗೊಳಲ್ಕೆ ಕಾರಣ ಮಿಲ್ಲ. ಇನ್ನುಮವರ್ ಮುನ್ನಿನಂತೆಣಿಸಿ ಮೆಯ್ಮಱಿದೆಮ್ಮಂ ಬಗೆಯದೆ ಕಟ್ಟೃಘಟಿಂ ಪಟ್ಟಣಮಂ ಮುತ್ತುವರ್. ಆಗಳಾಮವರ ಪಾಳೆಯಮಂ ದಱಿದುಱಿವಾಯ್ದು ಸೂಡುಪಾಡಂ ಮರಲ್ಚುವೆವು. ಇದು ನಿಶ್ಚಿತಂ. ಇನಿತಱೊಳವರುಪಟಳಕ್ಕೆ ಬೆಚ್ಚ ದೆಮ್ಮಂ ನಚ್ಚಿರ್ಪುದು." ಎಂದನಿಬರುಂ ಕಳುಪಿದ ಬಾಸೆವತ್ತುಳೆಗಳನಿತ್ತು ಬಿನ್ನವಿಪುದುಂ ;

ಆ ತಿರುಮಲರಾಜಂ— "ಅಕಟಕಟಾ ! ಇರುಳ್ಕಂಡ ಪಳ್ಳದೊಳ್ಪಗಲ್ ಬೀಳ್ವರೇ ? ಅಟ್ಟಿ ಪಿಡಿವನ ಮನೆಯೊಳವಿದುಕೊಳ್ವರೇ ? ಪೋಪ ಮಾರಿಯಂ ಕೂಗಿ ಕರೆವರೆ ? ತಳನನಗಟ್ಟು ಮೇಲೆ ಕೆಡಪಿ ಕೊಳ್ವರೆ ? ತಲೆದಾಗಿಯುಂ ನಿಮಿರ್ದಪರೆ ? ಮುಗ್ಗಿವಿೞ್ದುಂ ಮೂಗು ಮೇಲೆಂಬರೆ ? ಎಂಬ ಮಾತೇ ನಿನ್ನರಮನೆಯ ಸೀಮೆಯೊಳ್ಪೊಱಿಟ್ಟು ತುಱುಸೆಱೆಗೊಂಡುದಱಿಂದಂದಿಗೆ ವರ್ಷ ಧನಧಾನ್ಯಂಗಳಡಂಗಿ ಸಂಚಿತಂಗಳುಂ ಸವೆದು ಆನೆಕುದುರೆಗಳ ಮೇಪುಗಳ್ಗಂ ಜೋದರಾವುತಪಾಯದಱಿದ ಜೀವಿತಂಗಳ್ಗಂ ಅರಮನೆಯೊಡವೆಯೊಳಮಗರದ ತೆಱಿಗೆಯೊಳಂ ದೇಗುಲದುಪಕರಣಂಗಳೊಳಂ ಪರದರ ಬಣಂಜದೊಳಂ ಮತ್ತಮೇಂ ದಂಡದೊಳಂ ಕವರ್ತೆಯೊಳಂ ತೀಱದೆ ದಂದುಗಂಗೊಂಬುದೆನಿತಾನುಮುಂಟು ; ಅದುಮಲ್ಲದೆ ಪಟ್ಟಪಗಲ್ನಡುವಟ್ಟಣದೊಳ್ತಳವರನ ತಲೆಗೊಯ್ದರ್ ; ಕಾವಲಿಗರಂ ಕಡಿದೊಟ್ಟಿದರ್ ; ಅಧಿಕಾರಿಯನಱಿಯಟ್ಟಿದರ್ ; ಅರಮನೆಗೇೞ್ತರ್ಪರನಡವಾಯ್ದು ಪೊಯ್ದರ್ ; ಕತ್ತಿಯೂಳಿಗದವನಂ ಕತ್ತರಿಸಿ ಕತ್ತಿಯನೀೞ್ದರ್ ; ಸಂಚಿಯವನುಂ ಪೊಂಚಿ ಸದೆದು ಕಂಚುಮಿಂಚಾದರ್ ; ಅವರ್ಕೇಣಮಂ ತೊಟ್ಟು ಮನಂ ಮುಟ್ಟಿ ನಡೆಯಿಸಿದೊಡೆ ಪೊಱೞ್ಬಳಸಿದುದೆ ಪುಸಿಯೆನಿಸುವರ್ ; ಕೋಂಟೆಯುಗೆೞ್ಗಳ ದಿಂಟೆವಳ್ಳಂಗಳನರೆಗಳಿಗೆಯೊಳ್ಸಮತಳಂಗೆಯ್ವರ್ ; ಮೂಡುವ ಪೊೞ್ತುಂ : ಮುಚ್ಚಿ ಮಾಂಜುವರ್ ; ಬೀಸುವೆಲರಂ ಪಿಡಿದು ನಿಲಿಸುವರ್ ; ಕರ್ಗಲ್ಲಂ ಮೆಲ್ಲಿತೆನಿಸುವರ್ ; ಅಂತಾದೊಡಮೆನ್ನೊಳ್ ಮುನ್ನಿನ ಕೆಳೆಯನೆಂದುಂ ಮುದುಪನೆಂದುಂ ಬಲ್ಲರಣೆಗನೆಂದುಂ ಬಸಗೆಟ್ಟನೆಂದುಂ ತಱಹರಿಸಲಾಱನೆಂದುಂ ತಾನೆ ಪೋಪನೆಂದುಂ ದಯೆಗೆಯ್ದೆನ್ನುಮನೆನ್ನಂತಪುರಮುಮಂ ಮನ್ನಿಸಿರ್ಪರ್. ಆದೊಡರಮನೆಯ ಮನೆವಾೞ್ತಿಗಂ ತೆಱನಿಲ್ಲದೆ ಬೊಮ್ಮಪುರದವರ್ ಓದಾಳಿ ಪಾರ್ವರೆಂದೊಲ್ದು ಮೈಸೂರವರವರೂರಂ ಸೂಱೆಗೊಳ್ಳದೆ ತುಱುಸೆಱೆಗೆಯ್ಯದೆ ಕಾಪಿಟ್ಟುದಱಿಂದಾಪೂರೊಳ್ಬೆಳೆದ ಕಳವೆಯೊಳನಿಸಿನಿಸಂ ಕಳ್ದು ತರಿಸಿನ್ನೆವರಂ ಕಾಲಂಗಳೆದೆಂ. ಇನ್ನಿಲ್ಲಿರ್ಪುದಿಲ್ಲ. ತಾಮಿರ್ಪಲ್ಲಿಗೆವರ್ಪೆ." ಎಂದು ಬೆಸಸಿ ಕಳುಪಿದಂ ;

ಬೞಿಕ್ಕವರಾವೃತ್ತಾಂತಮಂ ಕೇಳ್ದು ಆಳ್ದನಾಪತ್ತನೊತ್ತರಿಪೆವೆಂದು ತಮ್ಮಮ್ಮಳ್ಳ ಧನಧಾನ್ಯಂಗಳಂ ಮದುರ್ಗುಂಡುಗಳಂ ಬಾಣಬತ್ತಿಗಳ್ಮೊದಲಾದೆಲ್ಲಾ ವಸ್ತುಗಳಂ ಕೊಂಡು ಬಂದು ಪಟ್ಟಣಮಂ ಪುಗಲೆಂದು ಬಡಗಣ ಪೊಱೆಯ ಪೊಱಗಡೆಯೊಳ್ಪಾಳೆಯಮಿಱಿದರ್ .

ಇತ್ತಲಾ ರಾಜನೃಪನೀಯೆಸಕಮನಾರಯ್ದು ಕೆಸಱೞಿಯ ಪುಯಿಲೊಳ್ ಬಸಗೆಯ್ದಾನೆಕುದುರೆಗಳ ಬಳಗದಿಂ ಬಳೆದ ದೞವಮಂ ನರಸರಾಜನೆಂದು ನೆಗೞ್ತೆವೆತ್ತ ತನ್ನ ಪಿರಿಯಣುಗನ ಬೞಿಯೊಳ್ ಕಳುಪುವುದುಂ; ಅವಂ ಕಣ್ಣೆವೆಮಿಸುಕಿದಂತವರ ಪಾಳೆಯದ ಮುಂತಣ್ಗೆವಂದು ನಿಂದು ಭಟನೊರ್ವನಂ ಕರೆದು—ನೀನವರ ಬೞಿಯಂ ಸಾರಿ—"ವೈರಿರಾಜವೇಶ್ಯಾಭುಜಂಗನೆನಿಪ ರಾಜನೃಪನ ಕುವರಂ ಕೂರಾಳ್ಗಳ ಗಂಡನಾದ ನರಸರಾಜನಱಿಕೆಗಾಳೆಗಂಗೊಳಲ್ಬಂದಂ. ನೀಂ ಇಂದು ಮೆಯ್ಮಱೆತಿರ್ದೆವು, ಮದವೇಱಿರ್ದೆವು, ಮಱವಟ್ಟಿರ್ದೆವು, ಮರುಳಾಗಿರ್ದೆವು, ಪಸಿದಿರ್ದೆವು, ಬೞಲ್ದಿರ್ದೆವು, ಉಣುತಿರ್ದೆವು, ಒಱಗಿರ್ದೆವು ಎಂದು ಪಿಂದೆ ಗೞಪದೆೞ್ತರ್ದು ಸನ್ನದಮಾಗಿ ಬಗೆವಂದಾಗಳ್ ಬರ್ಪುದು." ಎಂದು ಮೂದಲಿಸಿ ಬೆಸಸಿ ಕಳುಪೆ; ಅವಂ ಪಸಿದೆಯ್ದಿವಂದು ಅಂತೆ ಪೇೞಲೊಡೆಮವರ್ ಮೊರೆದೆೞ್ದು ಅವಂ ಮರಲ್ದು ಬರ್ಪುದರ್ಕೆ ಮುನ್ನಮೆ ಕವಿತರ್ಪುದುಂ; ನರಸರಾಜಂ ಮುಂ ರಕ್ಕಸರನೊಕ್ಕಲಿಕ್ಕಿದ ಕುವರನಂತೆ ಶಕ್ತಿಧರನೆನಿಸಿ ಕೊಂಚಪೆಟ್ಟಂ ತಟ್ಟುರ್ಚಿದಂತೆ ತಾಱುಂತಟ್ಟಾಗಿ ಕೆಡಪಿ ಮಟ್ಟೈಡುವುದುಂ; ಅವರ್ ಕೆಟ್ಟು ಮುಱಿದೋಡಿ ಬಡಗಲ್ಲಾಗ್ನದದೊಳಿರ್ಪ ಕೋಡಾಲಮಂ ಪುಗಲೊಡನೀತನುಂ ಬೆಂಬತ್ತಿ ಸುತ್ತಿರ್ಪಿನಂ; ಒಳಗಿರ್ದ ದೊರೆಗಳನಿಬರುಂ ಕಡುವಿಸಿಲೊಳ್ಪರಿತಂದು ಪಸಿದಿರ್ದುದಱಿಂ ನೀರೞ್ಕೆಗೊಂಡು ಬಾವಿಯನಱಸಿ ಬನ್ನಂಬಟ್ಟು ಬಾಯೊಣಗಿ ಬಸಗೆಟ್ಟು ಅಲ್ಲಿರ್ಪ ತಿಪ್ಪೆವಳ್ಳದೊಳ್ಪಾವಸೆಗಟ್ಟಿ ಬಣ್ಣಂಗುಂದಿ ಕೊೞೆತು ಪುೞಿತು ಪೊಲಸು ಗಂಪಿಡುವ ನೀರನೆ ಕುಡಿದು ಸಂಜೆವರೆಗಮುಸಿರ್ವಿಡಿದಿರ್ದು ಮರ್ಬಿನೊಳ್ ಪೊಱಮಟ್ಟು ಓರೊರ್ವರೊಂದದೆ ಪಱಿದು ಪೋದರ್.

ಮಱುವಗಲ್ ತಿರುಮಲರಾಜಂ ನರಸರಾಜನ ವಿಜಯವಾರ್ತೆಯಂ ಕೇಳ್ದು ಎತ್ತಾನುಮಾತನಾಪಡೆವೆರಸು ಬಂದು ಪಟ್ಟಣಮಂ ವೇಢೈಪನೆಂದಳ್ಕಿಯೊಡಲಂ ಬಿಡುವ ಜೀವನಂತೆ ಪಲತೆಱದೊಳ್ ಪಲುಂಬಿ ಕೊಱಗಿ ಕೋಟಲೆಗೊಂಡು ಪೆಣ್ಡಿರಂ ಬಿಟ್ಟು ಪಟ್ಟಣದಿಂ ಪೊಱಮಟ್ಟು ಗತಪುಣ್ಯರ್ ಸ್ವರ್ಗದಿಂ ದುರ್ಗತಿಗಿೞಿವಂತೆ ತಳಕಾಡ ಬೞಿಯ ಮಾಲಂಗಿಗೆಯ್ದಿ ಮೆಯ್ಮಱಸಿದಂ.

ಬೞಿಕ್ಕೆ ನರಸರಾಜಂ ರಾಜನೃಪಂಗೆ ಈ ವಾರ್ತೆಯಂ ಬಿನ್ನವಿಸಿ ಕಳುಪುವುದುಂ; ಸೋದರನನೊಡಗೊಂಡು ಪಟ್ಟಣಕ್ಕೆ ನಡೆತಂದು ಊರ ಮುಂದಣ ಬಯಲೊಳಿೞಿದಿರ್ದ ಕುವರನಂ ಕೂರ್ಮೆಯಿಂದಪ್ಪಿ ಸಂತಸಂದಳೆದು ಸನ್ನುತಿಗೆಯ್ದು ಪೊೞಲಂ ಪುಗಲೆಳಸಿಯುಂ ಪರಿವ ಪಾವಂ ಉರಿವ ಕಿರ್ಚಂ ಮೆಯ್ಗೊಂಡ ಮರುಳಂ ಪೆಱರ ಪೆಂಡಿರಂ ಪತ್ತೆಸಾರ್ಪುದು ಪಾಟಿಯಲ್ತೆಂದು ಅಲ್ಲಿಯೆ ನಿಂದು ತಿರುಮಲರಾಜನ ರಾಣಿಯಾದ ರಂಗಮ್ಮನೆಡೆಗೆ ಮುತ್ತ ಮುದುಪನನೊರ್ವನಂ ಬೆಸಸಿ ಕಳುಪಲೊಡಮವಂ—"ಹದಿಬದೆಯರ್ಗೆ ಗಂಡನಂ ಬೞಿಸಲ್ವುದೆ ಬಲ್ಲವಿಕೆ. ನೀಂ ನಿಮ್ಮುಡಿಗೆತೊಡಿಗೆಳುಮನೂಳಿಗವೆಣ್ಗಳುಮನೊಡಗೊಂಡು ಪೋಪುದರ್ಕೆ ತಕ್ಕ

ದಂಡಿಗೆಗಳುಮಂ ಭಂಡಿಕುದುರೆಗಳುಮನೊಡಗೊಂಡು ಬಂದೆಂ. ತೆರಳ್ವುದು.”
ಎಂಬುದಂ ;

ಅನುಡಿಗೇಳ್ದು—ಮುಂತೆನ್ನ ಮನದೊಳೀರಾಯಂ ಬಿಟ್ಟುಪೋದನಿನ್ನೇ
ನಪ್ಪುದೋ ಎಂಬ ಚಿಂತಾಸಾಗರದೊಳ್ಮುೞುಂಗಿದ ಮೂಗುಬ್ಬಸಮಿೞಿದು—
“ಎಲೆಯಣ್ಣ ನೀನುಂ ಮಡದಿಮಕ್ಕಳ್ವೆರಸು ಕಟ್ಟೈಸಿರಿಯೊಳ್ ನೂಱುಂ ಬರಿಸಂ
ಸೊಗವಾಳ್” ಎಂದು ಪರಸಿ ಸಂತಸಗದುಬಿನೊಳ್ ಕೆಳದಿಯರಂ ಕರೆದು—
“ರಾಜನೃಪಂ ನೆವಮಿಲ್ಲದೆಱಕದೊಳಿಂದೆನ್ನನೆಮ್ಮಾಳ್ದನ ಬೞಿಗೆ ಕಳುಪುವಂ;
ಪೋಪಂ.” ಎಂಬುದುಂ ; ಅವರವರ್ ತಂತಮ್ಮ ಕಟ್ಟಳೆಯೂಳಿಗಂಗಳನೆಸಗುತ್ತಿ
ಬೞಿವರೆ ; ರಾಣಿ ಪೊಱಮಟ್ಟು ರಂಗೇಶರಂಗನಾಯಕಿಯರ್ಗೆ ವಂದನೆಯಂಗೆಯ್ದು
ಅಂದಳಮೇಱಿಯೂರ ಪೊಱಗಣ್ಗೆವಂದು ರಾಜರಸನ ಪೌಜಂ ಕಿಱಿದುಂ ದೂರದೊ
ಳ್ಕಂಡು ನಿಂದು ಕೆಳವಿಗೆಳದಿಯೊರ್ವಳಂ ಕರೆದು—‘ನೀಂ ರಾಜನೃಪನ ಸಮ್ಮೊಗದೊ
ಳ್ನಿಂದು ಎನ್ನ ನುಡಿಯಿಂದೆ’ —“ಎಲೆ ತಂದೆ ಕೇಳೆನ್ನರಸನುಮೂರೊಳಗಿಲ್ಲದೆ
ಮೆಯ್ಗಾವಲಿಗರುಂ ಪೋಗಿಯಾನೊರ್ವಳೆಂ, ಎನಗಮೆಮ್ಮೂಳಿಗವೆಣ್ಗಳ್ಗಮೆನ್ನ
ಮನಮುಮಂ ಮಾತಗಳುಮಂ ಕಾವಲಿಟ್ಟು ಕಡಲೊಳ್ಮುೞುಂಗಿ ಕೈಗೆಟ್ಟಂತಿರ್ಪಳ
ನೆತ್ತಿ ಸಲಹಿಯೆನ್ನಾಳ್ದನೆಡೆಗೆ ಕಳುಪಿದೆ. ಪ್ರಾಣಮಾನಂಗಳೊಡನೆಮ್ಮ ಕುಲ
ಧರ್ಮಮಂ ಕಾಪಿಟ್ಟು ಮನ್ನಿಸಿದೆ. ಇಂದಾಂ ಸಿನ್ನ ಬೆನ್ನೊಳಂ ಬಸಿಱೊಳಂ ಬಂದೆಂ.
ನೀನೆನ್ನ ಪರಕೆಗಳಿಂ ನಳನಹುಷನಾಭಾಗರಂತೆ ಇಳೆಯನಾಳ್ದು ಪಗೆಗಳಂ ಗೆಲ್ದು
ಪೊರ್ದಿದರಂ ಪೊರೆದು ಪಾರ್ವರ್ಗಿತ್ತು ಮಿತ್ರಕಳತ್ರಪುತ್ರಪೌತ್ರರ ಮೇಳದೊಳ್
ಸೊಗವಾಳ್.” ಎಂದು ಬಿನ್ನವಿಸಿ ಬರ್ಪುದು.’ ಎಂದು ಕಳುಪೆ ; ಅವಳಂತೆ ಗೆಯ್ದು
ಮರಳ್ದಳ್.

ಕೇಳು ಮೈತ್ರೇಯ ! ಈ ರೀತಿಯಲ್ಲಿ ಪರತತ್ತ್ವದೊಳೊಡೆವೆರೆದಂಥ ಕೃಷ್ಣ ಸ್ವಾಮಿಯ ವೃತ್ತಾಂತಮಂ ದಾರುಕನಿಂದ ಚೆನ್ನಾಗಿ ಕೇಳಿ ಅರ್ಜುನನು ಯಾದವ ರೆಲ್ಲರೂ ಮಡಿದು ಕೆಡೆದಿರ್ದ ಪ್ರಭಾಸಕ್ಷೇತ್ರಕ್ಕೆ ದ್ವಾರಕಿಯಿಂ ಪೊರಮಟ್ಟು ಪೋಗಿ ಅಲ್ಲಲ್ಲಿ ನೋಡುತ ಬರ್ಪಲ್ಲಿ, ಬಲಭದ್ರನ ಕಳೇಬರವಂ ಕೃಷ್ಣಸ್ವಾಮಿಯ ಕಳೇ ಬರವಂ ಕಂಡು ಮನದೊಳು ಕಡುನೊಂದು ಆಯೆರಡು ಕಳೇಬರಂಗಳಿಗೂ ವಿಧ್ಯುಕ್ತ ಮಾಗಿ ಬ್ರಹ್ಮಮೇಧಸಂಸ್ಕಾರಮಂ ಮಾಡಿದ ಬಳಿಕ, ಬಳಭದ್ರ ಕೃಷ್ಣಸ್ವಾಮಿ ಯಿರ್ವರ ವೈಕುಂಠಯಾತ್ರೆಯಂ ಕೇಳಿ ರೇವತೀದೇವಿಯೂ ರುಕ್ಮಿಣೀದೇವಿ ಮುಖ್ಯ ರಾದ ಅಷ್ಟಮಹಿಷಿಯರೂ ಭರದಿಂದಾಯೆಡೆಗೆ ನಡೆತಂದು ಬಗೆಗುಂದದೆ ಧೈರ್ಯ ದಿಂದ ಪರಮಾನಂದಭರಿತೆಯರಾಗಿ, ಬಲದೇವನ ಕಳೇಬರವನಪ್ಪಿ ರೇವತೀದೇವಿಯೂ ಕೃಷ್ಣನ ಕಳೇಬರವನಾಲಿಂಗಿಸಿ ಅಷ್ಟಮಹಿಷಿಯರೂ ಆ ಬಲಭದ್ರ ಕೃಷ್ಣಸ್ವಾಮಿಯ ಕಾಯಸಂಪರ್ಕದಿಂದ ತಣ್ಣನೆ ದಹಿಸುತಿರ್ಪ ವಹ್ನಿಯೊಳು ತಮ್ಮ ಶರೀರಮಂ ಮಾಣ್ದು ಪರಲೋಕಮಂ ಸಾರಿದರು; ಆ ಬಳಿಕ ಉಗ್ರಸೇನನೂ ವಸುದೇವನೂ ದೇವಕೀದೇವಿಯೂ ಇವರೆಲ್ಲರೂ ಬಲಕೃಷ್ಣರವತಾರ ಪೂರ್ತಿಯಂ ಕೇಳಿ ಆಯೆಡೆಗೆ ತಾವೂ ಬಂದು ದಾವಾಗ್ನಿಯೊಳು ತಮ್ಮ ಕಳೇಬರಂಗಳನೀಡಾಡಿದರು. ಅವರನಿಬ ರಿಗೂ ಫಲ್ಗುಣನೇ ವಿಧ್ಯುಕ್ತಪ್ರಕಾರದಲ್ಲಿ ಸಂಸ್ಕಾರಂ ಗೆಯ್ದನು. ಆಮೇಲೆ ಪಾರ್ಥಂ ದ್ವಾರಕಿಗೆ ನಡೆತಂದು ಪರಿಜನಪೌರಜನವಂ ಕೃಷ್ಣಸ್ವಾಮಿಯ ಪತ್ನಿಯರು ಹದಿನಾರುಸಾವಿರವಂ ದಾರುಕನಂ ವಜ್ರನುಮನೊಡಗೊಂಡು ದ್ವಾರವತಿಯಂ ಪೊರಮಟ್ಟು ಆನಿಬರಂ ಕಾಪಿಡುತ ಮೆಲ್ಲನೆ ದಾರಿದೆಗೆದು ನಡೆತರುತಿರ್ದರು.

ಕೇಳು ಮೈತ್ರೇಯ ! ಬಲಕೃಷ್ಣರವತಾರ ಸಂಪೂರ್ತಿಯಾಗಿ ಭೂಮಿಯ ನುಳಿದು ವೈಕುಂಠಕ್ಕೆ ಬಿಜಯಂಗೆಯ್ದ ದಿವಸವೇ ಆ ಸುಧರ್ಮೆಯೆಂಬ ದೇವಸಭಾ ಮಂಡಪವೂ ಪಾರಿಜಾತವೃಕ್ಷವೂ ದ್ವಾರಕಾಪುರಿಯನುಳಿದು ಸ್ವಾಮಿಯ ಸಂಕಲ್ಪ ವಿದ್ದಂತೆ ಗಗನಕ್ಕೆ ನೆಗೆದು ಸ್ವರ್ಲೋಕವನೆಯ್ದಿದುವು. ಆವದಿನ ಪರಮಾತ್ಮನು ಭೂಮಿಯನುಳಿದು ವೈಕುಂಠಕ್ಕೆ ಗಮಿಸಿದನೊ, ಆ ದಿನದಲ್ಲಿಯೇ (ಕಾಲಕಳೇಬರ ನಾದ) ಅಸಿತವರ್ಣನಾದ ಕಲಿಪುರುಷನು ಸಂಚರಿಸಿ ಭೂಮಂಡಲವನ್ನೆಲ್ಲ ಆವರಿ ಸಿದನು. ಆ ಬಳಿಕ ಪರಬ್ರಹ್ಮನ ಅರಮನೆಯೊಂದು ಪೊರತಾಗಿ ದ್ವಾರಾವತೀ ಪುರವನೆಲ್ಲವನೂ ಸಮುದ್ರನು ಬಳಸಿ ಮುಳುಗಿಸಿದನು. ಆ ವಾಸುದೇವನ ಭವನದಲ್ಲಿ ಪರಮಾತ್ಮನ ಸನ್ನಿಧಾನವಿರ್ಪುದು. ಆದುದರಿಂದವಿಾಗಳುಮಾಸ್ವಾಮಿಯ ಮಂದಿರವು ಕಡಲೊಳು ಕಾಣಿಸುವುದು. ನಿಚ್ಚಮುಂ ಸಮುದ್ರರಾಜನು ಆಯೆಡೆ ಗೆಯ್ತಂದು ಪೂಜಿಸುತಿರ್ಪನು. ಆ ಪರಮಾತ್ಮನ ಅವತಾರದ ಶ್ರೇಷ್ಠವ್ಯಾಪಾರಕ್ಕೆ ಆಸ್ಪದಮಾದ ಭೂಮಿಪ್ರದೇಶಂಗಳೆಲ್ಲ ಮಹಾತಿಶಯಂಗಳಾಗಿ ಮಹಾಪುಣ್ಯಸ್ಥಾನಂ

ಗಳಾಗಿ ಭಕ್ತಿಯಿಂ ಬಂದು ಸೋಕ್ಕ ಮನುಜರ್ಗೆ ಸಕಲ ಪಾಪಹರಂಗಳಾಗಿ ಮೋಕ್ಷಾದಿ ಪುರುಷಾರ್ಥಪ್ರದಂಗಳಾಗಿ ರಂಜಿಸುವುವು.

ಕೇಳು ಮೈತ್ರೇಯ ! ಸಕಲ ಪರಿಜನ ಪೌರಜನ ಕೃಷ್ಣಪತ್ನಿಯರಂ ವಜ್ರ ದಾರುಕರನೊಡಗೊಂಡು ಪಾರ್ಥನು ಧನಧಾನ್ಯಸಮೃದ್ಧಿಯುಳ್ಳ ಪಂಚನದಸ್ಥಾನ ವೆಂಬೊಂದು ಪ್ರದೇಶಕ್ಕೆ ನಡೆತಂದು ಅಲ್ಲಿ ಸಮಸ್ತರನ್ನೂ ಇರಿಸಿ ತಾನೊರ್ವನೇ ಕಾಪಿಡುತಿರಲಾಗಿ; ಆಬಳಿಯೊಳು ಸುತ್ತಲೂ ಕಳ್ಳರಾಗಿ ಪಾಪಕರ್ಮಿಗಳಾಗಿ ಲೋಭೋಪಹತಚೇತಸರಾಗಿ ಇರ್ದ ಕಿರಾತರೂ ಆಭೀರರೂ ಕೂಡಿ,—ಈಸಮಯ ದಲ್ಲಿ ಅರ್ಜುನನೊರ್ವನೇ ತಾನು ಭೀಷ್ಮದ್ರೋಣಜಯದ್ರಥ ಕರ್ಣಾದಿ ಮಹಾ ವೀರರಂ ಸಂಹರಿಸಿದೆನೆಂಬ ಗರ್ವದಿಂದ ಶರಧನುಷ್ಪಾಣಿಯಾಗಿರ್ಪನೆಂಬ ಅದಟಿ ನಿಂದೆಯುಂ ನಮ್ಮಿನಿಬರಂ ಗ್ರಾಮ್ಯರೆಂದುಂ ಬಲಹೀನರೆಂದುಂ ಕೇವಲದಂಡಪಾಣಿ ಗಳೆಂದುಂ ಸಡ್ಡೆಗೆಯ್ಯದೆ ಸಮಸ್ತವಾದ ವಸ್ತುಗಳನೂ ಗತಭರ್ತೃಕೆಯರಾದ ಹೆಣ್ಗಳನೂ ಒಡಗೊಂಡು ನಡೆಯಿಸುತಿರ್ಪನು. ಇಂತಪ್ಪ ಅಹಂಕಾರದೊಳಿರ್ಪ ಪಾರ್ಥನದಟಂ ಮಗ್ಗಿಸಿ ಸಮಸ್ತ ವಸ್ತುಗಳಂ ಕೊಂಡುಪೋಗದೆ ಸುಮ್ಮನೆಯಿರ್ದೊಡೆ ಸಾಮರ್ಥ್ಯದಿಂದೆಯುಂ ಈ ನಿಡಿದಾದ ಬಾಹುಗಳಿಂದೆಯುಂ ಪ್ರಯೋಜನಮೇ ನುಂಟು ?—ಎಂದು ಕಡುಕನಲ್ದು ಸಹಸ್ರ ಸಂಖ್ಯೆಯಿಂದ ದಿಂಗಡಿಸಿಕೊಂಡು ದಂಡ ಪಾಣಿಗಳಾಗಿ, ಕೊಲ್ಲು ! ಕಡಿ ! ಇರಿ ! ಬಡಿ ! ಸರ್ವಸ್ವಮಂ ಕವಳು ! ಎಂದು ಬಂದು ಅಡ್ಡಗಟ್ಟಿ ನಿಂದು ಜಡಿಯುತ್ತಿರಲಾಗಿ ; ಅರ್ಜುನನು ನಗುತ ಜಂಕಿಸಿಯುತ— ಎಲೆ ದಸ್ಯುಗಳಿರಾ ! ಬಲಹೀನರಾಗಿ ನೀಚರಾಗಿ ಇರ್ಪ ನಿಮಗಿನಿತು ಗರ್ವಮಾದುದೇ ? ಇಂತುಜ್ಜುಗಿಸುವುದು ವಿಹಿತವೇ ? ಮರಣಮನೆಳಸಬೇಡಿ. ಎನ್ನಾರ್ಪಂ ಕೇಳಿಯರಿ ಯಿರಾ ? ಆದುದರಿಂದೆಲ್ಲರೂ ಹರಣಮನುಳುಹಿಕೊಂಡು ಓಡಿಪೋಗಿ—ಎಂದು ಗರ್ಜಿಸಿ ನುಡಿಯಲಾಗಿ ; ಆ ಮಾತನಾಲಿಸಿ ಪಕಪಕನೆ ನಗುತ, ಆ ಪಾರ್ಥನಂ ಕಡೆಗಣಿಸುತ, ಮುಂದೊತ್ತಿ ನಡೆದು, ಪೆಣ್ಗಳನೂ ಧನಧಾನ್ಯಾದಿವಸ್ತುಗಳನೂ ಸೆಳೆ ಸೆಳೆದು ಪೋಪುದಂ ಕಂಡು, ಕೌಂತೇಯನು ಕೋಪಾಕ್ರಾಂತನಾಗಿ ಅಮೋಘವಾದ ಗಾಂಡಿವವೆಂಬುದಂ ತಿರುವನೇರಿಸಲಾರದೆ, ಕಷ್ಟದಿಂ ತಿರುವನೇರಿಸಲು ; ಆ ಧನುಸ್ಸು ಕಟ್ಟು ಸಡಲಿ ಸಿಥಿಲವಾದುದು. ಅಂತಾದೊಡಂ ದಿವ್ಯಾಸ್ತ್ರಮಂತ್ರಂ ಗಳೊಂದುಂ ಸ್ಮರಿಸಿದೊಡಂ ನೆನಹಿಗೆ ಬಾರದೆ, ಕಣ್ಗೆಡುತ್ತ ಬರಿಯ ಬಾಣಂಗಳಂ ತೊಟ್ಟೆಚ್ಚನು. ಆ ಬಾಣಂಗಳು ಚರ್ಮಮಾತ್ರವನೆ ಭೇದಿಸಿದುದಲ್ಲದೆ ಏನೂ ಮಾಡಲಿಲ್ಲ. ಯಜ್ಞೇಶ್ವರನಾದ ಅಗ್ನಿ ಕೊಟ್ಟ ಭೀಷ್ಮಕರ್ಣದ್ರೋಣಜಯದ್ರಥಾದಿ ಗಳಂ ನಸಿಯಿಸಿದೆನ್ನ ಬಾಣಂಗಳ್ ಪುಸಿಯಾಗಿ ಶತ್ರುಗಳಂ ಪರಾಭವಿಸಲಾರದೆ ಬರಿದೆ ನಷ್ಟವಾಗಿ ಪೋದುವು. ಅಂದಿನ ಕಾಲದೊಳಿರ್ದ ಬಲವಂ ತೇಜವಂ ಗೆಲವಂ ಶ್ರೀಕೃಷ್ಣಸ್ವಾಮಿ ನಿಲವಿಲ್ಲದಂತೆಸಗಿದನು. ಭಾರತಯುದ್ಧದಲ್ಲಿ ಸಮಸ್ತ ಶತ್ರು ಗಳನೂ ಸಂಹರಿಸಿ ಗೆಲ್ಲಂಗೊಂಡೆನಲ್ಲದೆ ಎನ್ನಾರ್ಪಿನಿಂದೆ ಅಂತಪ್ಪ ಅರಿಗಳಂ

ಪರಾಭವಸಿದವನಲ್ಲವೆಂದೇ ಚಿಂತಿಸುತಿರಲಾಗಿ ;—ಅನಿತಱಲಿ ಪಾರ್ಥನು ನೋಡು ತಿರ್ಪಂತೆ ಕೆಲಂಬಗು ಕಾಂತೆಯರು ತಾವೇ ಕಾಮಿಸಿ ಓರೊರ್ವರಾಗಿ ಆ ಗೋವಳರ ಬಳಿವಿಡಿದು ಪೋದರು. ಕೆಲರ್ ಕಾಮಿನಿಯರು ಮ್ಲೇಂಛರೊಡನೆ ನೇಹಂಗೆಯ್ದು ಪೋದರು ; ಕೆಲರಂಗನೆಯರು ದಸ್ಯುಗಳ ಬಳಿವಿಡಿದು ಪರಿದರು, ಅದನೀಕ್ಷಿಸಿ ಕೌಂತೇಯನು ಕೆರಳ್ದು ಬಾಣಂಗಳುಂ ಅಸ್ತ್ರಂಗಳುಂ ವ್ಯರ್ಥಮಾದೊಡಂ ಮನ ದಳಲು ಉಡುಗದೆ ಬಱಯ ಬಿಲ್ಲಿಂ ಬಡಿಯುತ ಬೆದಱಸುತಿರಲಾಗ ಹಾಸ್ಯಂಗೆಯ್ದು ಅವರೊಳಿದ್ದುದನೆಲ್ಲವನಪಹರಿಸಿಕೊಂಡು ಪೋದರು.

ಕೇಳು ಮೈತ್ರೇಯ ! ಆ ಬಳಿಕ ಅರ್ಜುನನು—"ಅಕಟಕಟ ! ಇಂತಪ್ಪ ಕಷ್ಟವೆನಗೆ ತೋಱತು. ಎನ್ನಳವು ಕುಂದಿಪೋದುದು ! ಜಗದೀಶ್ವರನಾದ ಕೃಷ್ಣ ಸ್ವಾಮಿಯೇ ಎನ್ನುಮಂ ಮೋಸಗೊಳಿಸಿದನು. ಅಂದಿನ ಭಾರತದ ಮಹಾಯುದ್ಧ ದಲ್ಲಿ ತ್ರೈಲೋಕ್ಯವೀರರಾದ ದೊರೆಗಳಂ ಭಯಂಗೊಳಿಸಿ ಸಂಹರಿಸಿ ಜಯಮಂ ಕೈಕೊಂಡಂಥ ಎನ್ನದೊಂದು ರಥಮಂ ದಿವ್ಯಾಸ್ತ್ರಂಗಳುಂ ಮಹಾಶರಗಳುಂ ಶ್ರೋತ್ರಿಯನಲ್ಲದ ಅಯೋಗ್ಯನಾದ ವಿಪ್ರಂಗೆ ಕೊಟ್ಟ ದಾನಂಗಳಂತೆ ವ್ಯರ್ಥಮಾಗಿ ನಾಶಮನೆಯ್ದಿದುವು. ವಿಚಾರಿಸಿ ನೋಡಿದೊಡೆ ಕಾಲವಿಶೇಷದಿಂದ ವಿಧಿಯೇ ಬಲವಂತವಾದಂಥದು. ಆ ಪರಮಾತ್ಮನಾದ ಶ್ರೀಕೃಷ್ಣನೊಲವಿರ್ಪನಿತು ಕಾಲವೂ ನಾವು ಮಹಾಜಯಶಾಲಿಗಳಾಗಿರ್ದೆವು. ಆ ಜಗದೀಶ್ವರನ ಕೃಪೆ ತಪ್ಪಿದ ಬಳಿಕ ಒಂದು ಪುಲ್ಲುಕಡ್ಡಿಗಂ (ಕಡೆಯಾದ) ಈ ನೀಚರಾದ ಮ್ಲೇಂಛರೆನ್ನನು ಕಡೆಗಣಿಸಿ ಜಯಿಸಿ ಸ್ತ್ರೀಧನಾದಿಗಳಂ ಕಸುಕೊಂಡು ಪೋದರು. ಅಂದಿನ ಕಾಲದೊಳಿರ್ದೆನ್ನ ತೋಳ ಬಲ್ಮೆಯುಂ, ಅಂದಿನಾಪ್ರುಂ ಅಂದಿನ ಜಿಷ್ಣುತ್ವಮುಂ ಸಕಲ ಶತ್ರುಗಳಂ ಗೆಲ್ಲಂಗೊಂಡುವು. ಈಗಳ್ ಆ ಸ್ವಾಮಿಯ ದಯಾರಸವು ಬತ್ತಿಪೋದುದಱಂದ ಈ ನೀಚಜಾತಿಗಳ್ಗೆ ಪುಣ್ಯಹೀನನಾದ ನಾನು ಅಲಕ್ಷ್ಯನಾಗಿ ಪೊದೆನು. ಇದುವರೆಗಂ ಕೃಷ್ಣಸಾಮಿಯ ಬಲದಿಂ ಎನ್ನೊಳಿರ್ದ ಅರ್ಜುನತ್ವಮುಂ ಭೀಮನ ಭೀಮತ್ವಮುಂ ಕಡೆಗಂಡು ದಸ್ಯುಗಳೆಲ್ಲಮಂ ಕವರ್ದು ಕೊಂಡೊಯ್ದರು."—ಎಂದು ಕಟ್ಟುರಿಯಿಂ ದಳುತ ವಜ್ರನಂ ದಾರುಕನುಮನೊಡಗೊಂಡು ಪಾರ್ಥಂ ಮೆಲ್ಲಮೆಲ್ಲನೆ ನಡೆದು, ಇಂದ್ರಪ್ರಸ್ಥಪುರಮಂ ಸಾರ್ದು ಆ ಪಟ್ಟಣದಲ್ಲಿ ಅನಿರುದ್ಧನ ಕುಮಾರನಾದ ವಜ್ರಂಗೆ ಪಟ್ಟಾಭಿಷೇಕಂಗೆಯ್ದು, ರಾಜ್ಯಪರಿಪಾಲನೆಯಂ ಮಾಡಿಕೊಂಡಿರು ಎಂದು ನೇಮಿಸಿ, ದಾರುಕನನಲ್ಲಿಯೇ ಇರಿಸಿ ತಾನೊರ್ವನೇ ಇಂದ್ರಪ್ರಸ್ಥಮಂ ಪೊಱಮಟ್ಟು, ಹಸ್ತಿನಾವತಿಗೆ ನಡೆತರುತ, ನಡುಬಟ್ಟೆಯೊಳೊಂದು ವನದಲ್ಲಿ ವೇದವ್ಯಾಸಮುನಿಯಂ ಕಂಡು, ಅವರ ಸಾನಿಧ್ಯದಲ್ಲಿ ವಿನಯದಿಂದ ನಮಸ್ಕರಿಸಿ ನಿಲ್ಲಲಾಗಿ ; ಆ ಮಹರ್ಷಿಯು ಕೇಳಿದನದೆಂತೆನೆ :—

"ಇದೇನು ಈಗ ನೀನು ಈ ರೀತಿಯಲ್ಲಿ ಕಳೆಗುಂದಿದ ಮುಖವುಳ್ಳವನಾಗಿ ದ್ದೀಯೆ ! ಹೀಗಿರಲು ಕಾರಣವೇನು ? ಆಡು, ಕುಱು, ಕತ್ತೆ ಮೊದಲಾದವುಗಳ

ಗೋರಸಿನ ಧೂಳಿಯನ್ನನುಸರಿಸಿ ಅವುಗಳ ಹಿಂದೆ ಪ್ರಯಾಣ ಮಾಡಿದೆಯಾ? ಇಲ್ಲನೆ ಬ್ರಹ್ಮಹತ್ಯೆಯನೆಸಗಿಡೆಯಾ? ಆಶಾಭಂಗದಿಂದ ದುಃಖಿತನಾದ ಮನುಷ್ಯನಂತೆ ಏಕೆ ಕಾಂತಿಗುಂದಿರುವೆ? ವಿವಾಹನಿಮಿತ್ತವಾಗಿಯೂ, ಯಾಗನಿಮಿತ್ತವಾಗಿಯೂ, ಗುರುದಕ್ಷಿಣಾನಿಮಿತ್ತವಾಗಿಯೂ ಪಿತೃಮಾತೃ ಕಾರ್ಯನಿಮಿತ್ತವಾಗಿಯೂ, ಧನವಂ ಬೇಡಲು ಬಂದ ವೇದಪಾರಗನಾದ ಅಕಿಂಚನನಾದ ಬ್ರಾಹ್ಮಣನ ಇಷ್ಟಾರ್ಥವಂ ಪೂರ್ತಿ ಮಾಡಿಕೊಡಲಾಗದೆ ಹಿಂದಕ್ಕೆ ಕಳುಹಿಬಿಟ್ಟೆಯಾ? ಚಂಡಾಲಾದ್ಯಗಮ್ಯ ಜಾತಿ ಸ್ತ್ರೀಯರನ್ನು ಮೋಹಿಸಿ ಅವರೊಡನೆ ರಮಿಸಿದೆಯಾ? ಇಲ್ಲವಾದೊಡೆ ಈ ರೀತಿಯಲ್ಲಿ ಕಾಂತಿರಹಿತನಾಗಿರಲು ಕಾರಣವೇನು? ಬ್ರಾಹ್ಮಣರಿಗೆ ಮೃಷ್ಟಾನ್ನ ವನಿಕ್ಕದೆ ನೀನೊಬ್ಬನೇ ಭುಜಿಸಿದೆಯಾ? ಇಲ್ಲವೆ ಲುಬ್ಧತ್ವದಿಂದ ಪರಧನವನಪಹರಿಸಿ ದೆಯಾ? ಇಲ್ಲವೆ ಮೋಜಿಡ ಗಾಳಿಗೆ ನಿನ್ನ ಶರೀರವನ್ನು ಗೋಚರವಾಗುವಂತೆ ಮಾಡಿದೆಯಾ? ಇಲ್ಲದೊಡೀಪರಿಯೊಳು ಕಾಂತಿಹೀನನಾಗಿರಲೇನು ಕಾರಣವು? ಉಗುರಿನ ನೀರಿನಿಂದಾಗಲಿ ಗಡಿಗೆಯಿಂದ ಮೇಲಕ್ಕೆ ತುಳುಕಿ ಹಾಱಿದ ನೀರಿ ನಿಂದಾಗಲಿ ನೀನು ಆರ್ದ್ರನಾದೆಯಾ? ಅಥವಾ ಯುದ್ಧದಲ್ಲಿ ನಿನಗಿಂತ ಬಲಹೀನ ರಾದ ಹೇಡಿಗಳಿಂದ ಪರಾಜಯವುಂಟಾಯಿತೇ?" ಎಂದು ಕೇಳಲು;

ಅರ್ಜುನನು ದೀನಮಾನಸನಾಗಿ ನಿಟ್ಟುಸಿರುಬಿಡುತ್ತಾ—ಪೂಜ್ಯರೇ. ಸಾವ ಧಾನರಾಗಿ ಕೇಳಬೇಕೆಂದು ಅಱಿಕೆ ಮಾಡಿ, ತನಗೆ ನೀಚರಿಂದುಂಟಾದ ಪರಾಜಯ ವನ್ನು ಯಥಾವತ್ತಾಗಿ ಇಂತು ನಿರೂಪಿಸಿದನು:—ಯಾರು ನಮಗೆ ಬಲವೂ ತೇಜಸ್ಸೂ ಶೌರ್ಯವೂ ಪರಾಕ್ರಮವೂ ಸಂಪತ್ತೂ ಕಾನ್ತಿಯೂ ಒಟ್ಟೇನು ಸರ್ವಸ್ವವೂ ಆಗಿ ಇದ್ದನೋ ಅಂಥ ಶ್ರೀಕೃಷ್ಣಸ್ವಾಮಿ ನಮ್ಮನ್ನು ಬಿಟ್ಟು ಹೊಱಟುಹೋದನು. ಸಕಲಲೋಕಗಳಿಗೂ ಈಶ್ವರನಾದ ಮಹಾಪುರುಷನಾಗಿದ್ದರೂ ಸಾಮಾನ್ಯನಾದ ಮಿತ್ರನಂತೆ ನಮ್ಮೊಡನೆ ಮಂದಹಾಸಯುಕ್ತನಾಗಿ ಸಂಭಾಷಿಸುತ್ತ ನಮ್ಮನ್ನು ರಕ್ಷಿಸುತ್ತಿರ್ದ ಆ ಕೃಷ್ಣಸ್ವಾಮಿ ನಮ್ಮಂ ಬಿಟ್ಟು ಹೊಱಟುಹೋದುದಱಿಂದಲೆ ಈಗ ನಾವು ತೃಣಪ್ರಾಯರಾದೆವು. ನನ ಅಸ್ತ್ರಗಳಿಗೂ ನನ್ನ ಬಾಣಗಳಿಗೂ ನನ್ನ ಗಾಂಡೀವಕ್ಕೂ ನನಗೂ ಸಹ ಸಾರಭೂತನಾಗಿದ್ದ ಆ ಕೃಷ್ಣಸ್ವಾಮಿ ನನ್ನಂ ಪರಿತ್ಯಜಿ ಸಿದುದಱಿಂದ ಈಗ ನಾನು ಅಸಾರಭೂತನಾದೆನು. ಯಾರ ಕಟಾಕ್ಷದಿಂದ ಐಶ್ವರ್ಯವೂ ಜಯವೂ ತೇಜಸ್ಸೂ ಪದವಿಯೂ ನಮ್ಮನ್ನು ಅಗಲದೆ ಇದ್ದುವೋ ಅಂತಹ ಕೃಷ್ಣಸ್ವಾಮಿ ನಮ್ಮನ್ನಗಲಿ ಪೋದನು. ಭೀಷ್ಮದ್ರೋಣ ಕರ್ಣ ದುರ್ಯೋಧ ನಾದಿ ಮಹಾವೀರರು ಯಾರ ಪ್ರಭಾವದಿಂದ ಭಸ್ಮೀಭೂತರಾದರೋ, ಅಂಥ ಶ್ರೀ ಕೃಷ್ಣಸ್ವಾಮಿ ಈ ಲೋಕವಂ ಬಿಟ್ಟು ಹೊಱಟುಹೋದನು. ಆ ಶ್ರೀ ಕೃಷ್ಣ ಸ್ವಾಮಿಯು ಹೊಱಟುಹೋದುದಱಿಂದ ನಾನು ನನ್ನ ಯೌವನದ ಸಾಮರ್ಥ್ಯ ವನ್ನು ಕಳೆದುಕೊಂಡಂತೆ ಈ ಭೂಮಿಯೂ ಕೂಡ ತನ್ನ ಯೌವನವನ್ನೂ ಸಸ್ಯಾದಿ ಪ್ರಸವಸಾಮರ್ಥ್ಯವನ್ನೂ ಕಳೆದುಕೊಂಡು ನನ್ನಂತೆಯೇ ಕಾನ್ತಿಶೂನ್ಯವಾಗಿ ಐಶ್ವರ್ಯ

ರಹಿತವಾಗಿ ಇರುವಂತೆ ತೋರುತಿರುವುದು. ಯಾರ ಪ್ರಭಾವದಿಂದ ಭೀಷ್ಮಾದಿಗಳು ನನ್ನಿಂದ ದೀಪದಲ್ಲಿ ಪತಂಗದ ಹುಳುವಿನಂತೆ ಭಸ್ಮೀಭೂತರಾದರೋ ಅಂಥ ಶ್ರೀ ಕೃಷ್ಣಸ್ವಾಮಿಯಿಲ್ಲದುದರಿಂದ ನಾನೀಗ ಹಸುಮೇಯಿಸುವ ಗೊಲ್ಲರ ದಂಡಪ್ರಹಾರ ದಿಂದ ಪರಾಜಿತನಾದೆನು. ನನ್ನ ಗಾಂಡೀವವೂ ಅವರ ದಂಡಪ್ರಹಾರದಿಂದ ಭಗ್ನ ವಾದುದು. ನನ್ನಂ ರಕ್ಷಕನೆಂದು ನಂಬಿ ನನ್ನೊಡನೆ ಬಂದಿದ್ದ ಅನಾಥರಾದ ಸಾವಿರಾರುಮಂದಿ ಶ್ರೀಕೃಷ್ಣನಂತಃಪುರದ ಸ್ತ್ರೀಯರನ್ನು ಮ್ಲೇಚ್ಛರಿಗೆ ಬಲಾತ್ಕಾರ ದಿಂದ ಎಳೆದುಕೊಂಡು ಹೋಗುವಾಗ ಅಯ್ಯೋ! ನಾನು ಪ್ರಯೋಗಿಸಿದ ಶಸ್ತ್ರಾಸ್ತ್ರ ಗಳೆಲ್ಲವೂ ಆ ಗೊಲ್ಲರ ದೊಣ್ಣೆಗಳ ಹೊಡೆತದಿಂದ ತಿರಸ್ಕೃತವಾದುವು. ಅದರಿಂದ ಆ ಕೃಷ್ಣನಂತಃಪುರದ ಸ್ತ್ರೀಯರೆಲ್ಲರೂ ನನ್ನೆದುರಿಗೆ ಮ್ಲೇಚ್ಛರಿಗೆ ವಶವಾಗಿ ಪೋದರು. ಈ ವಿಧವಾದ ದುರ್ದಶೆಯಲ್ಲಿ ನಾನು ಕಾಂತಿಹೀನನಾಗಿರುವುದೊಂದು ಆಶ್ಚರ್ಯವೆ! ಇನ್ನೂ ನಾನು ಜೀವಿಸಿ ಇರುವುದೇ ಒಂದು ಪರಮಾಶ್ಚರ್ಯವು. ಆದುದರಿಂದ ಪೂಜ್ಯರಾದ ಪಿತಾಮಹರೇ! ತಾವು ಮೇಲೆ ಅಪ್ಪಣೆ ಕೊಡಿಸಿದ ಕಾರಣಗಳಲ್ಲಿ ಅಂತ್ಯವಾದ ನೀಚಪರಾಭವವೇ ನನ್ನ ಕಾಂತಿಹೀನತೆಗೆ ಕಾರಣ ವಾಗಿರುವುದು. ಈ ರೀತಿಯಲ್ಲಿ ನೀಚರಿಂದ ಪರಾಜಿತನಾದರೂ ಲಜ್ಜೆಯಿಲ್ಲದೆ ತಮ್ಮ ಸಂದರ್ಶನಕ್ಕೆ ಬಂದಿರುವ ನನ್ನಂ ರಕ್ಷಿಸಬೇಕು" ಎಂದು ಅರ್ಜುನನು ವೇದ ವ್ಯಾಸರಿಗೆ ವಿಜ್ಞಾಪಿಸಿದನು.

ಕೇಳು ಮೈತ್ರೇಯ! ಆ ಬಳಿಕ ವೇದವ್ಯಾಸ ಮಹಾಮುನಿಗಳು ಅರ್ಜುನನ ಕುರಿತು—"ಎಲೈ ಅರ್ಜುನನೇ! ನೀನೀರೀತಿಯಲ್ಲಿ ಲಜ್ಜೆಯನ್ನೂ ಶೋಕವನ್ನೂ ಅನುಭವಿಸಲು ಏನೂ ಕಾರಣವಿಲ್ಲ. ಸಕಲ ಪ್ರಾಣಿಗಳಿಗೂ ಕಾಲಗತಿಯಿಂದ ಈ ರೀತಿ ವಿಪತ್ತು ಸಂಭವಿಸುವುದು. ಕಾಲವೇ ಭೂತಗಳ ಉತ್ಪತ್ತಿಗೂ ನಾಶಕ್ಕೂ ಕಾರಣವಾದುದು. ಆದುದರಿಂದ ನಿನ್ನೀ ಪರಾಜಯವು ಕಾಲಕೃತವಾದುದೆಂದರಿತು ಸ್ಥಿರಚಿತ್ತನಾಗು. ನದಿಗಳೂ ಸಮುದ್ರಗಳೂ ಪರ್ವತಗಳೂ ಈ ಭೂಮಿಯೂ ದೇವತೆ ಗಳೂ ಮನುಷ್ಯರೂ ಪಶುಗಳೂ ವೃಕ್ಷಗಳೂ ಸರ್ಪಗಳೂ ಸಹ ಕಾಲದಿಂದಲೇ ಸೃಷ್ಟಿ ಸಲ್ಪಡುವುವು; ಕಾಲದಿಂದಲೇ ತಿರಿಗಿ ನಾಶವನ್ನು ಹೊಂದುವುವು. ಆದುದರಿಂದ ಸಕಲವೂ ಕಾಲಾತ್ಮಕವಾದುದೆಂದರಿತು ಶಮವನ್ನೇ ಹೊಂದು. ಗುಣೈಶ್ವರ್ಯ ಪರಿಪೂರ್ಣನಾದ ಕಮಲಲೋಚನನಾದ ಶ್ರೀ ಕೃಷ್ಣನೂ ಕಾಲರೂಪಿಯಾದವನು. ಆ ಶ್ರೀ ಕೃಷ್ಣನ ಮಹಾತ್ಮ್ಯವು ನೀನು ಹೇಗೆ ವರ್ಣಿಸಿದೆಯೋ ಹಾಗೆಯೇ ಇರುವುದು. ಪೂರ್ವದಲ್ಲಿ ಈ ಭೂಮಿಯು ದುರ್ಜನರ ಭಾರವಂ ಸಹಿಸಲಾರದೆ ದೇವತೆಗಳ ಸಭೆಗೆ ಹೋಗಿ ತನ್ನ ದುಃಖವನ್ನು ಹೇಳಿಕೊಳ್ಳಲು ದೇವತೆಗಳಿಂದ ಈ ಸಂಗತಿಯನ್ನು ತಿಳಿದು, ಸರ್ವಜ್ಞನಾದ ಶ್ರೀ ಮಹಾವಿಷ್ಣುವು ಅಭಯವನ್ನಿತ್ತು ಅವರನ್ನು ಕಳುಹಿಬಿಟ್ಟು, ಬಳಿಕ ತಾನು ಭೂಮಿಯೊಳ್ ಕೃಷ್ಣರೂಪದಿಂದವತರಿಸಿ ದುಷ್ಟರಾದ ಜರಾಸಂಧಾದಿ ರಾಜರಂ ಸಂಹರಿಸಿ ವೃಷ್ಣ್ಯಂಧಕಕುಲವನ್ನು ಸಮೂಲ

ವಾಗಿ ನಾಶಮಾಡಿ ಭೂಭಾರವನ್ನಿಳುಹಿ ಕೃತಕೃತ್ಯನಾಗಿ ಸ್ವೇಚ್ಛೆಯಿಂದ ಈಗ ಸ್ವಧಾಮಕ್ಕೆ ತೆರಳಿದನು. ದೇವತೆಗಳಿಗೂ ದೇವತೆಯಾದ ಆ ಶ್ರೀಕೃಷ್ಣನು ಆದಿಯಲ್ಲಿ ಸೃಷ್ಟಿಯನ್ನೂ ಅಂತ್ಯದಲ್ಲಿ ಲಯವನ್ನೂ ಸೃಷ್ಟ್ಯನಂತರದಲ್ಲಿ ಸ್ಥಿತಿಯನ್ನೂ ಮಾಡಲು ಶಕ್ತನಾದುದಱಿಂದ ಈಗ ತಾನು ಬಂದ ಕಾರ್ಯವು ನೆಱವೇಱಲು ಹೊಱಟುಹೋದನು. ಪುರುಷರಿಗೆ ಸಕಲವೂ ಕಾಲಾನುಗುಣವಾಗಿ ಉಂಟಾಗು ವುದು ಸಹಜವಾದುದಱಿಂದ ನೀನೀಗ ನಿನಗುಂಟಾದ ಪರಾಭವಕ್ಕಾಗಿ ದುಃಖ ವನ್ನನುಭವಿಸಬೇಕಾದುದಿಲ್ಲ. ನಿನಗಿಂತ ಬಲಿಷ್ಠರಾದ ಭೀಷ್ಮ ದ್ರೋಣ ಕರ್ಣಾದಿ ಗಳು ಸಕಲರೂ ನಿನ್ನೊಬ್ಬನಿಂದಲೇ ಪರಾಜಿತರಾದುದು ಅವರಿಗೆ ನ್ಯೂನವಾದ ಪರಾಭವವಲ್ಲವೇ! ಆ ಕೃಷ್ಣರೂಪಿಯಾದ ವಿಷ್ಣುವಿನ ಪ್ರಭಾವದಿಂದ ನೀನು ಹೇಗೆ ಭೀಷ್ಮಾದಿಗಳಂ ಗೆದ್ದೆಯೋ ಹಾಗೆಯೇ ಕಾಲರೂಪಿಯಾದ ಆ ವಿಷ್ಣುವಿನ ಪ್ರಭಾವ ದಿಂದ ಮ್ಲೇಚ್ಛರು ನಿನ್ನಂ ಗೆದ್ದರು. ಆ ದೇವದೇವನಾದ ವಿಷ್ಣುವು ಭೂತಗಳ ಶರೀರ ವನ್ನು ಪ್ರವೇಶಿಸಿ ಜಗತ್ತಿನ ಸ್ಥಿತಿಯನ್ನು ಮಾಡುವನು, ಅಂತ್ಯದಲ್ಲಿ ಲಯವನ್ನು ಮಾಡುವನು. ನಿನಗೆ ಐಶ್ವರ್ಯವನ್ನು ಉಂಟುಮಾಡಿಕೊಡುವುದಱಲ್ಲಿ ಹೇಗೆ ಶ್ರೀ ಕೃಷ್ಣನು ಸಹಾಯಕನಾಗಿದ್ದನೋ ಹಾಗೆಯೇ ಈಗ ನಿನ್ನ ಐಶ್ವರ್ಯ ನಾಶದಲ್ಲಿಯೂ ಆ ಕೃಷ್ಣನೇ ಕಾರಣನಾಗಿರುವನು. ಆದುದಱಿಂದ ನಿನ್ನ ಶತ್ರುಗಳೆಲ್ಲರೂ ಆ ಕೃಷ್ಣ ನಿಂದಲೇ ನಾಶಮಾಡಲ್ಪಟ್ಟರು. ಭೀಷ್ಮನ ಸಹಾಯವನ್ನು ಹೊಂದಿ ಇದ್ದ ಕೌರವ ರನ್ನು ನೀನು ಗೆಲ್ಲುವೆಯೆಂದು ಯಾರು ತಿಳಿದಿದ್ದರು? ಹಾಗೆಯೇ ಈಗ ನಿನಗೆ ಮ್ಲೇಚ್ಛರಿಂದ ಪರಾಜಯವುಂಟಾಯಿತೆಂದರೆ ಇದನ್ನು ಯಾರು ನಂಬುವರು? ಆದುದಱಿಂದ ನೀನು ಭೀಷ್ಮಾದಿಗಳನ್ನು ಜಯಿಸಿದುದೂ, ಆ ಗೊಲ್ಲರಿಂದ ನೀನು ಪರಾಜಯವನ್ನು ಹೊಂದಿದುದೂ ಆ ಕೃಷ್ಣನ ಲೀಲಾವಿಜೇಷ್ಟಿತವೇ ಹೊಱತು ಮತ್ತೇನು ಅಲ್ಲವು. ಮತ್ತು ಮ್ಲೇಚ್ಛರ ಪಾಲಾಗಿ ಹೋದ ಯಾವ ಕೃಷ್ಣ ಪತ್ನಿಯ ರನ್ನು ಕುಱಿತು ಈಗ ನೀನು ಶೋಕಿಸುವೆಯೋ ಅವರ ಪೂರ್ವವೃತ್ತಾಂತವನ್ನು ಹೇಳುವೆನು ಕೇಳು. ಪೂರ್ವದಲ್ಲಿ ಅಷ್ಟಾವಕ್ರನೆಂಬ ತಾಪಸನು ಬ್ರಹ್ಮಧ್ಯಾನ ಪರಾಯಣನಾಗಿ ಅನೇಕ ವರ್ಷಗಳು ನೀರಿನಲ್ಲಿ ವಾಸಮಾಡುತ್ತಿದ್ದನು. ದೇವ ಲೋಕದಲ್ಲಿ ದೇವತೆಗಳು ಅಸುರರಂ ಗೆದ್ದ ಸಂತೋಷದಿಂದ ಉತ್ಸವವಂ ಮಾಡ ತೊಡಗಿ ಅಲ್ಲಿಗೆ ಹೋಗುತ್ತಿದ್ದ ರಂಭೆ ತಿಲೋತ್ತಮೆ ಮೊದಲಾದ ಅಪ್ಸರಸ್ತ್ರೀಯರು ಆ ದಾರಿಯಲ್ಲಿ ನೀರಿನಲ್ಲಿ ಆಕಂಠಮಗ್ನನಾಗಿ ತಪಸ್ಸು ಮಾಡುತ್ತಿದ್ದ ಅಷ್ಟಾವಕ್ರನಂ ಕಂಡು ವಿನಯದಿಂ ನಮಸ್ಕರಿಸಿ ಸ್ತೋತ್ರಮಾಡಲಾಗಿ, ಆ ಸ್ತೋತ್ರದಿಂ ಸಂತುಷ್ಟ ನಾದ ಅಷ್ಟಾವಕ್ರನು—"ಎಲೆ ಸ್ತ್ರೀಯರೇ! ನಿಮಗೆ ನಾನು ಪ್ರಸನ್ನನಾದೆನು. ಬೇಕಾದ ವರವಂ ಬೇಡಿರಿ" ಎನ್ನಲು; ರಂಭೆ ತಿಲೋತ್ತಮೆ ಮೊದಲಾದ ಕೆಲವರು—"ಎಲೈ ಮುನಿಸತ್ತಮನೆ! ನೀನು ಪ್ರಸನ್ನನಾದ ಬಳಿಕ ನಮಗೇನು ಕೊಱತೆ?" ಎಂದರು. ಮತ್ತೆ ಕೆಲವರು—"ಎಲೈ ಮಹಾಮುನಿಯೇ! ನೀನೆಮಗೆ

ಪ್ರಸನ್ನನಾದೊಡೆ ಸಾಕ್ಷಾದ್ವಿಷ್ಣುವು ನಮಗೆ ಪತಿಯಾಗುವಂತೆ ಅನುಗ್ರಹಮಾಡು" ಎಂದರು. ಅದಕ್ಕೆ ಹಾಗೆಯೇ ಆಗುವುದೆಂದು ಹೇಳಿ ಆತನು ನೀರಿನಿಂದೆದ್ದುಬಂದ ಬಳಿಕ ಆ ಮುನಿಯ ವಕ್ರರೂಪವಂ ನೋಡಿ ಕೆಲವು ಅಪ್ಸರಸ್ತ್ರೀಯರು ಗಹಗಹಿಸಿ ನಗಲು; ಅಷ್ಟಾವಕ್ರಮುನಿಗೆ ಅತಿ ಕೋಪಬಂದು, "ನನ್ನ ಅನುಗ್ರಹದಿಂದ ನೀವು ಪುರುಷೋತ್ತಮನನ್ನು ಪತಿಯಾಗಿ ಹೊಂದುವಿರಿ. ನನ್ನ ವಕ್ರರೂಪವನ್ನು ನೋಡಿ ನನ್ನಂ ಹಾಸ್ಯಮಾಡಿದುದಱಿಂದ ನೀವು ಮ್ಲೇಚ್ಛರಿಂದ ಅಪಹೃತರಾಗುವಿರಿ" ಎಂದು ಆ ಮಹಾಮುನಿ ಶಪಿಸಿದನು. ಈ ರೀತಿಯಲ್ಲಿ ಆ ದೇವಾಂಗನೆಯರು ಅಷ್ಟಾವಕ್ರನ ವರದಿಂದ ಪುರುಷೋತ್ತಮನಂ ಪತಿಯಾಗಿ ಹೊಂದಿ, ಬಳಿಕ ಅವನ ಶಾಪದಿಂ ದಸ್ಯುಗಳ ಹಸ್ತವನ್ನೇಱಿದರು. ಆದುದಱಿಂದ ನೀನೀವಿಚಾರದಲ್ಲಿ ಕೊಂಚವೂ ಶೋಕಿಸ ಕೆಲಸವಿಲ್ಲ. ಈ ರೀತಿಯಲ್ಲಿ ಕಾಲರೂಪಿಯಾದ ಆ ಕೃಷ್ಣನು ಭೂಭಾರಾವತರಣಾರ್ಥವಾಗಿ ಅವತರಿಸಿ, ಸಕಲ ದುಷ್ಟ ರಾಕ್ಷಸರನ್ನು ನಿಗ್ರಹಿಸಿ, ವೃಷ್ಣ್ಯಂಧಕ ಕುಲವಂ ಸಮೂಲವಾಗಿ ನಾಶಮಾಡಿ, ನಿಮ್ಮನ್ನೂ ನಾಶಮಾಡುವ ನಿಮಿತ್ತದಿಂದಲೇ ಈಗ ನಿಮ್ಮ ಬಲಶಕ್ತಿತೇಜೋವೀರ್ಯ ಮಹಾತ್ಮ್ಯಗಳನ್ನು ಧ್ವಂಸ ಮಾಡಿರುವನು. ಆದುದಱಿಂದ ಹುಟ್ಟಿದವನಿಗೆ ಸಾವೂ, ಉನ್ನತಸ್ಥಿತಿಯಲ್ಲಿರುವ ವನಿಗೆ ಅಧಃಪತನವೂ, ಅನ್ಯೋನ್ಯಸಂಯುಕ್ತಗಳಾದ ವಸ್ತುಗಳಿಗೆ ಪರಸ್ಪರ ವಿಯೋಗವೂ, ಸಂಚಿತ ಧನಕ್ಕೆ ನಾಶವೂ ಸ್ವಭಾವಸಿದ್ಧವಾದುದೆಂದು ಅಱಿತು ವಿದ್ವಾಂಸರು ಶೋಕಹರ್ಷಗಳಂ ಹೊಂದದೆ ಇರುವರು. ಆದಕಾರಣ ನೀನಿದ ನ್ನೆಲ್ಲವನ್ನು ಅಣ್ಣನಾದ ಯುಧಿಷ್ಠಿರನಲ್ಲಿ ತಿಳಿಸಿ, ನಾಳೆಯೇ ಭ್ರಾತೃಸಮೇತನಾಗಿ ತಪವನ್ನಾಚರಿಸಲು ವನಕ್ಕೆ ಹೋಗು" ಎಂದು ವೇದವ್ಯಾಸಮುನಿಯು ಅರ್ಜುನನಿಗೆ ಪೇಳಿದರು.

ಅದಂ ಕೇಳಿ ಧನಂಜಯನು ತಾನು ನೋಡಿದುದನ್ನೂ ಅನುಭವಿಸಿದುದನ್ನೂ ವೇದವ್ಯಾಸಮುನಿಯಿಂ ಕೇಳಿದುದೆಲ್ಲವನ್ನೂ ತನ್ನ ಸಹೋದರರಿಗೆ ತಿಳಿಸಿದನು.

ಆ ಬಳಿಕ ಪಾಂಡುಪುತ್ರರೆಲ್ಲರೂ ಅರ್ಜುನನಿಂದುಕ್ತವಾದ ವೇದವ್ಯಾಸ ವಚನಮಂ ಕೇಳಿ, ಪರೀಕ್ಷಿತನನ್ನು ರಾಜ್ಯದಲ್ಲಿ ಪಟ್ಟಾಭಿಷಿಕ್ತನಂ ಮಾಡಿ, ತಪೋ ವನಕ್ಕೆ ತೆರಳಿದರು.

ಪೂರ್ವದಲ್ಲಿ ಆದಿನಾರಾಯಣನು ಕ್ಷೀರಾಬ್ಧಿ ಮಧ್ಯದಲ್ಲಿ, ಆ ಶ್ವೇತದ್ವೀಪ ಮಧ್ಯದಲ್ಲಿ, ಬ್ರಹ್ಮಾನಂದ ವನದಲ್ಲಿ, ಮಂದಾರಭೂಜದ ಸಮೀಪದಲ್ಲಿ ನಿರ್ಮಿತವಾದ ದೇದೀಪ್ಯಮಾನವಾಗಿ ದರುಶನಮನೋಹರವಾಗಿ ವಿರಾಜಿಸುವಂಥಾ ದಿವ್ಯ ಕೇಳೀ ವನದಲ್ಲಿ ಏಕಾಂತದಲ್ಲಿ ಲಕ್ಷ್ಮೀದೇವಿಯರ ಕೂಡೆ ಸರಸಸಲ್ಲಾಪದಿಂದಾ ಪರಮಾನಂದದಲ್ಲಿ ಕ್ರೀಡಿಸುತ್ತಿದ್ದ ಸಮಯದಲ್ಲಿ ಪರಮ ವೈಷ್ಣವ ಶಿರೋಮಣಿ ವೈಷ್ಣವ ಮತೋದ್ಧಾರಕನು ಸಕಲ ಸುರಾಸುರ ನರೋರಗಾದಿ ಸಮಸ್ತ ಜೀವನಸ್ವರೂಪನೂ ದ್ವಿತೀಯ ಬ್ರಹ್ಮನಾಗಿ ಇದ್ದಂಥಾ ವಾಯುದೇವರು ಸ್ವಾಮಿಯ ಸೇವಾನಿಮಿತ್ತವಾಗಿ ಗೋಪುರ ಪ್ರಕಾರ ನಗರಂಗಳನು ಕಳಿದು ಸಾಮಿಪ್ಯದಲ್ಲಿಯಿರುವ ಆಸ್ಥಾನ ಮಂಟಪವನು ಕಳಿದು ವಳಗಣ ಅಂತಃಪುರದ ದ್ವಾರದ ಬಳಿಗೆ ಬಂದು ಒಳಹೊಕ್ಕು ಹೋಗಬೇಕೆಂದು ಉದ್ಯೋಗಿಸಿಯಿರಲಾಗಿ ಅಲ್ಲಿ ಕ್ಷೀರಸಾಗರವೆ ಬಂದು ಮೂರ್ತಿವತ್ತಾಗಿ ಅನಂತ ಫಣಾಮಣಿಗಳ ದಿವ್ಯ ತೇಜಸ್ಸುಗಳಿಂದ ಇಲ್ಲಿ ನಿಂತಿತೊಯೆಂಬ ವಿತರಣದಿಂ ಶುಭ್ರಾಕಾರದಿಂ ದ್ವಿಸಹಸ್ರ ಜಿಹ್ವೆಗಳನು ಪ್ರತ್ಯೇಕಫಣಾಮುಖದಿಂದಾ ಚರಿಸುತ್ತ ಆ ದ್ವಾರದಲ್ಲಿ ಇದ್ದು ತನ್ನ ಸಮಾನವಾದ ಏಕಾಂತ ಭಕ್ತರು ಆರೂಯಿಲ್ಲ. ತಾನೆ ಶ್ರೇಷ್ಠನು ಸ್ವಾಮಿಗೆ ತನ್ನ ಮೇಲೆ ಇದ್ದಷ್ಟು ಕೃಪಾಕಟಾಕ್ಷ ಮತ್ತಾರ ಮೇಲೂ ಇಲ್ಲಾ ಶ್ರೀದೇವಿ ಭೂದೇವಿಯರ ಕೂಡಣ ಏಕಾಂತ ಕೇಳಿಯಲ್ಲಾದರು ತಾನು ಹಾಸಿಕೆಯಾಗಿ ಇಹಂಥಾವನುಯೆಂದು ಬಹು ಅಹಂಕಾರಿಸಿ ಮಹಾಶೇಷನು ರತ್ನನಿರ್ಮಿತವಾದ ಬೆತ್ತವನ್ನು ಹಿಡಿದುಕೊಂಡು ಬಾಗಿಲಲ್ಲಿ ನಿಂತಿರ್ದು ಈ ಹೊಕ್ಕುಬಾಹಂಥಾ ವಾಯುದೇವರ ಕಂಡು ಸ್ವಾಮಿ ಏಕಾಂತ ಕೇಳಿಯಲ್ಲಿ ಆಧಾರೆ. ಹೊಕ್ಕುಹೊಕ್ಕು ಹೋಹದಕ್ಕೆ ಸಮಯವಿಲ್ಲ, ನಿಲ್ಲೂ ಎಂದು ಬಾಗಿಲಿಗೆ ಕೋಲನು ಅಡ್ಡಹಾಕಿ ತಡೆಯಲಾಗಿ ವಾಯುದೇವರು ರೋಷಮುಖನಾಗಿ ತನಗೆ ತಡೆಯುಂಟೆ? ತಾನು ಸ್ವಾಮಿಯ ಏಕಾಂತ ಭಕ್ತನು. ಲಕ್ಷ್ಮೀಸಮೇತನಾಗಿ ಇದ್ದ ಸಮಯದಲ್ಲಿ ತನಗೆ ತಡೆಯಿಲ್ಲ. ಸದಾ ಸಮಿಪವರ್ತಿಯಾಗಿ ಇಹಂಥಾವನೂ ಎಂಥಾ ಏಕಾಂತ ಸಮಯದಲ್ಲೂ ಹಿಂಪಕ್ಕೆ ಜಯವಿಜಯರೂ ಬಾಗಿಲಲ್ಲಿ ಇಹರು ತನ್ನನೂ ಎಂದೂ ತಡೆಯಲಿಲ್ಲಾ. ಸ್ವಾಮಿಯು ಇದೇ ರೀತಿಯಲ್ಲಿ ಸಲಿಗೆಯ ಪಾಲಿಸಿ ಕಟಾಕ್ಷಿಸಿಕ್ಕೊಂಡು ಬರುತ್ತಾ ಆಧಾರೆ. ಶ್ರೀದೇವಿ ಭೂದೇವಿಯರ ಕೂಡಣ ರತಿಕೇಳೀ ಶ್ರಮವನು ಶೈತ್ಯ ಸೌರಭ್ಯ ಮಾಂದ್ಯಗಳಿಂದ ಬಳಲಿಕೆಯ ಪರಿಹರವಂ ಮಾಡುವಂಥಾವನು ತನ್ನನು ತಡೆಯಬಹುದೆ ಎಂದು ಆಗ್ರಹಿಸಿಕೊಳ್ಳಲಾಗಿ ಅದಕ್ಕೆ ಮಹಾಶೇಷನು ಸದಾ ಶಯ್ಯಾತಲ್ಪನಾಗಿ ಇಹಂಥಾವನು ತಾನು ಸಹವಾಗಿಯು ಹೊರಟು ಬಂದು ಬಾಗಿಲಲ್ಲಿ ಇಥೇನೆ. ನಿಮ್ಮಂಥಾವರೆಲ್ಲಾ ಹೊಕ್ಕು ಹೋದೇನೆಂಬುದು ಆಶ್ಚರವಲ್ಲವೆ? ತಿರುಗಿ ಹೋಗೂ ಎಂದು ನಿಷ್ಠುರೋಕ್ತಿಯಿಂದ ಮಾತ

ನಾಡಲಾಗಿ ಅದಕ್ಕೆ ವಾಯುದೇವರು ಶಯ್ಯಾ ಮಾತ್ರವಾಗಿ ಹೊರಗೆಯಿಹಂಥಾ ವನಿಗೆ ಇಷ್ಟು ಸಲಿಗೆಯುಂಟಂತೆ? ಸ್ವಾಮಿಯ ಅಂತರಂಗದಲ್ಲಿ ಪ್ರಾಣಾಪಾನಾದಿ ಪಂಚಸ್ವರೂಪದಲ್ಲಿ ದೇಹದೊಳಗೆ ನಿರಂತರದಲ್ಲಿ ಇಹಂಥಾ ತನಗೆ ನೀನು ಸರಿಯೆ ನೀನು ನನ್ನ ತಡವ ಪಾಟಿ ಸಮರ್ಥನೆ? ನಿನ್ನ ನನ್ನ ಅಭ್ಯಂತರವ ಈ ಸನಕಾದಿ ನಾರದಾದಿಗಳು ಈ ಮಂಟಪದಲ್ಲಿ ಸ್ವಾಮಿಯ ಸಮಯದಲ್ಲಿ ಕಾದುಕೊಂಡಿಹ ಅನೇಕ ಬಹ್ಮ ರುದ್ರಾದಿಗಳು ವಿಶ್ವಕ್ಸೇನರು ಗರುಡಾದಿಗಳು ಎಲ್ಲರು ಕಂಡೆ ಅಥಾರೆ ನೀನು ತನ್ನ ಕೂಡೆ ಇದಿರುವಾದಿಸುವ ಸಮರ್ಥನೆ? ನಿನ್ನ ಮಾತೇನು? ನಿನ್ನ ಗುರುತ ನಾದರು ಬಲ್ಲೆಯೇನೆಂದು ಬಹು ಮರ್ಮೋದ್ಘಾಟನವಾಗಿಆಡಲಾಗಿ ಅದಕ್ಕೆ ಮಹಾ ಶೇಷನು ತನ್ನ ಸಹಸ್ರಮುಖಗಳಿಂದಲು ವಿಷಜ್ವಾಲೆಗಳ ವಿಸ್ಫುಲಿಂಗಗಳ ಹೊರ ಸೂಸಕವಾಗಿ ರೋಷ ಕರಾಳಮುಖನಾಗಿ ನಿಶ್ವಾಸಗಳಿಂದ ಕಾಲಕೂಟ ಮಹಾ ಗರಳವನ್ನೆ ಸೂಸುತ್ತಾ ಎಲೊ ವಾಯುವೆ, ನೀನು ತನ್ನ ಧಿಕ್ಕರಿಸುವವನೆ? ನಿನ್ನನು ತನ್ನ ಸ್ವರೂಪವಾಗಿ ಇದ್ದ ಚತುರ್ದಶ ಭುವನಂಗಳಲ್ಲಿ ಇದ್ದ ಅಖಿಳವಾಯುಗಳ ನೆಲ್ಲವ ಈ ಕ್ಷಣದಲ್ಲಿ ಪಾನವ ಮಾಡಿ ನಿನ್ನ ರೂಹಿಲ್ಲಾಯೆನ್ನಿಸಿಕೊಟ್ಟೇನು. ತನ್ನ ವಿಕ್ರಮವ ನೀನರಿಯಾ ನಿನ್ನ ನೀನು ಅರಿತು ಮಾತನಾಡಿಕೊಳ್ಳಬೇಡವೆ? ಸುಮ್ಮನೆ ತಿರುಗಿಹೋಗು ಇನ್ನು ಇಲ್ಲಿನಿಂತು ಹೆಚ್ಚು ಮಾತನಾಡಿವಾಗಲೆ ಈ ಕ್ಷಣದಲ್ಲೆ ನಿನ್ನ ಆಹಾರವಾಗಿ ತೆಗೆದುಕೊಳ್ಳುತ್ತಾಯಿಥೇನೆ ಎಂದು ಕಟುಭಾಷೆಗಳನಾಡಲಾಗಿ ಅದನ್ನು ಕೇಳಿ ವಾಯುದೇವರು ಅತ್ಯಂತ ಕೋಪಾನ್ವಿತನಾಗಿ ಎಲೆ ಮರುಳೆ ನಿನ್ನ ಜಾತಿಯಲ್ಲಾ ವಕ್ರಪ್ರಚಾರಿಗಳು. ಮುಖವೆಲ್ಲಾ ವಿಷಾಗ್ನಿ ಜ್ವಾಲಾಯುಕ್ತರು. ಲೋಕಕೆ ಸರ್ವಕಂಟಕರು. ದುಶ್ಶೀಲರು. ನಿಮ್ಮ ಕಂಡವರೆಲ್ಲಾ ಕೊಲ್ಲಬೇಕೆಂದು ಲೋಕವೆಲ್ಲಾ ಅಂಗೀಕರಿಸುತಿದೆಯಲ್ಲದೆ ಇಂಥಾ ಶಾಂತಚಿತ್ತವುಳ್ಳ ವಿರಾಗಿಗ ಳಾದವರು ನಿಮ್ಮ ಜೀವದಾಸೆಯ ಬಿಟ್ಟು ನಿಮಗೆ ಉಪಕಾರವನಮಾಡಬೇಕೆಂಬವ ರಿಲ್ಲಾ. ಅಂಥಾ ದುರ್ಮದಾಂಧರು. ನೀವು ನಿನ್ನವಳಗೆ ಇದ್ದ ತನ್ನ ವಾಯುವನು ತಾನು ತೆಗೆದರೆ ನೀನು ಚರಿಸುವ ಬಗೆ ಹ್ಯಾಗೆ? ದ್ವಿಸಹಸ್ರಜಿಹ್ವನಾದ ವಾಚಾಳಿಕ ತನ್ನ ಕೂಡೆ ಕೊಳ್ಳದು ಸಕಲಜೀವಿಗಳಿಗೂ ತಾನು ಆಧಾರಭೂತನು ತನ್ನ ಕೂಡೆ ಸೆಣಸುವರೆ ನೀನು ಎಷ್ಟರವನು? ಕಡೆಗೆ ಸಾರೆಂದು ಘರ್ಜಿಸಲಾಗಿ, ಮಹಾಶೇಷನಗೆ ಮತ್ತೆಯು ಕೋಪವಿಮ್ಮಡಿಸಿ ಎಲೆ ಪವಮಾನ! ಸಪ್ತದ್ವೀಪ ಸಪ್ತಸಾಗರ ಮೇರು ಮೊದಲಾದ ಮಹಾಕುಲ ಪರ್ವತಂಗಳು ಸಹಿತವಾದ ಈ ಪಂಚಾಶತ್ಕೋಟಿ ಭೂಮಂಡವನೆಲ್ಲಾ ತನ್ನ ಸಹಸ್ರ ಫಣಾಮಣಿಯಿಂದಾ ಅಣುಮಾತ್ರವಾಗಿ ಧರಿಸಿ ದೇನೆ. ಅಂಥಾ ತನ್ನ ಕೂಡೆ ನೀನು ಪ್ರತಿಭಟಿಸುವವನೆ ಕೆಲಸಾರೆಂದು ಬಹು ಕಠಿಣೋಕ್ತಿಗಳಿಂದ ಇರುವ ಸಮಯದಲ್ಲಿ ಲಕ್ಷ್ಮೀರಮಣನು ಇವರ ಸಂವಾದ ವೆಲ್ಲಾ ಕೇಳುತ್ತಾಯಿದ್ದು ಮಂದಹಾಸದಿಂದಾ ಕದಲಿದ ನವರತ್ನಮಯ ಕಿರೀಟ ವನು ಸರಿಸವಾಗಿಯಿಟ್ಟು ಕಿರುಬೆಮರು ಮುಖದಿಂದಾ ಪೀತಾಂಬರವನು ಸುತ್ತಿ

ಕೊಳ್ಳುತ ದಿವ್ಯಪರಿಮಳ ಭುಗಿಲಿಡುತಾ ದವಡೆಗೊತ್ತಿದ ವೀಳಯದಿಂದಾ ಕೆದರಿದ ನಿಡುಗುರುಳುಗಳಿಂದಾ ಪೀತಾಂಬರದ ವಲ್ಲಿವಾಟಿಂದಾ ಲಕ್ಷ್ಮೀದೇವಿಯರ ಕೈಲಾಗುಗಳಿಂದಾ ರತ್ನಮಯ ಪಾದುಕೆಗಳಲ್ಲಿ ಶ್ರೀಪಾದಪದ್ಮವನ್ನಿಟ್ಟು ಮಂದ ಗಮನದಿಂದ ಬಾಗಿಲಿಗೆ ಪೊರಮಟ್ಟು ಬಿಜಯಂಗೈದು ಶೇಷನ ಅಹಂಕಾರವ ತಗ್ಗಿಸಬೇಕೆಂಬುದನು ಚಿತ್ತದಲ್ಲಿಯಿಟ್ಟು ವಾಯುದೇವರಿಗೆ ಕಣ್ಣುಸನ್ನೆಯ ಮಾಡ ಲಾಗಿ ವಾಯುಶೇಷರು ಯಿತ್ತಂಡವು ಸ್ವಾಮಿಗೆ ಸಾಷ್ಟಾಂಗವೆಱಗಿ ದಂಡಪ್ರಣಾ ಮಮಂ ಮಾಡಿ ತಮ್ಮ ತಮ್ಮ ವಾಗ್ವಾದಗಳನು ಬಿನ್ನಹಂ ಮಾಡಿ, ಎಲೆ ದೇವ ದೇವೋತ್ತಮ ದೇವಶಿಖಾಮಣಿಯೆ ತಮ್ಮ ಇತ್ತಂಡದವರ ಶಕ್ತಿಸಾಮರ್ಥಿಕೆಗಳ ದೇವರು ಪರಿವೀಕ್ಷಿಸಿ ಚಿತ್ತೈಸಬೇಕು. ತಾನು ಪೋಗಿ ಕನಕಾಚಲವ ಸುತ್ತಿಕೊಂಡು ಯಿದ್ದೇನು. ಈ ವಾಯು ಸಮರ್ಥನಾದರೆ ತನ್ನನು ಹಾಱಿಸಿ ಎತ್ತಿದರೆ ತಾನು ಸೋತೆನು, ಎತ್ತಲಾರದೆ ಇದ್ದರೆ ವಾಯುದೇವರು ಸೋತನು. ಇದು ಪ್ರತಿಜ್ಞೆ ಎನ್ನಲಾಗಿ ಎಲೊ ಶೇಷನೆ ತನ್ನ ಸಮರ್ಥಿಕೆಯ ನೀನೆ ನೋಡಿ ನಿನ್ನನು ಮಹಾ ಮೇರು ಮೊದಲಾದ ಕುಲಪರ್ವತಂಗಳನು ಭೂಮಿಯನು ಯಿಷ್ಟನು ನಿಮಿಷಕೆ ಹಾರಿಸೇನು ನೋಡು ಎಂದು ಪಂಥವನಾಡಿಕೊಳ್ಳಲಾಗಿ ಸ್ವಾಮಿಯು ನಿಮ್ಮ ನಿಮ್ಮ ಸಮರ್ಥಿಕೆಗಳ ತೋರಿಹೋಗಿಯೆಂದು ಅಪ್ಪಣೆಯಂ ಪಾಲಿಸಲಾಗಿ ನಮಸ್ಕರಿಸಿ ಸ್ವಾಮಿಯಂ ಬೀಳ್ಕೊಂಡು ಅಲ್ಲಿಂದಾ ಈ ಕರ್ತರು ಹೊರಟು ಬಂದು ಜಂಬುದ್ವೀಪ ಮಧ್ಯರಂಗದಲ್ಲಿ ಇದ್ದ ಮಹಾ ಮೇರುವೆಯ ಸಮೀ ಪಕ್ಕೆ ಬಂದು ಮೇರುವಿನ ಶೃಂಗದಲ್ಲಿ ವಿಹರಿಸುತಿರ್ದ ಮೇರುವಿನ ಕುಮಾರ ವೆಂಕಟಾಚಲವನ್ನು ಮಹಾಶೇಷನು ಏಳು ಸುತ್ತಾಗಿ ಸುತ್ತಿಕೊಂಡು ಭೂಮಿಗೂ ಮಹಾ ಮೇರುವಿಗೂ ತನಗೂ ಕೂಡ ಏಕರೂಪಾಗಿ ಸಪ್ತವಾಯುಗಳು ವೊಂದಾಗಿ ಬೀಸಿದರೂ ಅಣುಮಾತ್ರಾ ಕದಲದ ಹಾಗೆ ತನ್ನ ಸರ್ವಶಕ್ತಿಯಿಂದಲು ಬಲಿದು ಎತ್ತಿದರೆ ಮೇರು ಭೂಮಿ ಸಾಗರಗಳೆಲ್ಲ ಕೂಡೆ ಎಳಬೇಕು ಎಂಬ ಹಾಗೆ ಸರ್ವ ಸಾಹಸದಲ್ಲಿ ಸುತ್ತಿಕೊಂಡು ಯಿರಲಾಗಿ ವಾಯುದೇವರು ಆರವ್ಯಾಲೆ ಯಿಂದಾ ಒಂದು ವಾಯುವಂ ಕಳುಹಲಾಗಿ ಆ ವಾಯುವನು ಶೇಷದೇವರು ನುಂಗಿ ಗಹಗಹಿಸಿ ಆರ್ಭಟಿಸುತ್ತಾ ಇರಲಾಗಿ ಮತ್ತೆ ಕೆಲವು ವಾಯುಗಳು ಆರವ್ಯಾಲೆಯಲ್ಲಿ ಜಂಝಾನಿಲ ಮೊದಲಾಗಿ ಇದ್ದ ವಾಯುಗಳ ಕಳಹಲಾಗಿ ಆ ವಾಯುಗಳನ್ನೆಲ್ಲಾ ತನ್ನ ಸಹಸ್ರ ಫಣಾಮುಖದಿಂದ ಪಾನವ ಮಾಡಿ ಶರೀರ ಉಬ್ಬಿ ಶಕ್ತಿ ಹೆಚ್ಚಿ ಭುಜ ಗಳನಾಸ್ಫೋಟಿಸಿ ಹಾಸ್ಯವ ಮಾಡಿ ನಗುತಿರ್ದ ಶೇಷನ ಕಂಡು ವಾಯುದೇವರು ಈತನ ಅಹಂಕಾರವ ಮುರಿಯಬೇಕೆಂದು ಸ್ವಾಮಿಯು ನಿರೂಪವಿದ್ದುದನು ನೆನೆದು ಸಪ್ತವಾಯುಗಳಿಂದಾ ಸರ್ವಶಕ್ತಿಗಳಿಂದಾ ಬೀಸಿಯೆತ್ತಿದರೆ ಭೂಮಿ ಮೇರು ಕುಲಗಿರಿ ಗಳು ಸಪ್ತಸಾಗರ ಸಪ್ತದ್ವೀಪಗಳೆಲ್ಲಾ ತಳಕೆಳಕಾಗಲಾಗಿ ತ್ರಿಭುವನಗಳು ಕೆಟ್ಟು ಹೋದಾವು. ಆತನ ಮಾತ್ರವೆ ಹಾರಿಸೇನು ಎಂದು ಲೀಲಾಮಾತ್ರದಿಂದಲ್ಲಿಯೂ

ಅಂಗುಷ್ಠದಲ್ಲಿ ಮೀಟಿತ್ತಿ ಬೀಸಲಾಗಿ ಆ ವೆಂಕಟಾಚಲವನು ಸುತ್ತಿಕೊಂಡು ಇದ್ದ ಮಹಾಶೇಷ ಸಹ ಗಗನಮಾರ್ಗಕ್ಕೆ ಸೂರ್ಯಮಂಡಲ ಪರ್ಯಂತರ ಎತ್ತಿಕೊಂಡು ಹೋಗುತಿರಲಾಗಿ ಆ ಮೇರು ಈ ವಾಯುದೇವರು ಇದ್ದ ಸಮೀಪಕ್ಕೆ ಬಂದು ನಮಸ್ಕರಿಸಿ ಎಲೆ ಜಗದಾಧಾರ ಸಮಸ್ತ, ಜೀವನ ಪ್ರಾಣಸ್ವರೂಪ! ದಯಾಪರ ಮೂರ್ತಿ, ವಿಷ್ಣುಭಕ್ತಶಿರೋಮಣಿ, ಏಕಾಂತ ಭಕ್ತ, ಅಗ್ರಗಣ್ಯಾ ನಿನಗೆ ಸಮಾನ ವಾದ ಭಕ್ತರುಂಟೆ? ಲೋಕವೆಲ್ಲಾ ನಿನ್ನ ಆಧಾರದಲ್ಲಿ ಇದೆ ನೀ ಹೊರತಾದರೆ ಲೋಕಕ್ಕೆ ಚೈತನ್ಯವೇ ಇಲ್ಲಾ. ಬಯಲಹಂಕಾರದಲ್ಲಿ ನಿನ್ನ ಕೂಡೆ ಪ್ರತಿಭಟಿಸಿ ಶೇಷನು ಪರಾಭವನಾದನು. ತನ್ನ ಮಗ ನಿಮಗೆ ಅಪರಾಧಿಯಲ್ಲಾ. ತನ್ನ ಮಗನ ಸಲಹಬೇಕೆಂದು ಕಡುದೈನ್ಯದಿಂದಾ ಬೇಡಿಕೊಳ್ಳಲಾಗಿ ವಾಯುದೇವರು ಸುಪ್ರಸನ್ನ ನಾಗಿ ವೆಂಕಟಗಿರಿಯ ನೋಯದ ಹಾಗೆ ಸುತ್ತಿಕೊಂಡಿರ್ದ ಶೇಷ ಸಹವಾಗಿ ಅಲ್ಲಿ ಯಿಂದಾ ಇತ್ತ ದಕ್ಷಿಣಕ್ಕೆ ಐವತ್ತು ಸಾವಿರ ಯೋಜನದಲ್ಲಿ, ದಕ್ಷಿಣ ಸಮುದ್ರಕ್ಕೆ ಮೂವತ್ತೆರಡು ಯೋಜನದಲ್ಲಿ, ಸುವರ್ಣ ಮುಖರಿಯ ನದಿಯ ಸಮೀಪದಲ್ಲಿ ತಂದು ಇಳುಹಿದನು. ಆಗ ಸಮಸ್ತ ದೇವತೆಗಳೆಲ್ಲಾ ವಾಯುದೇವರ ಸ್ತೋತ್ರವಂ ಮಾಡಿ ಪುಷ್ಪವೃಷ್ಟಿಯ ಸುರಿದು ವಾಯುದೇವರ ಪಂಥವೇ ಸಂದಿತು ಎಂದು ಸ್ವಾಮಿಗೆ ಬಿನ್ನಹಂ ಮಾಡಿದರು. ಆ ವೆಂಕಟಾಚಲವು ಮೇರುವಿನ ಸಮೀಪದ ಜಂಬೂದ್ವೀಪ ದಿಂದಾ ಬಂದು ಇಲ್ಲಿ ನಿಂತ ಕಥಾ ವೃತ್ತಾಂತವಿದೀಗಾ ಆ ಮಹಿಮೆಯಲಾಮಹಾ ಶೇಷನು ಅಹಂಕಾರ ತಗ್ಗಿ ಮಹಾದೂರ ಹೊತ್ತು ತಂದು ಬಿಸುಟ್ಟುದರಿಂದ ವೆಂಕಟಾ ಚಲವ ಸುತ್ತಿಕೊಂಡು ಅದ್ದನಾದ ಕಾರಣ ಭೂಮಿಯು ಶೈಲದ ನಡುವಕ್ಕೆ ಶರೀರ ಬೆಂದು ಲಿಬಿಲಿಬಿಯಾಗಿ ನೊಂದು ಶಕ್ತಿಗುಂದಿ ತನ್ನ ಪಂಥ ಈಡೇರಿಸುದಿಲ್ಲ ವೆಂಬ ಖೇದದಿಂದಾ ಬಹು ವಿಚಾರಪರನಾಗಿ ಇನ್ನು ಆವ ಮುಖವ ಕೊಂಡು ಸ್ವಾಮಿಯ ಓಲಗಕ್ಕೆ ಹೋದೇನು ಎಂದು ಬಹು ಚಿಂತಾಕ್ರಾಂತನಾಗಿ ಆಹಾರ ಗಳನ್ನು ಬಿಟ್ಟು ಈ ಸ್ಥಳದಲ್ಲಿಯೇ ಕುಳಿತು ಉಗ್ರ ತಪಸ್ಸುಮಾಡಿ ಸ್ವಾಮಿಯ ಮೆಚ್ಚಿಸಿ ಮನೋಭೀಷ್ಟವನ್ನು ಪಡೆದೇನು ಎಂದು ದೃಢೀಕರಿಸಿ ಕನಕನಗಕ್ಕೆ ಸುತ್ತಿ ಯಿದ್ದ ಶರೀರವನು ತೆಗೆದು ಅಲ್ಲಿಯೇ ಒಂದು ಪುಷ್ಕರಿಣಿಯ ತೀರದಲ್ಲಿ ಕುಳಿತು ಯಮನಿಯಮ ಧ್ಯಾಸನಗಳಿಂದಾ ನಿರಶನ ವ್ರತದಲ್ಲಿ ಅನೇಕ ವತ್ಸರಂಗಳು ಉಗ್ರ ತಪಸ್ಸು ಮಾಡುತ್ತಾ ಇರಲಾಗಿ ವೈಕುಂಠಪತಿಗೆ ಭಕ್ತರ ಮೇಲೆ ಬಹಳ ಕೃಪಾ ಕಟಾಕ್ಷವನಿಕ್ಕಿ ಲಕ್ಷ್ಮೀದೇವಿಯರು ಸಹಿತ ಗರುಡಾರೂಢನಾಗಿ ಸಮಸ್ತ ದೇವತೆಗಳು ಬ್ರಹ್ಮರುದ್ರಾದಿಗಡಣದಿಂದಾ ಬಂದು ವೆಂಕಟಾಚಲದಲ್ಲಿ ತಪಸ್ಸು ಮಾಡುತ್ತಿದ್ದ ಶೇಷನ ಮುಂದೆ ಪ್ರಸನ್ನನಾಗಿ ನಿಲ್ಲಲಾಗಿ ಶೇಷನು ಎದ್ದು ನಿಂದು ಸಾಷ್ಟಾಂಗ ಧಂಡ ಪ್ರಣಾಮಮಂ ಮಾಡಿ ಎಲೆ ವಿಶ್ವನಾಟಕ ಸೂತ್ರಧಾರನೆ! ಬಹುಕಾಲ ನಿಮ್ಮ ಚರಣಾರವಿಂದದ ಸೇವೆಯಿಲ್ಲದೆ ಇದ್ದೆನು. ಇಂದು ಶ್ರೀಪಾದ ದರುಶನದಿಂದಾ ಕೃತಾರ್ಥನಾದೆನು. ತನ್ನ ಬಳಲಿಕೆಯೆಲ್ಲಾ ಹೋಯಿತು. ವಜ್ರಕಾಯನಾದೆನು

ತ್ರಾಹಿ ಜನಾರ್ದನ, ಜಗತ್ಪತಿ ಭಕ್ತಜನ, ಕಾಮಧೇನು, ಪಾಲಿಸು ಎಂದು ಕೈಮುಗಿದು ಸ್ತೋತ್ರವಂ ಮಾಡುತ್ತಾ ಇರಲಾಗಿ ಸ್ವಾಮಿಯು ಅತಿ ಕಾರುಣ್ಯ ದೃಷ್ಟಿಯಿಂದಾ ಭಕ್ತನ ಮೈದಡಹಿ ಬಹಳ ಬಳಲಿದೆಯಲ್ಲಾ ಮಗನೆ ಎಂದು ಉಪಲಾಲಿಸಿ ನಿನ್ನ ಮನಸ್ಸಿನ ಅಭೀಷ್ಟವೇನು ಕೇಳಿಕೊ ಪಾಲಿಸೇವು ಎಂದು ನೆತ್ತಿಯ ಮೇಲೆ ಅಭಯ ಹಸ್ತವನಿಡಲಾಗಿ, ಎಲೆ ಆದಿಪುರುಷನೆ ನೀವು ಪಾಲಿಸಿದ ಭಾಗ್ಯ ಒಂದರಲ್ಲಿಯೂ ಕಡಮೆ ಇಲ್ಲ ಸಕಲವೂ ಇದೆ. ತಾನು ವೆಂಕಟಾಚಲವ ಕೂಡಿ ಬಂದು ಇಲ್ಲಿ ನಿಂತೆವು ಆದು ಕಾರಣ ತಾನು ಶೈಲರೂಪವಾಗಿ ಇದ್ದೇನು. ದೇವರು ಲಕ್ಷ್ಮೀದೇವಿಯರು ಸಹಾ ಬಂದು ಒಂದು ಕಲ್ಪ ಈ ಗಿರಿಯಲ್ಲಿ ನಿಂತು ಭಕ್ತರಿಗೆ ಕಾಮಿತಾರ್ಥಗಳ ಪಾಲಿಸುತ್ತಾ ಇಲ್ಲಿ ಸ್ಥಿರವಾಗಿ ಇರಬೇಕು ಈ ವರವ ಕರುಣಿಸಬೇಕು ಎಂದು ಬಿನ್ನಹಂ ಮಾಡಲಾಗಿ ಸ್ವಾಮಿಯು ಆ ವೆಂಕಟಾಚಲದ ಸೌಂದರ್ಯವನು ಕಾಂಚನ ಮಯವಾಗಿ ಥಳಥಳಿಸುವ ತೇಜಸ್ಸನು ಅಲ್ಲಿ ಇದ್ದ ಪುಷ್ಕರಗಳನೂ, ವನಗಳನೂ ಪುಣ್ಯ ಪಕ್ಷಿ ಮೃಗಾದಿಗಳೂ ಕಂಡು ಅತಿ ರಮ್ಯವಾಗಿ ತಮ್ಮ ಚಿತ್ತಾಭಿರಾಮವಾಗಿ ಶೋಭಿಸುತ್ತಾ ಇದ್ದುದನು ಕಂಡು ಚಿತ್ತದಲ್ಲಿ ಇದು ತಮ್ಮಲ್ಲಿ ಹಾರೈಕೆ, ಮನೋಹರವಾಗಿ ಇದ್ದ ಸ್ಥಳವೆಂದು ಚಿತ್ತದಲ್ಲಿಟ್ಟು ಇದ್ದ ಹಾಗೆ ಶೇಷನು ಆ ದೇವರ ಬೇಡಿಕೊಳ್ಳಲಾಗಿ ಸ್ವಾಮಿಯೂ ಚಿತ್ತಕೆ ತಂದು ನೀನು ಬೇಡಿಕೊಂಡ ಹಾಗೆ ಈ ಗಿರಿಯು ನಿನ್ನ ಹೆಸರಿನಲ್ಲಿ ನಿನ್ನ ಸ್ವರೂಪದಲ್ಲಿ ತಾವು ಒಂದು ಕಲ್ಪ ಇಲ್ಲಿಗೆ ಬಂದು ವಿಹರಿಸೇವು ಎಂದು ವರವನು ಪಾಲಿಸಿ ಅಂತರ್ಧಾನವಾದರು. ಈ ಶೇಷನು ಅಲ್ಲಿ ಗಿರಿಯ ರೂಪದಲ್ಲಿ ಇರಲಾಗಿ ಶೇಷಾಚಲವೆನಿಸಿತ್ತು. ಆ ಗಿರಿಯಲ್ಲಿ ಅನೇಕವಾದ ಪುಷ್ಕರಣಿಗಳು ರಾಜಿಸುತಾ ಇದ್ದುದರಿಂದ ಪುಷ್ಕರಾದ್ರಿಯೆನಿಸಿತ್ತು. ಬಹು ಪುಣ್ಯ ತೀರ್ಥಗಳು ಇದ್ದುದರಿಂದ ತೀರ್ಥಾಚಲವೆನಿಸಿತ್ತು. ಅಲ್ಲಿ ಸಕಲ ಮುನೀಶ್ವರರಿಗೆ ಭಕ್ತರಿಗೆ ಶ್ರೀನಿವಾಸ ಸ್ವಾಮಿಯು ನಿಜರೂಪದಲ್ಲಿ ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳುತಾ ಭಕ್ತರ ಇಷ್ಟಾರ್ಥಗಳ ಪಾಲಿಸುತ ನಿಜರೂಪದಲ್ಲಿ ವಿಹರಿಸುತಾ ಇದ್ದನಾದ ಕಾರಣ ಶ್ರೀನಿವಾಸಾದ್ರಿಯೆನಿಸಿತ್ತು. ಪೂರ್ವದಲ್ಲಿ ಹಿರಣ್ಯಕಶ್ಯಪುವಿನ ಸಹೋದರನು ಭೂಮಿಗೆ ಭಾರಕನಾದ ಹಿರಣ್ಯಾಕ್ಷನು ರಸಾತಳಕ್ಕೆ ಕೊಂಡುಹೋಗಿ ಲೋಕವನೆಲ್ಲಾ ಬಾಧಿಸುತಾ ಇರಲಾಗಿ ಆಗ ಅಲ್ಲಿ ಆದಿವರಾಹಾವತಾರವನು ಧರಿಸಿ ಹಿರಣ್ಯಾಕ್ಷನ ಸೀಳಿ ಭೂಮಿಯನು ವಾಮಪಾದಾಂಗುಷ್ಠದ ನಖಾಗ್ರದಿಂದಾ ಉದ್ಧರಿಸಿಯೆತ್ತಿ ಭೂಮಿಯ ಪ್ರತಿಷ್ಠೆಯ ಮಾಡಿ ಆ ಭೂದೇವಿಯರು ಸಹಾ ಸ್ವಾಮಿ ಪುಷ್ಕರಣಿಯ ಪಶ್ಚಿಮದಲ್ಲಿ ಸಾಕ್ಷಾತ್ಕಾರವಾಗಿ ವಿಹರಿಸುತ ಇದ್ದ ಕಾರಣದಿಂದಾ ವರಾಹಾದ್ರಿಯೆನಿಸಿತ್ತು. ಮತ್ತಂ ಶ್ರೀವೈಕುಂಠದಲ್ಲಿ ವಿಹರಿಸುವ ಕ್ರೀಡಾಚಲವನು ಗರುಡನ ಕಳುಹಿ ತರಿಸಿ ಈ ಗಿರಿಯಲ್ಲಿ ಇಟ್ಟಿದ್ದ ಕಾರಣದಿಂದಾ ವೈಕುಂಠಾಚಲ ವೆನಿಸಿತ್ತು.

[ತಿರುಮಲರಾಯಂ] ತನ್ನರಮನೆಗೆ ಅಭಿಮುಖವಾಗೆ ರಾಜನೃಪನ ಕೈವಾರಿ
ಗಳ್ಕೈಯೆತ್ತಿ "ಸ್ವಸ್ತಿ ಸಮಸ್ತ ಸಾಮಂತ ಮಹಾ ಮಹೀಪಾಲ ಮೌಲಿ ಮಾಲಾ
ಲಾಲಿತ ಪದರಾಜೀವ ರಾಜೀವ ಸಖಗರ್ವ್ವ ನಿರ್ವ್ವಾಣ ಜಣಪ್ರತಾಪೋದಯ
ದಯಾರಸ ತರಂಗಾಪಾಂಗಾಯತ ಲೋಚನಾಲೋಕನಾಪ್ಯಾಯಿತ ಕರ್ನ್ನಾಟ
ಮಂಡಲಾಗ್ರ ಖಂಡಿತಾರಾತಿ ನೃಪ ಕಂಠ ಕಾಂಡೋಚ್ಚಲದ್ರಕ್ತಧಾರಾ ಪರಿಮೃಷ್ಟ
ತದೀಯಬಿರುದೆಂತೆಂಬರ ಗಂಡ ರಾಜನೃಪ ವಿಜಯೀಭವ ದಿಗ್ವಿಜಯೀಭವ" ಯೆಂದು
ಪೊಗಳ್ವುದಂ ತಾನುಂ ಎಲ್ಲರುಂ ಕೇಳಿ ಪ್ರೇರಿಸೆ ಮುಂಗಾರ ಮೊಳಗಂ ಕೇಳ್ದ
ಕೇಸರಿಯಂತೆ ಕನಲ್ದು ಕಾಲೋಚಿತಮಲ್ಲೆಂದು ತನ್ನ ಕೆಲದೊಳು ಇರ್ಪ್ಪ ಮಂತ್ರಿ
ಯೊರ್ವ್ವರಂ ಕರೆದು ನೀನು ರಾಜನೃಪನೆಡೆಗೆಯ್ದಿ ಆತನ ಮನಂ ಕದಡದಂತೆ ಬಿರು
ದೆಂತೆಂಬರ ಗಂಡನೆಂಬಿದೊಂದು ಬಿರಿದಂ ನಮ್ಮ ಮುಂದೆ ಪೊಗಳದಂತೆ ಪೇಳ್ವುದೆಂದು
ಕಳುಹಿಸಲವನೆಯ್ದಿ ಬಂದು ಕೆಯ್ಮುಗಿದು ದೇವದೇವರೊಡೆಯರೆಮ್ಮಾಳ್ದರೆಡೆಯೊಳು
ಸ್ನೇಹಮೆರಕವಾಗಿರ್ಪ್ಪುದದರೊಳೇನಾನುಂ ನ್ಯೂಣೆಯಮನೂಹಿಸಲ್ ಕಾದಿಪ್ಪರ
ದರಿಂ ಬಿರಿದೆಂತೆಂಬರ ಗಂಡನೆಂಬೀ ಬಿರಿದು ದೇವರ ವಂಶಪರಂಪರೆಯೊಳು
ನಮ್ಮಾಳ್ದರ ಪರಂಪರೆಯೊಳು ಬಂದುದನೀರ್ವ್ವರುಮಿಪ್ಪೆಡೆಯೊಳು ಪೇಳಸಲ್ಲ
ದೆಂದೆಮ್ಮ ಕೈವಾರಿಗಳ್ಗೆ ಕಟ್ಟಲೆಯಾಯ್ತು ದೇವರ ಬಗೆಯ ವರ್ಗಮಂತು ನಿರವಿ
ಸಲ್ಕೆ ಪೇಳ್ಕುಮೆಂದು ಬಿನ್ನವಿಸಲು ರಾಜನೃಪಂ ತನ್ನೊಡವುಟ್ಟಿದವನ ಮೊಗಮಂ
ನಿಟ್ಟಿಸಲಾದೇವರಾಜಂ ನಿಯೋಗಿಯಂ ನೋಡಿಯೊಂದಾಗಿ ಬಿನ್ನವಿಸಿದುದು ಸಹಜ
ಮಾದೊಡಂ ನಿಮ್ಮರಸರ್ಗ್ಗೆ ಕೈವಾರಿಗಳಂ ಬಂದುದರಿಂ ಬೇಡೆಂದೊಡೆ ಬಿಟ್ಟರು
ನಮ್ಮ ಪಿರಿಯರಿಂ ಬಂದು ನೆಗಳ್ದುದಾದುದರಿಂ ಕೈವಾರಿಗಳುಂ ಬಿಡುವರಲ್ಲೆಮ್ಮ
ಮುತ್ತೈಯಂ ಬೆಟ್ಟದ ಚಾಮರಾಜನ ಮನ್ನಣೆಯ ತುಳಿಲಾಳ್ಗಳು ಕಳಲೆಯ ನಂಜ
ಶೆಟ್ಟಿಯು ನಂಜನಗೂಡ ಜಾತ್ರೆಯೊಳೆ ನೆರೆದ ಪಲಂಬರ್ಪ್ರಭುಗಳ ಮುಂದುಗ್ಘಡಿ
ಸುವ ಪಲವು ಬಿರಿದುಗಳುಂ ಸೈರಿಸದೆ ಪಲವು ಪಜ್ಜೆಗಳನೊಳಕೊಂಬ ಆನೆಯ ಪಜ್ಜೆ
ಯಂತೆಯುಂ ಪಲವು ತೊರೆಗಳನೊಳಕೊಳ್ವ ಮುನ್ನೀರಂತೆಯುಂ ಪಲವು ಬಿರಿದ
ನೊಳಗೊಳ್ವ ಬಿರುದೆಂತೆಂಬರ ಗಂಡನೆಂಬಿದಂ ಮಹಿಸೂರ ರಾಜನ ಮುಂದೆ ತಾಂ
ಬಲಗೆಯ್ಯೊಳ್ ಪಿಡಿದ ಕಠಾರಿಯಂದೆಡೆಗೈಯ್ಯೊಳಂ ಗಡಿಯ ಮಾನಮುಂ ಪಿಡಿದು
ಗ್ಘಡಿಪುದುಮಲ್ಲಿ ನೆರೆದ ಪ್ರಭುಗಳೆಲ್ಲಮೊಗ್ಗಾಗಿ ತಮ್ಮ ದಳದೊಳವಂ ಸುತ್ತ
ಮುತ್ತುವಿನಂ ಮಿಗವಿಂಡಿಂಗೆ ಪುಲಿಯುಂ ಗಿಳಿವಿಂಡಿಂಗೆ ಗಿಡಗನು ಕುರಿವಿಂಡಿಂಗೆ
ತೋಳನುಂ ಪೊಕ್ಕಂತೆ ಪಾಯ್ದೆಲ್ಲರವಕ್ಕಲಿಕ್ಕಿ ಗೆಲ್ದುದರಿಂ ಪ್ರಭುಗಳು ಮಹಿಸೂರ
ವಂಗೀ ಬಿರಿದು ಸಲ್ವುದೆಂದುಗ್ಘಡಿಪ್ಪುದೆಂದು ವೀಳೆಯಮುಂ ಕೊಟ್ಟು ಕಳುಹಿಸ
ಲದರಿಂ ಕೈವಾರಿಗಳಂ ಬಿಡಿಸಲಾಗದೆಂದು ಪೇಳ್ವುದುಮಾ ವಾರ್ತೆಯಂ ರಾಯಂ

ಗರಿಪೆ ಅಕ್ಕಟಾ ಕೂಗಿ ಮಾರಿಯಂ ಕರೆದಂತಾಯ್ತೆಂದು ಎಲ್ಲಱಂ ಬರಿಸಿ ಇನ್ನೀ
ತಂಗೆ ಪಿಂದೆಗೆಯದೆ ಸೆರೆಗೊಂಡು ಕಡೆಗಾಣಿಪುದೆ ಕಜ ಮೆಂದು ಮರುವಗಲ್ಪೊತ್ತಾರೆ
ವೈಯ್ಯಾಳಿಯ ಬಯಲೊಳಿನಿಸಿರ್ದ್ದು ಬರ್ಪ್ಪು ನೀಮುಂ ರಂಗನಾಥನ ಸನ್ನಿಧಿಗೆಯ್ದಿ
ಸಂದರ್ಶನಂಗೆಯ್ದು ವಂದಿಪುದೆಂದು ಪೇಳಿ ತಾಂ ಪೊಱವಳೆಯದೆ ಮಂಡಪದೊಳಿರ್ದೆ
ಲ್ಲರಂ ಬರಿಸಿ ಪುಸಿ ವಿನೆಯದಿಂ ಮಹಿಸೂರವನಂ ಪುಗಿಸಿರ್ಪ್ಪನಾತನಂ ಸೆರೆಗೊಳಲ್ಕಿದು
ವೇಳೆಯೆಂದು ಮೇಳ್ಕೈಸುತಿರ್ಪ್ಪನಮಿತ್ತ ರಾಜನೃಪಂ ಕಾವೇರಿಯೊಳ್ ಸ್ನಾನಂ
ಗೆಯ್ದು ವಸ್ತ್ರ ಮಾಲ್ಯಾದಿಗಳಿಂ ಅಲಂಕರಿಸಿ ನಿತ್ಯದಾನಂಗೊಟ್ಟು ರಂಗನಾಥನ
ಸಂದರ್ಶನಂಗೆಯ್ದು ವಂದಿಸಿ ತೀರ್ಥ ಪ್ರಸಾದಂಗೊಳ್ವನಿತಕ್ಕೆ ಪರಿಕಾರನೊರ್ವನೈ
ತಂದು ಕಿವಿಯೊಳಾ ಪ್ರಪಂಚಮನೊರೆಯಲಾಕ್ಷಣದೊಳೆ ತನ್ನ ಬಲಂ ಬೆರಸು
ಪೋಪಾಗಲೆಡಬಲದೊಳಿರ್ದ ದಳಮಂ ಲೆಕ್ಕಿಸದೆ ಪೊಳೆಯಂ ದಾಂಟಲಿತ್ತಲ್ತಿರು
ಮಲರಾಯಂ ರಾಜನೃಪಂ ಮೀರಿ ಪೋದಂ ಬಲ್ಲಿದನೊಳ್ವೈರಂ ಬೆಳೆದುದಿನ್ನು
ಪೇಕ್ಷಿಸಲಾಗದೆಂದು ನೆರೆದೆಲ್ಲಾ ಪ್ರಭುಗಳ ಕರೆದು ಮಹಿಸೂರಿಗೆ ಮುತ್ತಿಗೆಯ
ನಿಡಲ್ಪೋಗಿಮೆನೆಯವರ್ಕ್ಕೈಮುಗಿದೆಂದರ್ಮ್ಮನ್ನೊಮೆ ಪಿರಿ ಅರಸಂ ರಾಮ
ರಾಜ ನಮ್ಮೆಲ್ಲರೊಡಗೊಂಡು ಮುತ್ತಿ ಮೂರು ತಿಂಗಳ್ವರಂ ಇರಲಾ ಮೈಸೂರ
ಚಾಮರಾಜನೆಸಗಿದುಪಟಳಮನೆಷ್ಟೆಂದು ಪೇಳಬಹುದು ಪಾಳೆಯಕ್ಕೆ ಬಪ್ಪ ಸಕಲ
ವಸ್ತುಗಳುಂ ನಿಲಿಸಲೊಂದೆರಲ್ಮೂರುಪವಾಸಮಿರ್ದು ಪೋಪುದಕ್ಕೆ ದಾರಿಯಿಲ್ಲದೆ
ನಟ್ಟಿರುಳೊಳೋಡಿ ಬಪ್ಪಾಗಳ್ದಾರಿಯೊಳಡ್ಡಗಟ್ಟಿ ಕೆಲವಾನೆ ಕುದುರೆ ಕೈದುಗಳಂ
ಸೆಳೆದುಕೊಂಡು ತಲೆಯನರಿದು ಮೂಗಂ ಕೊಯ್ದು ಕಳುಪಿದರಲ್ಲದೆಯುವರಟ್ಟ
ಳಿಯಿಂ ಪಟ್ಟಣದೊಳ್ಪದುಳಿಲ್ಲದೆ ಮೈಸೂರವರೊಳು ಸ್ನೇಹಂ ಬೆಳಸಿ ಕಾಲ್ವೆಯ
ಕೊತ್ತಾಗಾರಮಂ ಕೊಟ್ಟರದರಿಂದೀಗಳು ಮೈಸೂರ ಮುತ್ತುವುದು ಮೋಸವೆಂದು
ಮೊದಲೊಳ್ಕೆಸರೆಯಂ ಮುತ್ತಿ ನೋಳ್ಪವೆಂದು ತಾವರೆಗೆ ಮಂಜು ಮುಸುಕುವಂತೆ
ಮುತ್ತಿ ಪಾಳೆಯಮನಿಳಿದು ತಳಿವೇರುವೆಯನೊಡರ್ಚ್ಚುತಿರ್ಪ್ಪುದುಮಲ್ಲಿದ್ದ ಚಾಮ
ರಾಜ ಜನ ರಾಜಕರ್ಣ್ಣಿಂಟಿ ಕೊತ್ತಳಮಂ ಬಲಿವಾಳ್ವೇರಿ ಮುಗಿಲಟ್ಟಣೆಗಳನೇರಿ
ಕಾದುತ್ತಿ ಕತ್ತಲೆಯೊಳ್ಪೊರಮಟ್ಟು ಪಾಳೆಯಮಂ ದಳದುಳವಾಯ್ದು ಪೊಯ್ವಾನೆ
ಕುದುರೆಗಳಾನೊಯ್ವುದಂ ಮರುವಗಲ್ಪೊತ್ತಾರೆ ಕವಿದೊತ್ತರಿಸಿ ಮೇಲ್ವಾಯುವ
ಗುಂಡುಗಳ ಮರೆಕೊಂಡು ಸಗ್ಗವನೇಱುವ ಅಲ್ಪಪುಣ್ಯರಂತೆ ಕೋಂಟೆಯನೇಱು
ತಿಪ್ಪರಂ ಕಡೆಗೋಲ್ಗಳಿಂ ನೂಂಕಿ ಕೈಯಿಟ್ಟಿಗಳಿಂದಿಟ್ಟು ಕಾಯಿದ ಗಂಜಿ ಎಣ್ಣೆ
ಹುರಿದ ಮಳಲುಮಮಂ ಸೂಸಿ ಮದ್ದನುರಿಯಂ ಸೂರ್ಜಿ ಕವಣೆಗಲ್ಗಳಂ ಬೀರಿ ಕಣೆ
ಗಳಿಂದೆಚ್ಚಿ ಕತ್ತಿಗಳಿಂ ಕವಿದು ಕೆಡಪುತ್ತಿರ್ದೊಡಂ ಕಿಚ್ಚಿಂಗೆ ಪೆರೆಸಾರ್ವ ಮೃಗದಂತೆ
ಪೆರಸಾರ್ವರಂ ಕಂಡು ಮಾಣದೆ ಮಿತಿಮೀರುತ್ತಿರ್ದ್ದಪರೆಂಬುದಂ ದೂತರ್ಮ್ಮುಖ
ದಿಂ ಕೇಳ್ದು ರಾಜನೃಪಂ ಮೂಲಬಲಂ ಬೆರಸು ಕಿಚ್ಚುಂ ಗಾಳಿಯುಂ ಕೂಡಿಯೊಣ
ಗಿದ ಪಳುವಂ ಪುಗುವಂತೆ ದೇವರಾಜನೊಡಗೂಡಿ ಅವರ ತೆಂಕಣ ಪಡುವಣ

ಪಾಳ್ಯಮಂ ಪೊಕ್ಕೊಕ್ಕಲಿಕ್ಕಿ ತರಿದಿರಿದು ಗಾಳಿಯ ಸೊಡರಂತಾಗೆಯುಮವರೊಳ್ ಮರೆವೊಕ್ಕರಂ ಕಾಯ್ದುಪ್ಪುಡೆಂದವರಂ ಪುತ್ತವೇರಿದರಂ ಪುಲ್ಗರ್ಚಿದರಂ ನೀರೊಕ್ಕರಂ ಮರನನಡರ್ದರಂ ಓಡಿದರಂ ಕೈದುಬಿಟ್ಟರಂ ತಲೆಗಾಯ್ದು ಮನ್ನಿಸಿ ಮಿಕ್ಕರ'ಸೊಕ್ಕ ನಡಂಗಿಸಿ ಸರ್ವ್ವಸ್ವಮಂ ಕೊಂಡು ಬರ್ಪಿನಂ ತೆಂಕಲ್ ಪಡುವಲ್ವುಳಿದು ಮೂಡಲು ಬಡಗಲಿರ್ದರಂ ಚಾಮರಾಜ ಚನ್ನರಾಜರ್ಸ್ಸದೆವಟ್ಟೆ ಬಪ್ಪಲ್ಲಿ ಅಣ್ಣಂದಿರಂ ಕಂಡೆರಗಿ ಬರ್ಪಿನಂ ಪಟಣಮಂ ಬಿಟ್ಟು ಪೊರಗಿರ್ದ್ದ ತಿರುಮಲರಾಜನಂ ಕಂಡಟ್ಟು ವುದುಮಳವಿಂಗಳ್ಕಿ ರಾಜಚಿಸ್ನೆಯನುಳಿದು ಗರಿ ಮೂಡಿದ ಪುಲ್ಲೆಯಂತೋಡಿ ವೇಷಮಂ ಮಾಚಿ ಮರೆಗೊಂಬುದು ನಾಲ್ವರು ಮೈಸೂರ್ಗೆ ಬಂದರ್.

"ಕೇಳು ಎಲೈ ರಾಯನೆ, ಈ ರೀತಿಯಿಂದ ಆ ಮೂರುಮಂದಿ ಮಹಾ ರಥಿಕರೂ ಆಚಿಗೆ ಹೋದರು; ಆ ಬಳಿಕ ದುರ್ಯೋಧನನು ಇರುವ ತಾವಿಗೆ ಬಂದು ಧರ್ಮರಾಯನು ಕೃಷ್ಣ ಸ್ವಾಮಿಯನ್ನು ನೋಡಿ 'ಎಲೈ ಕೃಷ್ಣನೆ, ದುರ್ಯೋಧನನ ಮಾಯೆಯಿಂದ ಸ್ತಂಭಿತವಾದ ದ್ವೈಪಾಯನ ಸರಸ್ಸನ್ನು ನೋಡು; ಸ್ವಭಾವ ವಂಚಕನಾದ ಈ ದುರಾತ್ಮಕನು ಮನುಷ್ಯರ ದೆಸೆಯಿಂದ ಭಯವಿಲ್ಲದಿರುವ ರೀತಿಗೆ ತನ್ನ ಮಾಯಾಬಲದಿಂದ ಈ ಮಹಾ ತಟಾಕದಲ್ಲಿ ನಿದ್ದೆ ಹೋಗುತ್ತಲಿದ್ದಾನೆ; ಈ ಕ್ರೂರಕರ್ಮನನ್ನು ಪ್ರಾಣಗಳೊಡನೆ ಬಿಡತಕ್ಕಂಥಾದ್ದಲ್ಲ; ಈತನಿಗೆ ಇಂದ್ರನು ಸಹಾಯನಾಗಿ ಬಂದು ನಿಂತರೂ ನಾನು ಯುದ್ಧದಲ್ಲಿ ಸಂಹರಿಸದೇ ಬಿಡುವದಿಲ್ಲ' ಅಂದನು.

"ವಾಸುದೇವನು ಆತನನ್ನು ಕುರಿತು 'ಎಲೈ ಧರ್ಮರಾಯನೆ, ಈತನು ಮಾಯಾಬಲವನ್ನು ತಿಳಿದವನಾದ್ದರಿಂದ ಮಾಯೆಯಿಂದಲೇ ವಧ್ಯನಾಗುವನು; ನೀನು ಈ ಸರೋವರದಲ್ಲಿ ಒಂದು ಕಪಟೋಪಾಯ ಮಾಡಿ ಸುಯೋಧನನನ್ನು ಸಂಹರಿಸು; ಮೊದಲು ಇಂದ್ರನು ವಂಚನೋಪಾಯದಿಂದಲೇ ಅಲ್ಲವೆ ದೈತ್ಯದಾನವರನ್ನು ಸಂಹರಿಸಿದನು; ಮಹಾನುಭಾವನಾದ ವಿಷ್ಣುವು ವಂಚನೆಯಿಂದಲೇ ಬಲಿ ಬಂಧನವನ್ನು ಮಾಡಿದನು; ಹಿರಣ್ಯಾಕ್ಷ ಹಿರಣ್ಯಕಶಿಪು ವೃತ್ರಾಸುರರೂ ಕೃತ್ರಿಮೋಪಾಯದಿಂದಲೇ ಹತರಾದರೆಂದು ಕೇಳಿದ್ದೇವೆ; ರಾವಣಾಸುರನೂ ಮಾಯಾವಶದಿಂದಲೇ ಅಲ್ಲವೆ ರಾಘವನಿಂದ ಬಂಧುಜನಸಮೇತನಾಗಿ ಹತವಾಗಿ ಭೂಮಿಯಲ್ಲಿ ಬಿದ್ದನು; ನರಕಾಸುರನೂ ನನ್ನಿಂದ ಯುದ್ಧದಲ್ಲಿ ವಧಿಸಲ್ಪಟ್ಟನು; ಅದನ್ನು ಬಲ್ಲೆಯಷ್ಟೆ; ವಿಪ್ರಚಿತ್ತಿಯೆಂಬ ದಾನವನು, ಇಲ್ವಲವಾತಾಪಿಗಳು, ತ್ರಿಶಿರಸ್ಸು, ತಾರಕಾಕ್ಷನು, ಅಂಧಕಾಸುರನು, ಸುಂದೋಪಸುಂದರೂ ಕಪಟೋಪಾಯದಿಂದಲೇ ಪಂಚತ್ವವನ್ನೈದಿದರು; ಮಹೇಂದ್ರನು ಇಂಥಾ ಕಪಟವಧದಿಂದಲೇ ಅಲ್ಲವೆ ಸ್ವರ್ಗವನ್ನು ಪರಿಪಾಲಿಸುತ್ತಲಿದ್ದಾನೆ; ಮಿಕ್ಕಾದ ರಾಕ್ಷಸರೂ ಅನೇಕರಾದ ರಾಜಕುಮಾರಕರೂ ಉಪಾಯಗಳಿಂದಲೆ ಆಪಾಯವನ್ನು ಐದಿದರಾದ್ದರಿಂದ ನೀನೂ ಒಂದು ಉಪಾಯಬಲದಿಂದ ಈತನನ್ನು ಸಂಹರಿಸು' ಅಂದನು.

"ಆ ಬಳಿಕ ಅಜಾತಶತ್ರುವು ಉದಕಮಧ್ಯದಲ್ಲಿ ಅಡಗಿಕೊಂಡಿದ್ದ ನಿನ್ನ ಮಗನನ್ನು ಕುರಿತು ನಸುನಗುತ 'ಎಲೈ ಸುಯೋಧನನೆ, ಸಕಲ ರಾಜಸಮೂಹವನ್ನೂ ಕೌರವಕುಲವನ್ನೂ ನೀನು ದುರ್ನಯದಿಂದ ನಿರವಶೇಷವಾಗಿ ಹತಮಾಡಿ ಪ್ರಾಣಗಳಿಗೆ ಆಶೆಪಟ್ಟು ಈ ಮಹಾ ಸರಸ್ಸಿನಲ್ಲಿ ಯಾಕೆ ಮುಳುಗಿದ್ದಿ! ನಿನ್ನ ದುರಭಿಮಾನವೂ ಗರ್ವವೂ ಈಹೊತ್ತು ಎಲ್ಲಿ ಅಡಗಿದವು! ಜನರೆಲ್ಲರೂ ನಿನ್ನನ್ನು ಶೂರಶ್ರೇಷ್ಠನೆಂದು ಹೊಗಳುತಲಿರಲು ಅವರ ವಚನಗಳನ್ನು ವ್ಯರ್ಥಮಾಡಿ ಭಯ

ದಿಂದ ಹೀಗೆ ಅಡಗಿಕೊಂಡಿರಬಹುದೆ! ಕ್ಷತ್ರಿಯ ಕುಲದಲ್ಲಿ ಹುಟ್ಟಿದಂಥಾವನು ಯುದ್ಧಭೂಮಿಯನ್ನು ಬಿಟ್ಟು ತೊಲಗುವನೆ; ವಿಶೇಷವಾಗಿ ಲೋಕಪ್ರಸಿದ್ಧವಾದ ಕೌರವಕುಲದಲ್ಲಿ ಹುಟ್ಟಿದಂಥಾ ನಿನಗೆ ಯುದ್ಧದಲ್ಲಿ ಇಂಥಾ ಹೇಡಿತನವು ಎಲ್ಲಿ ಪ್ರಾಪ್ತವಾಯಿತು! ಯುದ್ಧಕ್ಕೆ ಭಯಪಡುವ ರಾಜಪುತ್ರನುಂಟೆ! ಕ್ಷುದ್ರಜನ ಸೇವಿತ ವಾಗಿ ಸ್ವರ್ಗಸುಖ ವಿಘಾತವಾದಂಥಾ ಪಲಾಯನಕ್ಕೆ ಒಡಂಬಟ್ಟು, ಯುದ್ಧದ ಕಡೆಯನ್ನು ಕಾಣಲಾರದೆ, ಪುತ್ರಮಿತ್ರ ಸಹೋದರ ಬಾಂಧವ ಸಂಬಂಧಿ ಪಿತೃಜನ ಗಳನ್ನೂ ನಿರ್ನಿಮಿತ್ತವಾಗಿ ಮೃತ್ಯುಮಂದಿರಕ್ಕೆ ಕಳುಹಿಸಿ, ಲೋಕದಲ್ಲಿರುವ ಜನ ಗಳು ನಿಂದಿಸಲು ಈ ಸರಸ್ಸಿನಲ್ಲಿ ಮುಳುಗಿರುವೆಯಾದ್ದರಿಂದ ಶೂರನೆಂಬ ಹೆಸರು ಮಾತ್ರವೇ ಹೊರತಾಗಿ ನಿನಗೆ ಸ್ವಭಾವ ಸಿದ್ಧವಾದ ಶೂರಧರ್ಮವಿಲ್ಲವೆಂಬುವದು ಈ ಹೊತ್ತು ತಿಳಿಯಲ್ಪಟ್ಟಿತು; ವೈರಿಗಳನ್ನು ನೋಡಿ ಯುದ್ಧಕ್ಕೆ ದೂರವಾಗಿ ತೊಲಗುವದು ಕ್ಷತ್ರಧರ್ಮವಲ್ಲವಾದ್ದರಿಂದ ಯಾವ ಧರ್ಮವನ್ನು ಆಶ್ರಯಿಸಿ ಈ ಪ್ರಕಾರವಾಗಿ ಬಂದೆ! ಸಕಲ ಸೈನಿಕರೂ ಸಹೋದರರೂ ಸಂಗ್ರಾಮದಲ್ಲಿ ಹತ ರಾಗುವ ಹಾಗೆ ಮಾಡಿದ ಪಾಪ ಬುದ್ಧಿಯಾದ ನೀನು ಇನ್ನೂ ಪ್ರಾಣಸಹಿತವಾಗಿರ ಬೇಕೆಂದೆಣಿಸಬಹುದೆ! ಕರ್ಣ ಶಕುನಿ ದುಶ್ಯಾಸನರ ಸಹವಾಸ ದೋಷದಿಂದ ಮೇಲೆ ಬರುವದನ್ನು ತಿಳಿಯದೆ ಅನೇಕ ದ್ರೋಹಗಳನ್ನು ನಮಗೆ ಮಾಡಿದ್ದರಿಂದ ನಿನಗೆ ಪಲಾಯನವೆಂಬ ಇಂಥಾ ದುರವಸ್ಥೆಯು ಸಂಭವಿಸಿತೆಂದು ಎಣಿಸುತಲಿದ್ದೇನೆ; ನಿನ್ನ ಪೌರುಷವು, ನಿನ್ನ ಅಭಿಮಾನವು, ನಿನ್ನ ಪರಾಕ್ರಮವು, ನಿನ್ನ ವಿಸ್ರಂಭಣವು, ನಿನ್ನ ಆತ್ಮಸ್ತುತಿಯು, ನಿನ್ನ ಶಸ್ತ್ರಾಸ್ತ್ರಕೌಶಲವು—ಇದೆಲ್ಲವನ್ನೂ ಬಿಟ್ಟು ನಾಚಿಕೆಯಿಲ್ಲದೇ ಈ ಕೊಳದಲ್ಲಿ ಯಾಕೆ ಮುಳುಗಿದ್ದೀ! ಕ್ಷತ್ರಿಯ ಧರ್ಮವನ್ನು ಬಿಡದೆ, ಯುದ್ಧದಲ್ಲಿ ನನ್ನಕೂಡೆ ತೊಡಗಿ, ನಿನ್ನ ಸಾಹಸವನ್ನು ತೋರಿಸಿ, ನಮ್ಮನ್ನು ಜಯಿಸಿ, ಭೂಮಂಡಲವನ್ನು ಪರಿಪಾಲಿಸು; ಅಲ್ಲದಿದ್ದರೆ ನಮ್ಮಿಂದ ಹತನಾಗಿ ಭೂಮಿಯಲ್ಲಿ ಬೀಳು; ಕ್ಷತ್ರಿಯನಿಗೆ ಇದಕ್ಕಿಂತಲೂ ವಿಹಿತವಾದ ಧರ್ಮವುಂಟೆ! ಇದೆಲ್ಲವನ್ನೂ ನಿನ್ನ ಮನಸ್ಸಿನಲ್ಲಿ ವಿಚಾರಿಸಿ ತಿರಿಗೂ ಧೈರ್ಯವನ್ನು ಆಶ್ರಯಿಸಿ ಶೀಘ್ರವಾಗಿ ಯುದ್ಧಕ್ಕೆ ಬಾ' ಅಂದನು.

"ಆ ವಾಕ್ಯಗಳನ್ನು ಕೇಳಿ ದುರ್ಯೋಧನನು ಇಂತೆಂದನು; 'ಎಲೈ ಧರ್ಮ ನಂದನನೆ, ಮನುಷ್ಯರು ಪ್ರಾಣಗಳನ್ನು ರಕ್ಷಿಸಿಕೊಳ್ಳುವದು ಏನು ಆಶ್ಚರ್ಯವು! ಆದರೂ ನಾನು ಪ್ರಾಣಗಳಮೇಲೆ ಆಶೆಯಾಗಿ ಬಂದವನಲ್ಲ; ನನ್ನ ರಥವು ಮುರಿದು, ನನ್ನ ತೂಣೀರವು ಮುಗಿದು, ನನ್ನ ಪಾರ್ಶ್ವರಕ್ಷಕರು ಮಡಿದು, ನನ್ನ ಪಕ್ಕದಲ್ಲಿ ಒಬ್ಬನೂ ಇಲ್ಲದೆಹೋದ್ದರಿಂದ ಸ್ವಲ್ಪ ಹೊತ್ತು ಆಯಾಸವನ್ನು ಪರಿಹರಿಸಿಕೊಳ್ಳ ಬೇಕೆಂದು ಇಲ್ಲಿಗೆ ಬಂದೆನು; ಅಷ್ಟೇ ಹೊರತಾಗಿ ಪ್ರಾಣವನ್ನು ರಕ್ಷಿಸಿಕೊಳ್ಳು ವದಕ್ಕಾದರೂ ಭಯದಿಂದಲಾದರೂ ದುಃಖದಿಂದಲಾದರೂ ಬಂದವನಲ್ಲ; ನೀನೂ ನಿನ್ನ ಹಿಂದೆ ಬಂದವರೂ ಸ್ವಲ್ಪ ಹೊತ್ತು ಆಯಾಸವನ್ನು ತೀರಿಸಿಕೊಳ್ಳಿ; ನಾನು

ಸ್ಥಳದಲ್ಲಿ ಏಕಾಕಿಯಾಗಿ ಹೊಕ್ಕೊಂಡಿದ್ದು ಜಯಾವಿಜೈಭವರಾದ ಪಾಂಡವರಿಂದ ಆ ಪ್ರಕಾರದಲ್ಲಿ ನಿಂದಿಸಲ್ಪಟ್ಟು ಏನು ಉತ್ತರವನ್ನು ಕೊಟ್ಟನು? ಇದೆಲ್ಲವನ್ನು ವಿಸ್ತರಿಸಿ ಹೇಳು'' ಎಂದು ಕೇಳಿದನು.

ಸಂಜಯನು ಆತನನ್ನು ಕುರಿತು "ಕೇಳು ಅರಸರಿಗರಸನೇ, ಆ ಪ್ರಕಾರದಿಂದ ನುಡಿದ ಧರ್ಮರಾಯನ ವಾಕ್ಯಗಳನ್ನು ಕೇಳಿ, ನಿನ್ನ ಪುತ್ರನು ನೀರಿನಲ್ಲಿದ್ದು ಕೊಂಡು, ಬಹಳವಾಗಿ ಕಸ್ತಿಪಟ್ಟು, ಬಿಸಿಯಾದ ನಿಟ್ಟುಸುರುಗಳನ್ನು ಬಿಡುತ್ತ ಭುಜಗಳನ್ನು ಪದೇ ಪದೇ ಅಲ್ಲಾಡಿಸುತ್ತ, ಯುದ್ಧಮಾಡುವುದಕ್ಕೆ ನಿಶ್ಚೈಸಿ, ಅವರನ್ನು ಕುರಿತು 'ಎಲೈ ಪಾಂಡುಕುಮಾರರೆ, ನೀವು ಮಿತ್ರರಿಂದಲೂ ರಥ ಗಳಿಂದಲೂ ಗಜ ತುರಗ ಪದಾತಿವರ್ಗಗಳಿಂದಲೂ ಕೂಡಿದ್ದೀರಿ; ನಾನು ಒಬ್ಬನಾಗಿ ರಥವಿಲ್ಲದವನಾಗಿ ಏರುವುದಕ್ಕೆ ಒಂದು ಆನೆಯಾದರೂ ಕುದುರೆಯಾದರೂ ಇಲ್ಲದವ ನಾಗಿ ನಿರುತ್ಸಾಹನಾಗಿ ನಿರಾಯುಧನಾಗಿದ್ದೇನೆ; ಹೀಗಿರುವಲ್ಲಿ ನಾನು ಹ್ಯಾಗೆ ನಿಮ್ಮಂಥಾ ಸಕಲಾಯುಧಪಾಣಿಗಳನೇಕರೊಡನೆ ಹೋರಲಿ! ಎಲೈ ಯುಧಿಷ್ಠಿರನೆ, ನೀವು ಒಬ್ಬೊಬ್ಬರಾಗಿ ನನ್ನೊಡನೆ ಹೋರಿ; ಗಾಯವಡದ ಶರೀರಿಯಾಗಿ ನಿರಾ ಯುಧನಾಗಿ ಏಕಾಕಿಯಾಗಿ ದುರ್ದೆಸೆಯನ್ನೈದಿರುವಂಥಾವನೊಡನೆ ಉತ್ಸಾಹಶಾಲಿ ಗಳಾದ ಅನೇಕರು ಹೋರುವುದು ಉಚಿತವಲ್ಲ; ನಾನು ನಿನ್ನೊಡನಾದರೂ ಭೀಮ ಸೇನನೊಡನಾದರೂ ಫಲ್ಗುಣನೊಡನಾದರೂ ವಾಸುದೇವ ಪಾಂಚಾಲರೊಡನಾದರೂ ಮಾದ್ರೀಪುತ್ರ ಸಾತ್ಯಕಿಯರೊಡನಾದರೂ ಹೋರುವದಕ್ಕೆ ಅಂಜುವದಿಲ್ಲ; ಇಲ್ಲವೇ ನಾನೊಬ್ಬನೇ ನಿಂತು ನಿಮ್ಮೆಲ್ಲರನ್ನು ತಡೆಯುತಲಿದ್ದೇನೆ, ಒಳ್ಳೆಯವರ ನೀತಿಯು ಧರ್ಮವನ್ನೇ ಆಶ್ರಯಿಸಿರುವುದು; ಧರ್ಮವನ್ನೂ ಕೀರ್ತಿಯನ್ನೂ ಬಯಸಿ ಇಷ್ಟು ಹೇಳುತ್ತೇನೆ: ಇಗೋ ತಟಾಕದಿಂದ ಹೊರಟು ಸಂವತ್ಸರವು ಋತುಗಳನ್ನು ಒಂದರ ಹಿಂದೆ ಒಂದನ್ನು ಕೂಡುವಹಾಗೆ ನಿಮ್ಮೆಲ್ಲರನ್ನು ಸಂಧಿಸಿಕೊಳ್ಳುತ್ತೇನೆ; ಸೂರ್ಯನು ಅರುಣೋದಯ ಕಾಲದಲ್ಲಿ ನಕ್ಷತ್ರಗಳನ್ನು ಕಾಂತಿವಿಹೀನಗಳಾಗಿ ಮಾಡುವಹಾಗೆ ನಿರಾಯುಧನಾಗಿ ದಣಿದಿರುವ ನಾನು ಸಕಲಾಯುಧಪಾಣಿಗಳಾಗಿ ರಥ ಗಜ ತುರಗ ಪದಾತಿಗಳೊಡನೆ ಕೂಡಿಕೊಂಡಿರುವ ನಿಮ್ಮೆಲ್ಲರನ್ನೂ ಹತ ಮಾಡುತ್ತೇನೆ: ವಾಲ್ಹಿಕನು, ದ್ರೋಣನು, ಭೀಷ್ಮನು, ಕರ್ಣನು, ಜಯದ್ರಥನು, ಭಗದತ್ತನು, ಶಲ್ಯನು, ಭೂರಿಶ್ರವನು, ಶಕುನಿಯು, ನನ್ನ ತಮ್ಮಂದಿರು, ನನ್ನ ಮಕ್ಕಳು ಮತ್ತು ನಿಮ್ಮಿಂದ ಬಿದ್ದ ಇಷ್ಟಬಾಂಧವರ ಋಣವನ್ನು ಈಹೊತ್ತು ನಿಮ್ಮನ್ನು ಕೊಂದು ತೀರಿಸುತ್ತೇನೆ' ಎಂದು ನುಡಿದು ಮೌನವಾಗಿದ್ದನು.

''ಧರ್ಮರಾಯನು ಆತನನ್ನು ಕುರಿತು 'ಎಲೈ ಸುಯೋಧನನೇ ನೀನು ಕ್ಷತ್ರ ಧರ್ಮವನ್ನು ತಿಳಿದು ಯುದ್ಧಾಭಿಲಾಷೆಯುಳ್ಳವನಾಗಿ ಧೈರ್ಯಶಾಲಿಯಾದ್ದರಿಂದ ನಮ್ಮೆಲ್ಲರೊಡನೂ ಹೋರುವದಕ್ಕೆ ಸಿದ್ಧವಾಗಿದ್ದೀ; ಆದ್ದರಿಂದ ನೀನು ನಿನಗೆ ಸಮ್ಮತ ವಾದ ಆಯುಧವನ್ನಿಡಿದು ನಮ್ಮಲ್ಲೊಬ್ಬನೊಡನೆ ಹೋರು; ಮಿಕ್ಕವರು ನೋಡು

ವಂಥಾವರಾಗಿರುತ್ತೇವೆ; ನಮ್ಮಲ್ಲಿ ಒಬ್ಬನನ್ನು ಕೊಂದರೆ ನೀನು ಈ ಭೂಮಂಡಲ ವನ್ನು ನಿಷ್ಕಂಟಕವಾಗಿ ಆಳು; ಅಲ್ಲದೆ ಹತನಾದರೆ ಸ್ವರ್ಗಕ್ಕೆ ಹೋಗು' ಅಂದನು.

"ದುರ್ಯೋಧನನು ಧರ್ಮನಂದನನನ್ನು ಕುರಿತು 'ನೀನು ಹೇಳಿದ ಪ್ರಕಾರಕ್ಕೆ ನನ್ನೊಡನೆ ಒಬ್ಬನೇ ಹೋರುವದು ನಿಶ್ಚಯವಾದರೆ ನಾನು ಈ ಗದೆಯನ್ನಿಡಿದು ಯುದ್ಧವನ್ನು ಮಾಡುತ್ತೇನೆ; ಹಾಗೆ ನನ್ನೊಡನೆ ಹೋರುವಂಥಾವನೂ ಗದಾಪಾಣಿ ಯಾಗಿ ಬರಲಿ; ಇದುವರಿಗೂ ಅನೇಕ ರಥಿಕರಿಗೆ ದ್ವಂದ್ವಯುದ್ಧಗಳಾದವು; ಈಗ ಮಹಾ ಅದ್ಭುತವಾದ ಗದಾಯುದ್ಧವು ನಡಿಯಲಿ; ಶೂರರು ಯುದ್ಧಕಾಲದಲ್ಲಿ ನಾನಾ ಆಯುಧಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ಹೋರುವರು; ಆದ್ದರಿಂದ ನಿನ್ನ ಅನುಮತಿಯಿಂದ ಈಹೊತ್ತು ಗದಾಯುದ್ಧವು ನಡಿಯಲಿ; ಈ ಗದೆಯನ್ನಿಡಿದು ಈಹೊತ್ತು ನಿನ್ನನ್ನೂ ನಿನ್ನ ತಮ್ಮಂದಿರನ್ನೂ ಸೋಮಕ ಪಾಂಚಾಲರನ್ನೂ ಸೋಲಿಸುತ್ತೇನೆ; ಗದಾಯುದ್ಧದಲ್ಲಿ ನಾನು ಇಂದ್ರನಿಗಾದರೂ ಭಯಪಡುವದಿಲ್ಲ' ಅಂದನು.

"ಯುಧಿಷ್ಠಿರನು 'ಎಲೈ ಗಾಂಧಾರೀ ಪುತ್ರನೆ, ನೀರಿನಿಂದ ಹೊರಟು ನಮ್ಮಲ್ಲೊಬ್ಬರೊಡನೆ ಹೋರು ಬಾ; ಗದೆಯನ್ನು ಹಿಡಿದು ಗಂಡಸಿನ ಹಾಗೆ ನಿಂತು ಜಾಗ್ರತೆಯೊಡನೆ ಕಾಳಗವನ್ನು ಮಾಡು; ಇಂದ್ರನು ನಿನಗೆ ಸಹಾಯನಾದರೂ ಈ ಹೊತ್ತು ನೀನು ಪ್ರಾಣದಿಂದುಳಿಯಲಾರೆ' ಅಂದನು.

"ಕೇಳು ರಾಯನೆ, ಆ ಬಳಿಕ ನಿನ್ನ ಮಗನು ತೀಕ್ಷ್ಣವಾದ ಬಾಣಗಳ ಶಲ್ಯಗಳೋಪಾದಿಯಲ್ಲಿರುವ ಆ ವಾಕ್ಯಗಳನ್ನು ಸಹಿಸಲಾರದೆ ಹುತ್ತದ ಮಧ್ಯ ಪ್ರದೇಶದೆಸೆಯಿಂದ ಹೊರಟುಬರುವ ಸರ್ಪದ ಚಂದದಿಂದಲೂ ಕೋರಡೆಗಳ ಪೆಟ್ಟು ಗಳನ್ನು ಸಹಿಸಲಾರದಿರುವ ಉತ್ತಮಾಶ್ವದ ಚಂದದಿಂದಲೂ ಮಾಯಾಬಲಗಳಿಂದ ಸ್ತಂಭಿತಗಳಾದ ಉದಕಗಳನ್ನು ತಳ್ಳಿಕೊಂಡು ಅಯೋಮಯವಾಗಿ ಸುವರ್ಣ ಪಟ್ಟಿಕಾವಿಭೂಷಿತವಾಗಿ ಪರ್ವತದೋಪಾದಿಯಲ್ಲಿ ಅಧಿಕ ಭಾರಧುರ್ಯವಾಗಿರುವ ಗದೆ ಯನ್ನು ತೆಕ್ಕೊಂಡು ಉದಯಪರ್ವತದ ದೆಸೆಯಿಂದ ಹೊರಡುವ ಸೂರ್ಯನ ಹಾಗೆ ಉದಕಗಳ ದೆಸೆಯಿಂದ ದಡಕ್ಕೆ ಬಂದನು. ಶಿಖರಸಮೇತವಾದ ಪರ್ವತದ ಚಂದ ದಿಂದಲೂ ಶೂಲಪಾಣಿಯಾದ ಫಾಲಾಕ್ಷನ ಚಂದದಿಂದಲೂ ಕಿರಣಸಮೇತನಾದ ಸೂರ್ಯನ ತೆರದಿಂದಲೂ ವಜ್ರಪಾಣಿಯಾದ ದೇವೇಂದ್ರನ ಹಾಗೂ ಪ್ರಜ್ವಲಿಸುತ್ತಿದ್ದ ನಿನ್ನ ಮಗನನ್ನು ನೋಡಿ ಸಕಲಜನರೂ 'ಯಮನು ಗದಾಧರನಾಗಿ ಈ ಪ್ರಕಾರ ದಿಂದ ಬಂದನು' ಎಂದು ಎಣಿಸುತಲಿದ್ದರು; ಹಾಗೆ ಬರುವ ದುರ್ಯೋಧನನನ್ನು ನೋಡಿ ಪಾಂಡವ ಪಾಂಚಾಲ ಸೃಂಜಯ ಯೋಧರು ಒಬ್ಬರನ್ನೊಬ್ಬರು ನೋಡಿ ಕೊಂಡು ಕಾಖಾಕಿ ನಗುತ್ತಿದ್ದರು; ಅದನ್ನು ನೋಡಿ ಸಹಿಸಲಾರದೆ ದುರ್ಯೋಧನನು ತೀಕ್ಷ್ಣಗಳಾದ ನೋಟಗಳಿಂದ ಪಾಂಡವರನ್ನು ದಹಿಸುವ ಹಾಗೆ ಚುರಚುರನೆ ನೋಡುತ್ತ, ಹುಬ್ಬುಗಳನ್ನು ಗಂಟಿಕ್ಕಿ, ಔಡುಕಚ್ಚಿ, 'ಎಲೈ ಮೂಢಾತ್ಮಕರುಗಳಿರಾ,

ನಿಮ್ಮ ಗರ್ವವನ್ನು ಈ ಯುದ್ಧದಲ್ಲಿ ಅಡಗಿಸಿ ನಿಮ್ಮೆಲ್ಲರನ್ನೂ ಯಮಪಟ್ಟಣಕ್ಕೆ ಕಳುಹಿಸುತಲಿದ್ದೇನೆ' ಅಂದನು. ಮತ್ತು ಆ ಮಹಾವೀರನು ಘಾಯಗಳಿಂದ ಹೊರಡುವ ರಕ್ತದಿಂದಲೂ ನೀರಿನಿಂದಲೂ ಮುಚ್ಚಲ್ಪಟ್ಟು ತೊರೆಗಳೊಡನೆ ಕೂಡಿ ಕೊಂಡಿರುವ ಪರ್ವತವನ್ನನುಕರಿಸುತ್ತ ಗುಟುರು ಹಾಕುತ್ತಲಿರುವ ಮಹಾ ವೃಷಭದ ಹುಂದದಿಂದ ನಿಶ್ಶಂಕಹೃದಯನಾಗಿ ಮೇಘಗಂಭೀರಧ್ವನಿಯಿಂದ ಧರ್ಮರಾಯನನ್ನು ಕುರಿತು 'ನಾನು ವಿರಥನಾಗಿ ವಿಶೀರ್ಣಕವಚನಾಗಿ ವಿಶಕಲಿತಸೈನ್ಯನಾಗಿ ನಿರಾ ಯುಧನಾಗಿ ಘಾಯಗಳು ಪಡೆದ ಮೈಯ್ಯುಳ್ಳವನಾಗಿರುವುದರಿಂದ ನೀವು ಪ್ರತ್ಯೇಕ ಪ್ರತ್ಯೇಕವಾಗಿ ಒಬ್ಬೊಬ್ಬರಾಗಿ ನನ್ನಮೇಲೆ ಕಾಣಿಸಿಕೊಂಡು ಪರಾಕ್ರಮವನ್ನು ತೋರಿಸಿರಿ; ದುರ್ದೆಶೆಯನ್ನೈದಿರುವ ನನ್ನಂಥಾವನೊಬ್ಬನ ಕೂಡೆ ಅನೇಕರು ಹೋರುವದು ಧರ್ಮವಲ್ಲ; ಈಹೊತ್ತು ನಾನು ನಿಮ್ಮಲ್ಲೊಬ್ಬನೊಡನೆ ಹೋರುವ ಅತಿಶಯವನ್ನು ದೇವತೆಗಳು ನೋಡಲಿ; ನೀನು ಸಕಲವನ್ನು ತಿಳಿದವನಾದ್ದರಿಂದ ಧರ್ಮಾಧರ್ಮಗಳನ್ನು ವಿಚಾರಿಸಿ ನಡೆಯತಕ್ಕಂಥಾ ರೀತಿಯನ್ನು ತಿಳುಹಿಸು' ಅಂದನು.

"ಧರ್ಮರಾಯನು ಅತನನ್ನು ಕುರಿತು, 'ಎಲೈ ಧುರ್ಯೋಧನನೆ, ಆ ಹೊತ್ತು ನೀವು ಆರುಮಂದಿ ಮಹಾರಥಿಕರು ಕ್ಷತ್ರಧರ್ಮವನ್ನು ಬಿಟ್ಟು ಅಭಿಮನ್ಯುವನ್ನು ಇಕ್ಕಟ್ಟಾಗಿ ಸಿಕ್ಕಿಸಿಕೊಂಡು ಸಂಹರಿಸುವಾಗ ಇಂಥಾ ಪ್ರಜ್ಞಾವಿಶೇಷವು ಎಲ್ಲಿ ಹೋಯಿತು! ಕ್ಷತ್ರಧರ್ಮವು ನಿನ್ನಂಥಾವರ ತಿಳುವಳಿಕೆಗತೀತವಾಗಿ ದಯೆಯಿಲ್ಲ ದ್ದಾಗಿ ಅತಿ ಕ್ರೂರವಾಗಿರುವದು; ಹಾಗಲ್ಲದಿದ್ದರೆ ನೀವೆಲ್ಲರೂ ಕೂಡಿ ಅಭಿಮನ್ಯುವನ್ನು ಹ್ಯಾಗೆ ಕೊಂದಿರೀ! ನೀವೆಲ್ಲರು ನೀತಿವಂತರಾಗಿ ಶೂರರಾಗಿ ಯುದ್ಧದಲ್ಲಿ ಹಿಮ್ಮೆಟ್ಟದೆ ಪ್ರಾಣಗಳನ್ನಾದರೂ ಬಿಡುವಂಥಾವರು; ಕ್ಷತ್ರಧರ್ಮವನ್ನತಿಕ್ರಮಿಸದೆ ಹೋರಿದರೆ ಇಂದ್ರಪದವಿಯನ್ನು ಪಡೆಯಬಹುದೆಂತಲೂ ಒಬ್ಬನನ್ನು ಅನೇಕರು ಕೊಲ್ಲಬಾರ ದೆಂತಲೂ ಎಣಿಸಿದವರಾದರೆ ಒಬ್ಬನಾಗಿ ಬಾಲನಾದ ಅಭಿಮನ್ಯುವನ್ನು ಯಾವ ಕಾರಣದಿಂದ ನೀವು ಅನೇಕರು ಕೂಡಿ ಕೊಂದಿರಿ! ಅದ್ದರಿಂದ ಎಂಥಾವರಾದರೂ ಆಪತ್ಕಾಲದಲ್ಲಿ ಧರ್ಮವನ್ನು ಮರೆತು ಅಕೃತ್ಯಗಳನ್ನು ಮಾಡುವರು. ಈ ಮಾತು ಗಳಿಂದ ಪ್ರಯೋಜನವೇನು? ಶಿರಸ್ತ್ರಾಣವನ್ನು ಕೊಡುತಲಿದ್ದೇನೆ—ಶಿಖೆಯನ್ನು ಬಿಗಿದು ಕಟ್ಟು; ಧರಿಸುವ ಕವಚವನ್ನು ಕೊಡುತಲಿದ್ದೇನೆ—ತೊಟ್ಟುಕೊ; ಬೇಕಾದ ಆಯುಧಗಳನ್ನು ತಿಳಿಹಿಸು—ಕೊಡುತಲಿದ್ದೇನೆ; ನಿನ್ನನ್ನು ಪ್ರಾಣ ಗಳೊಡನೆ ಬಿಡುವದೊಂದು ಹೊರತಾಗಿ ಮತ್ತ್ಯಾವ ವರವನ್ನು ಕೇಳಿದರೂ ಕೊಡು ತಲಿದ್ದೇನೆ—ಕೇಳು; ನಾವು ಐದು ಮಂದಿಯೊಳಗೆ ನಿನ್ನ ಮನಸ್ಸು ಬಂದವನೊಡನೆ ತೊಡರಿ ದ್ವಂದ್ವಯುದ್ಧದಲ್ಲಿ ಆ ಒಬ್ಬನನ್ನು ಗೆದ್ದು ಈ ರಾಜ್ಯವೆಲ್ಲವನ್ನು ನೀನೇ ಆಳು; ನೀನು ಬಿದ್ದರೆ ಪುಣ್ಯಲೋಕಗಳಿಗೆ ಹೋಗು' ಎಂದು ನುಡಿದನು.

"ಕೇಳು ಧೃತರಾಷ್ಟ್ರನೇ, ಈ ಪ್ರಕಾರವಾಗಿ ನುಡಿದ ಧರ್ಮನಂದನನ ವಾಕ್ಯ

ಗಳನ್ನು ಕೇಳಿ ನಿನ್ನ ಕುಮಾರಕನು ಸುವರ್ಣಬಿಂದು ಚಿತ್ರಿತವಾಗಿರುವ ಕವಚವನ್ನು ತೊಟ್ಟು, ಸುವರ್ಣಪಟ್ಟಿಕಾ ವಿಭೂಷಿತವಾದ ಶಿರಸ್ತ್ರಾಣವನ್ನು ಧರಿಸಿ, ಮೇರು ಪರ್ವತದೋಪಾದಿಯಲ್ಲಿ ಪ್ರಕಾಶಿಸುತ್ತ, ಯುದ್ಧೋತ್ಸಾಹದಿಂದ ಗದಾದಂಡವನ್ನು ಕೈಯಲ್ಲಿ ಹಿಡಿದು, ಪಾಂಡವರನ್ನು ತಿರಿಗಿ ನೋಡಿ 'ನಿಮ್ಮ ಐದುಮಂದಿಯೊಳಗೆ ಯಾವನಾದರು ಒಬ್ಬನು ಗದಾಪಾಣಿಯಾಗಿ ನನ್ನೊಡನೆ ಹೋರಲಿ; ಆತನನ್ನು ಗೆದ್ದು ನಿಮ್ಮೊಡನೆ ದ್ವೇಷವನ್ನು ಕೊನೆಸಾಗಿಸುತಲಿದ್ದೇನೆ; ನನ್ನೊಡನೆ ಗದಾ ಯುದ್ಧಕ್ಕೆ ಎಂಥಾವನಾದರೂ ತೊಡರಲಾರನು; ಗದಾಪ್ರಹಾರಗಳಿಂದ ಒಬ್ಬರ ಗರ್ವವನ್ನೊಬ್ಬರು ಅಡಗಿಸಿಕೊಂಡು ಯಶಸ್ಸನ್ನು ಪಡೆಯಬಹುದು; ನನ್ನೊಡನೆ ಗದಾಯುದ್ಧ ಮಾಡುವದಕ್ಕೆ ಸಂತೋಷವುಳ್ಳಂಥಾವನು ಗದಾದಂಡವನ್ನಿಡಿದು ನನ್ನ ಕಣ್ಣುಮುಂದೆ ಬಂದು ನಿಲ್ಲಲ್ಲೀ!' ಎಂದು ನುಡಿದನು.''

''ಕೇಳು ಎಲೈ ರಾಯನೆ, ಈ ಪ್ರಕಾರದಿಂದ ಆ ಕೌರವೇಂದ್ರನು ಬಾರಿ ಬಾರಿಗೂ ವೀರಾಲಾಪಗಳನ್ನು ನುಡಿಯುತ್ತಿರಲು ಕೃಷ್ಣನು ಕೋಪದಿಂದ ಕಣ್ಣು ಗಳನ್ನು ಕೆಂಪುಮಾಡಿಕೊಂಡು ಯುಧಿಷ್ಠಿರನನ್ನು ಕುರಿತು 'ಎಲೈ ಪಾಂಡುನಂದನನೆ, ಈ ರೀತಿಯಿಂದ ನುಡಿಯುವಂಥಾವರು ಲೋಕದಲ್ಲಿ ಉಂಟೆ! ಎಷ್ಟು ಸಾಹಸವನ್ನು ಮಾಡಿದೆ! '—ನಮ್ಮ ಐವರೊಳಗೆ ಒಬ್ಬನಕೂಡೆ ಕಾದಿ ಆ ಒಬ್ಬನನ್ನು ಗೆದ್ದು ರಾಜ್ಯವನ್ನು ಪರಿಪಾಲಿಸು—' ಎಂದು ನುಡಿದ ನಿನ್ನ ವಿವೇಕಕ್ಕೆ ಏನನ್ನಬೇಕು! ಈ ದುರ್ಯೋಧನನು ನಿಮ್ಮ ಐದು ಮಂದಿಯೊಳಗೆ ನಿನ್ನನ್ನಾದರೂ ಅರ್ಜುನನನ್ನಾದರೂ ನಕುಲನನ್ನಾದರೂ ಸಹದೇವನನ್ನಾದರೂ ಕುರಿತುಕೊಂಡರೆ ನೀವು ಯಾವ ರೀತಿ ಯಿಂದ ಆತನೊಡನೆ ಗದಾಯುದ್ಧದಲ್ಲಿ ಕಾಯಲುಳ್ಳವರು! ಮೊದಲು ಸಾಹಸದಿಂದ ಪಗಡೆಯನ್ನಾಡಿ ಹದಿಮೂರು ವರ್ಷಗಳು ಪಡಬಾರದ ಪಾಡುಗಳನ್ನು ಪಡಿಸಿದೆ; ಈಗ ಅದೇ ಪ್ರಕಾರವಾಗಿ ಸ್ವಕಾರ್ಯವನ್ನು ಮರೆತು ಶತ್ರುವಿಗೆ ಸಂತೋಷವನ್ನು ಕಲ್ಪಿಸಿದೆ; ನೀವು ಪ್ರಾಣಸಹಿತವಾಗಿರುವದು ನಿನಗೆ ಸಮ್ಮತವಲ್ಲವೇನೊ ತಿಳಿಯ ಲಿಲ್ಲ; ದುಷ್ಟ ಶತ್ರುವಿನ ಮೇಲೆ ದಯಮಾಡುವರುಂಟೆ! ಸುಯೋಧನನೊಡನೆ ಭೀಮಸೇನನು ಹೊರತಾಗಿ ಗದಾಯುದ್ಧದಲ್ಲಿ ಎದಿರಾಗಿ ಹೋರುವದಕ್ಕೆ ಬೇರೆ ಯಾರೂ ಇಲ್ಲವೆಂದು ನಿಶ್ಚಯಿಸು; ಭೀಮಸೇನನನ್ನು ಗೆಲ್ಲಬೇಕೆಂಬ ಇಚ್ಛೆಯಿಂದ ಹದಿಮೂರು ವರುಷಗಳಿಂದ ದುರ್ಯೋಧನನು ಕಬ್ಬಿಣದ ಪ್ರತಿಮೆಯನ್ನು ಮಾಡಿಸಿ ಗದಾ ಸಾಧನೆಯನ್ನು ಮಾಡುತ್ತಲಿದ್ದಾನೆ; ಆಹೊತ್ತು ಶಕುನಿಯ ವಂಚನೋ ಪಾಯವನ್ನು ತಿಳಿಯದೆ ಜೂಜಿಗೆ ಒಡಂಬಟ್ಟ ಹಾಗೆ ಈಹೊತ್ತು ದಾಕ್ಷಿಣ್ಯಕ್ಕಾಗಿ ದ್ವಂದ್ವಯುದ್ಧಕ್ಕೆ ಒಡಂಬಟ್ಟು ಚಿಂತೆಯನ್ನುಂಟುಮಾಡಿದೆ; ನಮ್ಮ ಭೀಮಸೇನನು ಬಲದಲ್ಲಿಯೂ ವೇಗದಲ್ಲಿಯೂ ಅಧಿಕನೆನಿಸಿಕೊಳ್ಳುವನು; ಸುಯೋಧನನಲ್ಲಿ ಚಾತುರ್ಯವು ಹೆಚ್ಚಾಗಿರುವದು; ಬಲವಂತನೂ ಚತುರನೂ ಹೋರಿದರೆ ಚತುರನು ಗೆಲ್ಲವನು; ಹೀಗಿರುವಲ್ಲಿ ನೀನು ಶತ್ರುವನ್ನು ಭದ್ರವಾದ ಮಾರ್ಗದಲ್ಲಿ ನಿಲ್ಲಿಸಿ ನೀನು

ಸಿಕ್ಕಿಕೊಂಡು ನಿಮ್ಮೆಲ್ಲರಿಗೂ ಇಂಥಾ ಪರಿತಾಪವನ್ನು ಕಲ್ಪಿಸಿದೆ; ಲೋಕದಲ್ಲಿ ವೈರಿಶ್ರೇಷ್ಠರೆಲ್ಲರನ್ನು ಸಂಹರಿಸಿ ಮಿಕ್ಕಿರುವ ಒಬ್ಬನ ಕೂಡೆ ಪಂಥವನ್ನು ಹಾಕಿಕೊಂಡು ಯುದ್ಧಕ್ಕೆ ಒಡಂಬಡುವರುಂಟೆ! ಗದಾದಂಡವನ್ನು ಹಿಡಿದು ಯುದ್ಧ ಸನ್ನದ್ಧನಾದ ಸುಯೋಧನನಿಗೆ ನೀನೂ ಮಾದ್ರೀಪುತ್ರರೂ ಸರಿಬರಲಾರರಿ; ಅದು ಹಾಗಿರಲಿ; ನೀನು ಆತನನ್ನು ಗದಾಯುದ್ಧಕ್ಕೆ ಕರೆದು ನಿಮ್ಮ ಐದು ಮಂದಿಯೊಳಗೆ ಒಬ್ಬನನ್ನು ಕೆಡಹಿ ರಾಜ್ಯಪರಿಪಾಲನವನ್ನು ಮಾಡಬಹುದೆಂದು ಯಾವ ಪ್ರಕಾರದಿಂದ ನುಡಿದೆ! ಭೀಮನನ್ನು ಆತನ ಕೂಡೆ ಗದಾಯುದ್ಧಕ್ಕೆ ಕಳುಹಿಸಿದರೂ ದುರ್ಯೋಧನನಲ್ಲಿ ಸಾಮರ್ಥ್ಯವು ಅಧಿಕವಾಗಿರುವದರಿಂದ ನ್ಯಾಯಮಾರ್ಗದಿಂದ ನಮಗೆ ಜಯವಾಗುವದು ಸಂಶಯವು; '—ಅಂತೂ ಇಂತೂ ಕುಂತೀ ಮಕ್ಕಳಿಗೆ ರಾಜ್ಯವಿಲ್ಲ—ಅವರು ಚರ್ಮಾಂಬರಧರರಾಗಿ ಅರಣ್ಯದಲ್ಲಿರಲು ಹುಟ್ಟಿದರು—' ಎಂದು ಜನರು ನಿಮ್ಮನ್ನು ನುಡಿಯುವಹಾಗೆ ಮಾಡಿದೆ" ಅಂದನು.

"ಆಗ ಭೀಮಸೇನನು ಕೃಷ್ಣಸ್ವಾಮಿಯನ್ನು ನೋಡಿ 'ಎಲೈ ಯದುಶ್ರೇಷ್ಠನೆ, ಈ ರೀತಿಯಿಂದ ನನ್ನನ್ನು ಲಘುವಾಗಿ ನುಡಿಯುತಿದ್ದೀ; ಈ ಸುಯೋಧನನ ಹಸ್ತದಲ್ಲಿರುವ ಗದಾದಂಡಕ್ಕಿಂತಲೂ ನನ್ನ ಹಸ್ತದಲ್ಲಿರುವ ಗದಾದಂಡವು ಅರವಾಶಿ ಹೆಚ್ಚಾಗಿರುವದು; ಇಂಥಾ ಸಾಧನವನ್ನು ಕೈಯಲ್ಲಿ ತೆಕ್ಕೊಂಡು ನೀವೆಲ್ಲರೂ ತಟಸ್ಥರಾಗಿ ನೋಡುತಲಿರಲು ದೇವತೆಗಳೊಡನೆ ಕೂಡಿ ಮೂರು ಲೋಕದಲ್ಲಿರುವವರೆಲ್ಲರೂ ಒಮ್ಮಡಿಯಾಗಿ ನನ್ನ ಮೇಲೆ ಕಾಣಿಸಿಕೊಂಡರೂ ನಿಜಭುಜಬಲ ವಿಜೃಂಭಣದಿಂದ ಒಂದೇ ಪೆಟ್ಟಿಗೆ ಸಂಹರಿಸುವೆನು! ಹೀಗಿರುವಲ್ಲಿ ಈ ಪುರುಷಾಧಮನನ್ನು ಲಕ್ಷ್ಯಮಾಡಿ ಯಾಕೆ ಚಿಂತಿಸುತಲಿದ್ದೀ! ಬಹುಕಾಲದಿಂದ ತೊಡರಿಬಂದ ವೈರವನ್ನು ಈ ಹೊತ್ತು ಅವಶ್ಯವು ಕಡೆಕಾಣುತ್ತಲಿದ್ದೇನೆ' ಅಂದನು.

"ಕೃಷ್ಣಸ್ವಾಮಿಯು ಆತನನ್ನು ನೋಡಿ 'ಎಲೈ ಭೀಮಸೇನನೆ, ನಿನ್ನಂಥಾ ಸಹೋದರನಿರುವಾಗ ಯುಧಿಷ್ಠಿರನಿಗೆ ಸಾಮ್ರಾಜ್ಯವುಂಟೆಂಬುವದಕ್ಕೆ ಸಂಶಯವುಂಟೆ! ಧೃತರಾಷ್ಟ್ರನ ಮಕ್ಕಳೆಲ್ಲರೂ ಪ್ರಾಚ್ಯ ಕಳಿಂಗ ಮಾಗಧ ಗಾಂಧಾರ ಕುರುಪತಿಗಳೆಲ್ಲರೂ ಅನೇಕ ಕುಂಜರಗಳೂ ನಿನ್ನ ಭುಜಬಲ ವಿಜೃಂಭಣದಿಂದಲಲ್ಲವೆ ಸಮಡದ್ದು! ಇನ್ನು ದುರ್ಯೋಧನನೊಬ್ಬನನ್ನು ಸಂಹರಿಸಿ ಪರ್ವತ ವನ ಪಟ್ಟಣ ಸಮೇತವಾಗಿರುವ ಈ ಭೂಮಂಡಲವೆಲ್ಲವನ್ನು ಧರ್ಮರಾಯನಿಗೆ ಕೊಡು; ನಿನ್ನಿಂದಲೇ ಈಹೊತ್ತು ಅವಶ್ಯವಾಗಿ ಪಾಪಾತ್ಮಕನಾಗಿರುವಂಥಾ ಈತನು ಸಮಡು ಹೋಗಲುಳ್ಳವನು! ನೀನು ಮೊದಲು ಮಾಡಿದ ಪ್ರತಿಜ್ಞೆಯನ್ನು ನೆರವೇರಿಸಿಕೊಳ್ಳುವದಕ್ಕಾಗಿ ಆತನ ತೊಡೆಯನ್ನು ಭೇದಿಸು; ಸುಯೋಧನನು ಸಾಮರ್ಥ್ಯದಿಂದಲೂ ಬಲದಿಂದಲೂ ಅಧಿಕನಾದ್ದರಿಂದ ಸಾವಧಾನವಾಗಿ ಆತನ ಕೂಡೆ ಹೋರಬೇಕು' ಎಂದು ತಿಳುಹಿಸಿ, ವಿವಿಧರತ್ನ ವಿಚಿತ್ರಾಭರಣಗಳಿಂದ ಆತನನ್ನು ಉಚಿತಪ್ರಕಾರವಾಗಿ ಬಹುಮಾನ ಮಾಡಿದನು; ಮತ್ತು ಧರ್ಮರಾಯನೂ ಸಾತ್ಯಕಿಯೂ

ಪಾಂಚಾಲಶ್ರೇಷ್ಠರೂ ಇನ್ನೂ ಮಿಕ್ಕಾದ ಅರಸುಗಳೂ ಮೃದುಮಧುರ ಭಾಷಣ ಗಳಿಂದ ಭೀಮಸೇನನನ್ನು ಹೊಗಳಿದರು.

"ಆ ಬಳಿಕ ಭೀಮಸೇನನು ಮಧ್ಯಾಹ್ನಕಾಲದ ಸೂರ್ಯನ ಹಾಗೆ ಸೃಂಜಯ ಬಲ ಸಮೇತನಾಗಿರುವ ಅಣ್ಣನನ್ನು ನೋಡಿ 'ನಾನು ಸುಯೋಧನನ ಕೂಡೆ ದ್ವಂದ್ವಯುದ್ಧದಲ್ಲಿ ತೊಡರಿ ಹೋರುತ ಕಾಂಡವವನದ ಮೇಲೆ ಅರ್ಜುನನು ಅಗ್ನಿ ಯನ್ನು ಹಾಕಿದ ತೆರದಿಂದ ಬಹುಕಾಲದಿಂದ ನನ್ನ ಮನಸ್ಸಿನಲ್ಲಿ ಎಡಬಿಡದಿರುವ ಕ್ರೋಧಾಗ್ನಿಯನ್ನು ಆತನ ಮೇಲೆ ಬಿಡುತ್ತಲಿದ್ದೇನೆ; ನಿನ್ನ ಹೃದಯದಲ್ಲಿ ಬಹು ಕಾಲದಿಂದ ನೆಟ್ಟಿರುವ ಶಲ್ಯವನ್ನು ಭೇದಿಸಿ ತೆಗೆದು, ಸೌಖ್ಯವನ್ನು ಕಲ್ಪಿಸಿ, ಕೀರ್ತಿ ಯೆಂಬ ಪುಷ್ಪಮಾಲಿಕೆಯನ್ನು ಸಮರ್ಪಿಸುತ್ತಲಿದ್ದೇನೆ; ಪರಮಲುಬ್ಧನಾದ ಈತನು ಆಯುಸ್ಸನ್ನೂ ಐಶ್ವರ್ಯವನ್ನೂ ರಾಜ್ಯವನ್ನೂ ಬಿಟ್ಟು ಯಮಲೋಕಕ್ಕೆ ಹೋಗ ಲುಳ್ಳವನು; ಆತನ ವೃತ್ತಾಂತವನ್ನು ಕೇಳಿ ಧೃತರಾಷ್ಟ್ರನು ಸೌಬಲನ ಬುದ್ಧಿ ಯನ್ನು ಕೇಳಿದ್ದರಿಂದ ತನಗೆ ಇಷ್ಟು ಹಾನಿಬಂತೆಂದು ಚಿಂತಿಸಲಿ' ಎಂದು ನುಡಿದು, ದಾರುಣವಾದ ಗದಾದಂಡವನ್ನು ತೆಕ್ಕೊಂಡು, ಸಮರಸನ್ನಾಹ ಕುತೂಹಲದಿಂದ ವಾಸವನು ವೃತ್ರಾಸುರನ ಸಮೀಪಕ್ಕೆ ಹೋಗುವ ಚಂದದಿಂದ ಏಕಾಕಿಯಾದರೂ ನಿಜಭುಜ ವಿಜೃಂಭಣವನ್ನೂ ಪೌರುಷವನ್ನೂ ಗರ್ವವನ್ನೂ ಬಿಡದೇ ಗುಂಪನ್ನು ಬಿಟ್ಟು ಒಂದು ಕಡೆಯಲ್ಲಿ ಮದ್ದಾನೆಯ ತೆರದಿಂದಲೂ ಶಿಖರ ಸಮೇತವಾದ ಕೈಲಾಸ ಪರ್ವತದ ಹಾಗೂ ಗದಾಪಾಣಿಯಾಗಿ ಎದಿರಾಗಿರುವ ದುರ್ಯೋಧನನನ್ನು ನೋಡಿ 'ಎಲೈ ಮೂಢಾತ್ಮನೆ, ನೀನೂ ಧೃತರಾಷ್ಟ್ರನೂ ನಿರ್ನಿಮಿತ್ತವಾಗಿ ನಮಗೆ ದ್ರೋಹಮಾಡುವದಕ್ಕೆಣಿಸಿ, ವಾರಣಾವತದಲ್ಲಿ ಅರಗಿನ ಮನೆಯಲ್ಲಿ ದಹನವನ್ನು ಮಾಡಲು ಯತ್ನಿಸಿದ್ದು, ಶಕುನಿಯು ಮಾಯಾಬಲದಿಂದ ಪರಮಧಾರ್ಮಿಕನಾದ ಧರ್ಮರಾಯನನ್ನು ಗೆದ್ದು ಭೂಮಂಡಲವೆಲ್ಲವನ್ನೂ ಅಪಹರಿಸಿದ್ದು, ಪತಿವ್ರತೆಯಾಗಿ ರಜಸ್ವಲೆಯಾಗಿದ್ದ ದ್ರೌಪದಿಯನ್ನು ಸಭಾಮಧ್ಯದಲ್ಲಿ ಅವಮಾನಮಾಡಿದ್ದು, ನಮ್ಮಲ್ಲಿ ಅನೇಕೋಪಾಯಗಳಿಂದ ಅಪಾಯಗಳನ್ನು ಕಲ್ಪಿಸಿದ್ದು—ಇವು ಮೊದ ಲಾದ ಅನೇಕ ದುಷ್ಕೃತಗಳಿಗೆ ಈಗ ಫಲವನ್ನು ಅನುಭವಿಸು; ಪರಮಲುಬ್ಧನಾದ ನಿನ್ನ ನಿಮಿತ್ತದಿಂದಲಲ್ಲವೆ ಭರತಕುಲ ಧುರಂಧರನಾಗಿ ಕೀರ್ತಿಶಾಲಿಯಾಗಿ ಕುರು ಪಿತಾಮಹನಾದ ಭೀಷ್ಮನು ನಿಶಿತ ವಿಶಿಖಗಳಿಂದ ಬಿದ್ದು ಶರತಲ್ಪದಲ್ಲಿದ್ದಾನೆ; ಇನ್ನೂ ಆಚಾರ್ಯನಾದ ದ್ರೋಣನೂ ನಿನಗೆ ಮಿತ್ರನಾದ ಕರ್ಣನೂ ಮಹಾ ಕೀರ್ತಿಸಂಪನ್ನ ನಾದ ಮದ್ರಭೂಪಾಲಕನೂ ಕೌರವ ಪಾಂಡವರ ಪರಸ್ಪರ ವೈರಕ್ಕೆ ಮೂಲಕಾರಣ ನಾದ ಶಕುನಿಯೂ ದುಶ್ಯಾಸನಪ್ರಮುಖರಾದ ನಿನ್ನ ಸೋದರರೂ ಸಮರಶೂರರಾದ ಕುಮಾರಕರೂ ಮಿಕ್ಕಾದ ಯೋಧಶ್ರೇಷ್ಠರೂ ದ್ರೌಪದಿಗೆ ಸಂತಾಪವನ್ನು ಮಾಡಿದ ಪ್ರಾತಿಕಾಮಿಯೂ ನಿನ್ನ ದೆಸೆಯಿಂದಲಲ್ಲವೆ ಪ್ರಾಣಗಳನ್ನು ಬಿಟ್ಟು ಯಮಪಟ್ಟಣಕ್ಕೆ ಹೋದರು! ಹಾಗೆ ನಿನಗಿದ್ದವರೆಲ್ಲರೂ ಹತರಾದ ಬಳಿಕ ಪಾಪಕರ್ಮನಾಗಿ ಕುಲ

ನಾಶಕನಾದ ನೀನೊಬ್ಬನೇ ತಪ್ಪಿದ್ದೀ! ನಿನ್ನನ್ನೂ ಈಹೊತ್ತು ನನ್ನ ಗದಾಪ್ರಹಾರ ದಿಂದ ಪೆಟ್ಟಿಕ್ಕಿ ನಿನ್ನಲ್ಲಿರುವ ಖರ್ವಗರ್ವಾತಿಶಯವನ್ನೂ ದುಷ್ಟಸ್ವಭಾವವನ್ನೂ ರಾಜ್ಯಾಭಿಲಾಷೆಯನ್ನೂ ನಿಮಿಷಮಾತ್ರದಿಂದಲೇ ಪರಿಹರಿಸುತಲಿದ್ದೇನೆ!' ಅಂದನು.

"ಸುಯೋಧನನು ಆತನನ್ನು ನೋಡಿ 'ಎಲೈ ಭೀಮನೆ, ನೀನು ಹೀಗೆ ಯಾಕೆ ಬಗುಳುತಲಿದ್ದೀ! ಈ ಕ್ಷಣದಲ್ಲಿ ನಿನ್ನ ಮನಸ್ಸಿನಲ್ಲಿರುವ ಗರ್ವವನ್ನು ಅಡಗಿಸಿ ಯಮನ ಸಮೀಪಕ್ಕೆ ಕಳುಹಿಸುತ್ತಲಿದ್ದೇನೆ; ಹಿಮವತ್ಪರ್ವತದ ಶಿಖರಕ್ಕೆ ಸಮಾನ ವಾಗಿರುವ ಗದಾದಂಡವನ್ನು ಅವಲಂಬಿಸಿ ನಾನು ಸಮರಸನ್ನಾಹದಿಂದ ನಿಂತಿರು ವಾಗ ನನ್ನೊಡನೆ ನಿಜಭುಜಬಲವಿಜೃಂಭಣದಿಂದ ಕಾಯುವದಕ್ಕೆ ಇಂದ್ರನಿಗಾದರೂ ಶಕ್ಯವಲ್ಲವೆಂಬಲ್ಲಿ ನೀನೆಷ್ಟರವನು! ಶರತ್ಕಾಲದ ಮೇಘದ ಚಂದದಿಂದ ಯಾಕೆ ಗರ್ಜಿಸುತಲಿದ್ದೀ! ಕೋಪವು ಹೆಚ್ಚಿಬರಲು ನನ್ನಿಂದ ಪೆಟ್ಟಿಕ್ಕಲ್ಪಟ್ಟು ಭೂಮಿಯಲ್ಲಿ ಬೀಳುವುದಕ್ಕಿಂತಲೂ ಮೊದಲೇ ನಿನ್ನ ಸಮುನ್ನತ ಭುಜಬಲವನ್ನು ತೋರಿಸು' ಎಂದು ಸಮೀಪಕ್ಕೆ ಬಂದನು.

"ಆಗ ಪಾಂಚಾಲ ಸೃಂಜಯ ಬಲಗಳಲ್ಲಿದ್ದ ಮಹಾರಥಿಕರು ಮದ್ದಾನೆ ಯನ್ನು ಕೈಚಪ್ಪಾಳಿಗಳಿಂದ ಕೆರಳಿಸುವ ಚಂದದಿಂದ ಅವರಿಗೆ ಉತ್ಸಾಹವನ್ನು ಕಲ್ಪಿಸುತ್ತ ಮದಗಜ ಬೃಂಹಿತಗಳೂ ಹಯಹೇಷಾರವಗಳೂ ಕೇಳಿಸುತ್ತಿರಲು ಶಸ್ತ್ರಾಸ್ತ್ರ ಥಾಳಥಳ್ಯಗಳು ಪ್ರಕಾಶಿಸುತ್ತಿರಲು ಕೌತೂಹಲದಿಂದ ನೋಡುತ್ತಲಿದ್ದರು."

* * * *

"ಕೇಳು ಎಲೈ ರಾಯನೆ, ಈ ಪ್ರಕಾರದಿಂದ ಭೀಮಸೇನನು ಆದರಿಸಿ ಕೊಳ್ಳಲು ಸುಯೋಧನನು ಯುದ್ಧೋತ್ಸಾಹಶಾಲಿಯಾಗಿ ಸಿಂಹನಾದವನ್ನು ಮಾಡಿದನು; ಆ ಬಳಿಕ ಅತಿತ್ವರಿತದಿಂದ ಆ ಈರ್ವರೂ ಕೂಡಿ, ಕೊಂಬುಗಳಿಂದ ಕೂಡಿಕೊಂಡಿರುವ ವೃಷಭಗಳ ಹಾಗೆ ಒಬ್ಬರಮೇಲೊಬ್ಬರು ಕಾಣಿಸಿಕೊಂಡು, ಮಹೇಂದ್ರನೂ ಪ್ರಹ್ಲಾದನೂ ಪರಸ್ಪರ ಜಯಾಭಿಲಾಷೆಯಿಂದ ಹೋರುವಹಾಗೆ ಅತಿ ಭಯಂಕರವಾದ ಯುದ್ಧವನ್ನು ಮಾಡುತ್ತ, ಅನ್ಯೋನ್ಯ ಗದಾಘಾತಗಳಿಂದ ಹೊರ ಡುವ ನೆತ್ತರುಗಳಿಂದ ನೆನದು, ಪೂತಿರುವ ಮುತ್ತುಗದ ಮರಗಳ ಚಂದದಿಂದ ಕಾಣಲ್ಪಟ್ಟು, ಗದಾಘಟ್ಟನಗಳಿಂದ ಹುಟ್ಟಿದ ಕಿಡಿಗಳು ಗಗನಮಂಡಲದಲ್ಲಿ ಮಿಂಚು ಹುಳುಗಳಹಾಗೆ ಹೊಳೆಯುತಲಿರಲು ದಾರುಣವಾಗಿ ಹೋರಿ, ಶ್ರಮಪಟ್ಟು, ಕೆಲವು ಹೊತ್ತು ಸುಮ್ಮನೇ ಇದ್ದು, ಶ್ರಮವನ್ನು ಪರಿಹರಿಸಿಕೊಂಡು, ಪರಾಕ್ರಮಗಳನ್ನು ತೋರಿಸಿ, ಸುವರ್ಣಚಿತ್ರಿತಗಳಾದ ಗದಾದಂಡಗಳನ್ನು ತೆಕ್ಕೊಂಡು, ತಿರಿಗೂ ಕಾಣಿಸಿ ಕೊಂಡರು; ಹೆಣ್ಣಾನೆಯ ನಿಮಿತ್ತವಾಗಿ ಮದೋದ್ಧತಿಯಿಂದ ತಾಕುವ ಮದ್ದಾನೆ ಗಳಹಾಗೆ ಯುದ್ಧವನ್ನು ಮಾಡುವ ಅಪರಿಮಿತಶೌರ್ಯಧುರ್ಯರಾದ ಆ ಈರ್ವರನ್ನೂ ನೋಡಿ ದೇವ ಗಂಧರ್ವ ದಾನವರು ಅತ್ಯಂತ ಸಂತೋಷಪಟ್ಟು, ಅವರೊಳಗೆ ಯಾರಿಗೆ ಜಯವಾಗುವದೋ ಎಂದು ಸಂಶಯಪಡುತಲಿದ್ದರು; ಆ ಈರ್ವರೂ ಒಬ್ಬರನ್ನೊಬ್ಬರು ವಂಚಿಸಿ ಗಡೆಗಳಿಂದ ಪೆಟ್ಟಿಕ್ಕುವದಕ್ಕೆ ಸಮಯವನ್ನು ನೋಡು

ತ್ತಿರುವಾಗ ಪ್ರತಾಪಶಾಲಿಯಾದ ಭೀಮಸೇನನು ಭುಜಬಲಾಟೋಪವನ್ನು ತೋರಿಸಿ, ಯಮದಂಡೋಪಮಾನವಾಗಿ ಸಿಡಿಲಿಗೆ ಸಮಾನವಾಗಿ ಸಕಲ ವೈರಿವಿದಾರಣವಾದ ಗದಾದಂಡವನ್ನು ಥಿರಥಿರನೆ ತಿರುಗಿಸುವದರಿಂದುಟ್ಟಿದ ಸಿಡಿಲಿನ ಧ್ವನಿಯೋಪಾದಿ ಯಲ್ಲಿರುವ ಧ್ವನಿಯನ್ನು ಕೇಳಿ ಅಲ್ಲಿದ್ದವರೆಲ್ಲರೂ ಸುಯೋಧನನೂ ಆಶ್ಚರ್ಯಪಡುತ ಲಿರಲು ವಿವಿಧ ಮಾರ್ಗಣಗಳಿಂದ ಮಂಡಲಪ್ರಚಾರಗಳನ್ನು ತೋರಿಸುತ್ತ, ಅಧಿಕ ವಾಗಿ ಶೌರ್ಯಾಟೋಪದಿಂದ ಪ್ರಕಾಶಿಸಿದನು; ಭಕ್ಷಣನಿಮಿತ್ತವಾಗಿ ಹೋರುವ ಪಕ್ಷಿಗಳ ಹಾಗೆ ಅವರೀರ್ವರೂ ಆತ್ಮಸಂರಕ್ಷಣಕ್ಕೋಸ್ಕರ ಸಾವಧಾನವಾಗಿ ಬಾರಿ ಬಾರಿಗೂ ಹೋರುತ್ತ ಗೋಮೂತ್ರಿಕಾಗಮನವೂ ಗತಪ್ರತ್ಯಾಗತಗಳೂ ಅಭಿದ್ರ ವಣವೂ ಅಪಸ್ಯಸ್ತವೂ ಯೆಂಬ ವಿಚಿತ್ರ ಗತಿವಿಶೇಷಗಳಿಂದ ಒಬ್ಬರನ್ನೊಬ್ಬರು ನೋಯಿಸುತ ಎದಿರಾಗಿ ನಿಂತಿರಲು ದುರ್ಯೋಧನನು ಭೀಮನಿಗೆ ದಕ್ಷಿಣಭಾಗದಲ್ಲಿ ಮಂಡಲಪ್ರಚಾರವನ್ನು ಮಾಡಿದನು; ಭೀಮಸೇನನು ಸುಯೋಧನನಿಗೆ ವಾಮಭಾಗ ದಲ್ಲಿ ತಿರುಗುವಾಗ ಕುರುವಲ್ಲಭನು ತನ್ನ ಗದಾದಂಡದಿಂದ ಭೀಮನ ಪಾರ್ಶ್ವಭಾಗ ವನ್ನು ನೋಯಿಸಲು ಆ ಗದಾಪ್ರಹಾರವನ್ನು ಎಣಿಸದೆ ಭೀಮಸೇನನು ಸಿಡಿಲಿಗೆ ಸಮಾನವಾಗಿ ಯಮದಂಡಕ್ಕೆ ಸಮಾನವಾದಂಥಾ ತನ್ನ ಗದಾದಂಡವನ್ನು ಅತಿ ಶೀಘ್ರದಿಂದ ತಿರುಗಿಸಿ ಬೀಸಲು ಕುರುನೃಪಾಲಕನು ಅತಿ ಭಯಂಕರವಾದ ಅಟ್ಟ ಹಾಸವನ್ನು ಮಾಡಿದನು; ಸಾತ್ಯಕಿ ಪ್ರಮುಖರಾದ ಪಾಂಡವ ಯೋಧರು ಅಧಿಕ ವಾಗಿ ಭಯಪಟ್ಟರು; ಹಾಗೆ ಈರ್ವರೂ ಮದ್ದಾನೆಗಳು ಕೊಂಬುಗಳಿಂದ ತಿವಿದಾಡುವ ಚಂದದಿಂದ ಒಬ್ಬರನ್ನೊಬ್ಬರು ಗದಾಪ್ರಹಾರಗಳಿಂದ ನೋಯಿಸುತ್ತ, ರಕ್ತಸಿಕ್ತಾಂಗರಾಗಿ, ವೃತ್ರ ವಾಸವರತೆರದಿಂದ ಭಯಂಕರವಾದ ಯುದ್ಧದಿಂದ ವಿಚಿತ್ರಗತಿಗಳಿಂದ ಸಂಚರಿಸುವಾಗ ಭೀಮಸೇನನು ತನ್ನ ಗದಾದಂಡದಿಂದ ಸುವರ್ಣ ಭೂಷಿತವಾದ ದುರ್ಯೋಧನನ ಗದಾದಂಡವನ್ನು ಸಿಡಿಲಿನಿಂದ ಸಿಡಿಲನ್ನು ಪೆಟ್ಟಿಕ್ಕುವ ಹಾಗೆ ಪೆಟ್ಟಿಕ್ಕಿ, ಕಿಡಿಗಳು ಹಾರಲು ಭೂಮಿಗೆ ಕೆಡಹಿದನು; ಆ ಗದಾಘಾತದಿಂದ ಭೂಮಿಯು ಗಡಗಡಿಸಿ ನಡುಗಲು ಆತನು ಕೋಪೋದ್ದೀಪಿತನಾಗಿ ತಿರಿಗೂ ಗದೆ ಯನ್ನು ತೆಕ್ಕೊಂಡು ಆತನ ಗದಾಘಾತವನ್ನು ಸೈರಿಸಲಾರದೆ ಪ್ರತಿಗಜ ದರ್ಶನ ದಿಂದ ಕೆರಳುವ ಮದ್ದಾನೆಯ ಹಾಗೆ ಸವ್ಯಮಂಡಲ ಪ್ರಚಾರಗಳಿಂದ ತಿರಿಗಿ ಭೀಮ ಸೇನನ ತಲೆಯನ್ನು ಅಪ್ಪಳಿಸಿದನು; ಆತನು ಅದರಿಂದ ಸ್ವಲ್ಪವಾದರೂ ಚಲಿಸದೇ ಇರಲು ಅಲ್ಲಿದ್ದವರೆಲ್ಲರೂ ಆಶ್ಚರ್ಯಪಟ್ಟರು! ಆ ಬಳಿಕ ಭೀಮಸೇನನು ಅತಿ ದೃಢ ಮಾಗಿ ಸುವರ್ಣಚಿತ್ರಿತವಾದ ತನ್ನ ಗದಾದಂಡವನ್ನು ದುರ್ಯೋಧನನಮೇಲೆ ಹಾಕಲು ಆತನು ಚಾತುರ್ಯದಿಂದ ಹಾರಿ ಪೆಟ್ಟನ್ನು ತಪ್ಪಿಸಿಕೊಳ್ಳಲು ಅದು ಸಿಡಿಲಿನ ತೆರದಿಂದ ಭೂಮಿಯಲ್ಲಿ ಬಿದ್ದು ಭೂಮಿಯನ್ನು ನಡುಗಿಸಿತು; ಈ ಪ್ರಕಾರದಿಂದ ಬಾರಿಬಾರಿಗೂ ಉತ್ಪನ್ನ ಕೌಶಲದಿಂದ ಭೀಮಸೇನನ ಗದಾಪ್ರಹಾರಗಳನ್ನು ವ್ಯರ್ಥ ಮಾಡಿ, ಕಠಿನ ಗದಾಘಾತಗಳಿಂದ ಆತನ ವಿಶೇಷ ವಕ್ಷಸ್ಥಲವನ್ನು ಸೀಳುವಹಾಗೆ

ಪೆಟ್ಟಿಕ್ಕಲು ಭೀಮನು ಮೋಹವನ್ನು ಐದಿ ಸುಮ್ಮನೇ ಇದ್ದನು; ಅದನ್ನು ನೋಡಿ ಪಾಂಡವ ಪಾಂಚಾಲ ಯೋಧವೀರರು ಮನಸ್ಸಿನಲ್ಲಿ ತಲ್ಲಣಿಸುತ್ತಲಿದ್ದರು!

"ಆ ಬಳಿಕ ವಾಯುಪುತ್ರನು ರೋಷಾವೇಶದಿಂದ ಮೆರೆಯುತ್ತ, ಮದಗಜದ ಮೇಲೆ ಬೀಳುವತೆರದಿಂದ ಗರ್ವಾತಿಶಯವನ್ನು ತೋರಿಸುತ್ತ, ದುರ್ಯೋಧನನ ಪಾರ್ಶ್ವಭಾಗದಲ್ಲಿ ಗದೆಯಿಂದ ಪೆಟ್ಟಿಕ್ಕಲು ಆತನು ಗಡಗಡನೆ ನಡುಗಿ, ಮೊಳಕಾಲು ಗಳಿಂದ ಭೂಮಿಯನ್ನು ಊರಿಕೊಂಡು, ಭೂಮಿಯಲ್ಲಿ ಬಿದ್ದನು; ಪಾಂಡವ ಬಲದಲ್ಲಿ ಕೋಲಾಹಲವು ವೆಗ್ಗಳವಾಗಲು ಅದನ್ನು ಕೇಳಿ ಕೋಪದೀಪಿತನಾಗಿ ದುರ್ಯೋಧನನು ಶೀಘ್ರವಾಗೆದ್ದು, ಕೋಲಿನಿಂದ ಬಡಿಯಲ್ಪಟ್ಟ ಸರ್ಪದವಿಧದಿಂದ ನಿಟ್ಟುಸುರು ಗಳನ್ನು ಬಿಡುತ್ತ, ಕ್ರೋಧಾರುಣಲೋಚನಗಳಿಂದ ದಹಿಸುವಂಥಾವನೋಪಾದಿ ಯಲ್ಲಿ ಭೀಮನನ್ನು ನೋಡಿ, ತಲೆಯು ಮುರಿದುಬೀಳುವಹಾಗೆ ಗದೆಯಿಂದ ಹಣೆಯಲ್ಲಿ ಪೆಟ್ಟಿಕ್ಕಿದನು; ಪರ್ವತದೋಪಾದಿಯಲ್ಲಿ ಚಲಿಸದೆ ಮದಧಾರೆಗಳನ್ನು ಸುರುಯಿಸುತಲಿರುವ ಮದ್ದಾನೆಯ ಚಂದದಿಂದ ರಕ್ತವನ್ನು ಕಾರುತ್ತ ಶತ್ರು ಭಯಂಕರಾಕಾರನಾದ ಭೀಮನು ಕಾಲಾಯಸನಿರ್ಮಿತವಾಗಿ ವಜ್ರಕ್ಕೂ ಸಿಡಿಲಿಗೂ ಸಮಾನವಾದ ಧ್ವನಿವುಳ್ಳಂಥಾದ್ದಾಗಿ ಶತ್ರುಸಂಹಾರಕಾರಣವಾದ ಗದಾದಂಡದಿಂದ ದುರ್ಯೋಧನನನ್ನು ನೋಯಿಸಿದನು; ಆತನು ಅದರಿಂದ ಮೂರ್ಛೆಯನ್ನೈದಿ ವಾಯುವಿನಿಂದ ಕೆಡಹಲ್ಪಟ್ಟ ಪುಷ್ಪಿತಾಶೋಕದ ಚಂದದಿಂದ ಭೂಮಿಯಲ್ಲಿ ಬೀಳಲು ಪಾಂಡವ ಬಲಗಳು ಸಿಂಹನಾದಗಳನ್ನು ಮಾಡಿದವು; ಆ ಬಳಿಕ ನಿನ್ನ ಕುಮಾರ ಕನು ಪ್ರಜ್ಞೆಯನ್ನೈದಿ, ಮದುವನ್ನು ಹೊರಡುವ ಮದ್ದಾನೆಯ ವಿಧದಿಂದ ಶೀಘ್ರ ವಾಗೆದ್ದು, ಶಿಕ್ಷಾವಿಶೇಷವನ್ನು ತೋರಿಸುತ್ತ, ತಿರುಗುತ್ತ, ಇಂದ್ರಾಶನಿಸಮಾನವಾದ ಗದಾದಂಡದಿಂದ ಕವಚವನ್ನು ಭೇದಿಸಿ, ಭೀಮಸೇನನನ್ನು ಭೂಮಿಗೆ ಕೆಡಹಿ, ಸಿಂಹನಾದವನ್ನು ಮಾಡಿದನು; ಆಗ ಅಂತರಿಕ್ಷದಲ್ಲಿ ನೋಡುತಲಿದ್ದ ದೇವ ದಾನವ ಸಮೂಹಗಳೂ ಅಪ್ಸರಸ್ತ್ರೀಗಣಗಳೂ ಮಾಡುವ ಕೋಲಾಹಲಗಳು ಎಲ್ಲಾಕಡೆ ಯಲ್ಲಿಯೂ ತುಂಬಿದವು; ದಿವ್ಯ ಪುಷ್ಪ ವರ್ಷಗಳೂ ಧಾರಾಳವಾಗಿ ಕರೆದವು; ಕವಚವು ಶೀಳಿ ಅಪ್ರಕಾರದಿಂದ ಬಿದ್ದಿರುವ ಭೀಮಸೇನನ ಬಲಪರಾಕ್ರಮಗಳಿ ಗಿಂತಲೂ ಅತಿಶಯವಾದ ಬಲಪರಾಕ್ರಮಗಳುಳ್ಳ ದುರ್ಯೋಧನನನ್ನೂ ನೋಡಿ ಪಾಂಡವ ಪಾಂಚಾಲ ಬಲಗಳು ಭಯವನ್ನೈದಿದವು; ವಾಯುಪುತ್ರನು ಮುಹೂರ್ತ ಮಾತ್ರದಿಂದ ಮೂರ್ಛೆಯನ್ನು ತಿಳಿದು, ನೆತ್ತರದಿಂದ ನೆನಸಲ್ಪಟ್ಟ ಮುಖವನ್ನು ಸವರಿಕೊಂಡು, ಧೈರ್ಯವನ್ನು ಅವಲಂಬಿಸಿ, ನಕುಲ ಸಹದೇವರೂ ಧೃಷ್ಟದ್ಯುಮ್ನ ಸಾತ್ಯಕಿಗಳೂ ಇನ್ನೂ ಮಿಕ್ಕಾದವರೂ ಒಬ್ಬರನ್ನೊಬ್ಬರು ಅತಿಕ್ರಮಿಸಿ ನಿನ್ನ ಕುಮಾರಕನೊಡನೆ ಕಾಳಗಮಾಡುವುವದಕ್ಕುದ್ಯೋಗಿಸಲು ಅವರನ್ನು ತಡೆದು, ಕಾಲಾಂತಕನ ಚಂದದಿಂದ ಖೇದವನ್ನು ಬಿಟ್ಟು, ದೇವೇಂದ್ರನು ನಮುಚಿ ದಾನವ ನೊಡನೆ ಯುದ್ಧವನ್ನು ಮಾಡಿದಹಾಗೆ ಸಮರಸನ್ನದ್ಧನಾಗಿದ್ದನು."

"ಕೇಳು ಎಲೈ ರಾಯನೆ, ಈಪ್ರಕಾರದಿಂದ ಭೀಮ ದುರ್ಯೋಧನರು ಗದಾ ಯುದ್ಧವನ್ನು ಮಾಡುವಾಗ ಅರ್ಜುನನು ಕೃಷ್ಣನನ್ನು ಕುರಿತು 'ಎಲೈ ಯದುವಲ್ಲಭನೆ, ಯುದ್ಧವನ್ನು ಮಾಡುತಲಿರುವ ಇವರಿಬ್ಬರೊಳಗೆ ಯಾವನು ಶ್ರೇಷ್ಠನು? ಯಾವ ಗುಣವು ಯಾರಲ್ಲಿ ಅಧಿಕವಾಗಿದೆಯೆಂದು ನಿನ್ನ ಮನಸ್ಸಿನಲ್ಲಿ ತೋರುತ್ತದೆ? ತಿಳುಹಿಸಬೇಕು' ಎಂದು ಕೇಳಿದನು.

"ದೇವಕೀನಂದನನು ಕುಂತೀನಂದನನನ್ನು ನೋಡಿ 'ಎಲೈ ಪುರಂದರನಂದನನೆ, ಗುರೂಪದೇಶವು ಇಬ್ಬರಿಗೂ ಸರಿಯಾಗಿಯೇ ಇದೆ; ಸಹಜವಾದ ಬಲದಿಂದ ಭೀಮಸೇನನು ಅಧಿಕನು; ದುರ್ಯೋಧನನು ಭೀಮಸೇನನಿಗಿಂತಲೂ ಉಪಾಯವಂತನಾಗಿ ಸಮರ್ಥನಾದ್ದರಿಂದ ಧರ್ಮಮಾರ್ಗವನ್ನು ತಪ್ಪದೇ ಗದಾಯುದ್ಧದಲ್ಲಿ ಇವನನ್ನು ಭೀಮಸೇನನು ಜಯಿಸಲಾರನು; ಅನ್ಯಾಯದಿಂದಲಾದರೆ ಸಂಹರಿಸಲಾಪುವನು; ಪೂರ್ವಕಾಲದಲ್ಲಿ ದೇವತೆಗಳು ಅಸುರ ವೀರರೆಲ್ಲರನ್ನೂ ಮಾಯಾಬಲದಿಂದ ಸಂಹರಿಸಿದರೆಂದು ನಾವು ಕೇಳಿದ್ದೇವೆ: ದೇವೇಂದ್ರನು ವೃತ್ರಾಸುರನನ್ನೂ ವಿರೋಚನ ಪುತ್ರನಾದ ಬಲಿಯನ್ನೂ ಮಾಯೆಯಿಂದ ಜಯಿಸಿದ್ದು ನೀನು ಅರಿತಿದ್ದಿ; ಆದ್ದರಿಂದ ಕಪಟವ್ಯಾಪಾರದಿಂದಲೇ ದುರ್ಯೋಧನನನ್ನು ಸಂಹರಿಸಬೇಕು; ಅದೂ ಅಲ್ಲದೆ ಹಸ್ತಿನಾಪಟ್ಟಣದಲ್ಲಿ ಕಪಟದ್ಯೂತವನ್ನು ಮಾಡಿ ದ್ರೌಪದಿಯನ್ನು ಅವಮಾನಿಸಿದಾಗ ದುರ್ಯೋಧನನ ತೊಡೆಗಳನ್ನು ಗದಾದಂಡದಿಂದ ಮುರಿಯುವದಾಗಿ ಭೀಮಸೇನನು ಪ್ರತಿಜ್ಞೆಯನ್ನು ಮಾಡಿದ್ದಾನೆ; ಮಾಯಾಬಲದಿಂದ ಹಾಗೆ ಮಾಡುವದೇ ಉಚಿತವು; ಹಾಗೆಮಾಡದೆ ಭೀಮನು ಧರ್ಮವನ್ನು ಅಪೇಕ್ಷಿಸಿದರೆ ಧರ್ಮರಾಯನು ತಿರಿಗೂ ಕ್ಲೇಶವನ್ನು ಐದತಕ್ಕಂಥಾವನು; ಧರ್ಮರಾಯನ ಬುದ್ಧಿಯನ್ನು ನಾನು ಎಷ್ಟೆಂದು ಹೇಳಲಿ! ಸಕಲ ಸೈನ್ಯವೂ ನಾಶವಾಗಲು ಅಂಜಿಕೊಂಡು ಓಡಿಹೋಗಿ ಮಡುವಿನಲ್ಲಿ ಮುಳುಗಿ ರಾಜ್ಯದಲ್ಲಿ ಆಶೆಯನ್ನು ಬಿಟ್ಟಿದ್ದ ದುರ್ಯೋಧನನನ್ನು ದ್ವಂದ್ವಯುದ್ಧಕ್ಕೆ ಕರೆದು ಪಾಂಡವರೊಳಗೆ ಒಬ್ಬನನ್ನು ಗೆದ್ದು ರಾಜ್ಯವನ್ನು ತೆಕ್ಕೊಳ್ಳಬಹುದೆಂದು ಪಂಥವನ್ನು ಮಾಡಿ ಭೀಷ್ಮದ್ರೋಣರು ಮೊದಲಾದ ಮಹಾರಥಿಕರನ್ನು ಯುದ್ಧದಲ್ಲಿ ಸಂಹರಿಸಿ ಪಡೆದ ಜಯವನ್ನು ತಿರಿಗೂ ಸಂಶಯಾಸ್ಪದವನ್ನು ಮಾಡಿದನು; ಯುದ್ಧದಲ್ಲಿ ಪರಾಜಯವನ್ನೈದಿ ಓಡುವಂಥಾವರೊಳಗೆ ಯಾವನಾದರೂ ರೋಷಾವೇಶದಿಂದ ತಿರಿಗೂ ಯುದ್ಧಕ್ಕೆ ಬಂದರೆ ಶರೀರ ಪರಿತ್ಯಾಗವನ್ನು ಮಾಡುವದಕ್ಕೆ ನಿಶ್ಚಯಿಸಿರುವನಾದ್ದರಿಂದ ಅವನೊಡನೆ ಯುದ್ಧವನ್ನು ಮಾಡುವದು ಉಚಿತವಲ್ಲವೆಂದು ನೀತಿ ವಿಶಾರದನಾದ ಶುಕ್ರಾಚಾರ್ಯನು ನುಡಿದಿರುವನು; ದುರ್ಯೋಧನನು ಈಗ ನಿಮ್ಮಲ್ಲೊಬ್ಬನನ್ನು ಸುಲಭವಾಗಿ ಜಯಿಸಬಹುದೆಂಬ ನಿಶ್ಚಯದಿಂದಿದ್ದಾನೆ; ನೀವು ವನವಾಸವನ್ನು ಮಾಡಿದ ಹದಿಮೂರು ಸಂವತ್ಸರಗಳಲ್ಲಿ ಈ ಧೃತರಾಷ್ಟ್ರನ ಪುತ್ರನು ಗದಾಯುದ್ಧ ಕೌಶಲವನ್ನು ಪಡೆದನಾದ್ದರಿಂದ ಇವನನ್ನು ನ್ಯಾಯವಾಗಿ ಜಯಿಸುವದು ಅಶಕ್ಯವು; ಆದ್ದರಿಂದ ಹ್ಯಾಗಾದರೂ ಇವನನ್ನು ಸಂಹರಿಸದಿದ್ದರೆ ಕೌರವ ರಾಜ್ಯಕ್ಕೆ ತಿರಿಗೂ ಅಧಿಪತಿಯಾಗುತಲಿದ್ದಾನೆ' ಅಂದನು.

"ಅದನ್ನು ಕೇಳಿ ಅರ್ಜುನನು ಭೀಮಸೇನನು ತನ್ನನ್ನು ನೋಡುತ್ತಿದ್ದ ಸಮಯದಲ್ಲಿ ತನ್ನ ತೊಡೆಯನ್ನು ಕೈಯ್ಯಿಂದ ಅಪ್ಪಳಿಸಲು ಆ ಸಂಕೇತವನ್ನು ತಿಳಿದು ಭೀಮಸೇನನು ಗದಾದಂಡವನ್ನು ಕೈಯ್ಯಿಂದಿಡಿದು ಗೋಮೂತ್ರಿಕಾ ಗಮನ ಭೇದದಿಂದ ಸವ್ಯದಕ್ಷಿಣ ಮಂಡಲಪ್ರಕಾರಗಳಿಂದ ದುರ್ಯೋಧನನನ್ನು ಮೋಹವನ್ನು ಐದಿಸುತಲಿದ್ದನು; ದುರ್ಯೋಧನನೂ ಅದೇ ಪ್ರಕಾರವಾಗಿ ಗತಿಭೇದಗಳಿಂದ ಸಂಚರಿಸುತಲಿದ್ದನು; ಹಾಗೆ ಈರ್ವರೂ ಒಬ್ಬರನ್ನೊಬ್ಬರು ಸಂಹರಿಸುವದಕ್ಕೆ ಉದ್ಯೋಗಿಸ್ಸಿ, ಕಾಲಾಂತಕರಹಾಗೆ ಕೋಪೋದ್ದೀಪಿತರಾಗಿ, ದ್ವೇಷದ ಅಂತವನ್ನು ಕಾಣಬೇಕೆಂದೆಣಿಸುತ, ಚಂದನಾಗರುಲಿಪ್ತಗಳಾದ ಗದಾದಂಡಗಳನ್ನು ತಿರಿಗಿಸುತ, ಸರ್ಪಮಾಂಸದ ನಿಮಿತ್ತವಾಗಿ ತಿರುಗುತಲಿರುವ ಗರುಡಗಳೋಪಾದಿಯಲ್ಲಿಯೂ ಮದ್ದಾನೆಗಳ ಚಂದದಿಂದಲೂ ಗದಾಪ್ರಹಾರಗಳಿಂದ ಒಬ್ಬರ ಶರೀರವನ್ನೊಬ್ಬರು ನೋಯಿಸುತ್ತ, ನಿರ್ಘಾತಸಮಾನಗಳಾಗಿ ಪೌರುಷಗಳಾದ ಧ್ವನಿಗಳನ್ನು ಮಾಡುತ್ತ, ಭಯಂಕರವಾದ ಯುದ್ಧವನ್ನು ಮಾಡಿ, ಕಂಗೆಟ್ಟು, ಒಂದು ಮುಹೂರ್ತಮಾತ್ರವು ಸುಮ್ಮನಿದ್ದು, ಮತ್ತೂ ಕಾಡ್ಗೋಣಗಳ ಚಂದದಿಂದ ಪರಸ್ಪರ ಗದಾಘಾತಗಳಿಂದ ಜರ್ಝರಿತಗಳಾದ ಸರ್ವಾಂಗಳ ದೆಸೆಯಿಂದ ಹೊರಡುವ ರಕ್ತದಿಂದ ನೆನದು, ಹಿಮವತ್ಪರ್ವತದಲ್ಲಿ ಪುಷ್ಪಿಸಿರುವ ಮುತ್ತುಗದ ಮರಗಳ ಚಂದದಿಂದ ಕಾಣಲ್ಪಡುತ್ತಲಿದ್ದರು; ಅಂಥಾ ಸಮಯದಲ್ಲಿ ಧೈರ್ಯವು ಮೆರೆಯಲು ಸಮೀಪದಲ್ಲಿರುವ ದುರ್ಯೋಧನನಮೇಲೆ ಭೀಮಸೇನನು ಅತಿ ಶೀಘ್ರದಿಂದ ಗದೆಯನ್ನು ಗಿರಗಿರನೆ ತಿರುಗಿಸಿ ಬೀಸಿಹಾಕಿದನು; ಆತನು ತೊಲಗಿಹೋಗಿ ತಪ್ಪಿಸಿಕೊಳ್ಳಲು ಆ ಗದಾದಂಡವು ಭೂಮಿಯಲ್ಲಿ ಬಿತ್ತು; ದುರ್ಯೋಧನನು ತನ್ನ ಗದಾದಂಡವನ್ನು ಭೀಮನ ಮೇಲೆ ಪ್ರಯೋಗಿಸಿ ಆತನನ್ನು ನೋಯಿಸಲು ಆತನು ನೇತ್ರರನ್ನು ಕಾದುತ್ತ ಮೂರ್ಛೆಯನ್ನೈದಿ ಸುಮ್ಮನೇ ನಿಂತಿದ್ದನು; ಹಾಗೆ ನಿಂತಿರುವ ಭಿಮಸೇನನನ್ನು ನಿನ್ನ ಕುಮಾರಕನು ನೋಡಿ ತಿರಿಗೂ ತನ್ನನ್ನು ಹೊಡಿಯುವದಕ್ಕೆ ಹೊಂಚಿದ್ದನೆಂದೆಣಿಸಿ, ಮೂರ್ಛೆಯನ್ನೈದಿದನೆಂದು ತಿಳೆಯದೆ, ತಿರಿಗೂ ನೋಯಿಸದೆ ಸುಮ್ಮನೇ ಇದ್ದನು; ಆ ಬಳಿಕ ಭೀಮನು ಮುಹೂರ್ತಮಾತ್ರಕ್ಕೆ ಮೂರ್ಛೆಯನ್ನು ತಿಳಿದು, ಗದಾದಂಡವನ್ನು ಕೈಯಿಂದ ಹಿಡಿದು, ಸಮರಸಂರಂಭ ವಿಜೃಂಭಿತನಾಗಿ ಆತನ ಮೇಲೆ ಕಾಣಿಸಿಕೊಂಡು ಆತನು ತನ್ನ ಗದಾಘಾತಗಳನ್ನು ಮೇಲಕ್ಕೆ ಹಾರುವದರಿಂದಲೂ ಅಡ್ಡಲಾಗಿ ನಡೆಯುವದರಿಂದಲೂ ವ್ಯರ್ಥವಾಗಿ ಮಾಡುವದ ಕ್ಕೆಣಿಸಿ ಎದಿರಾಗಿರುವ ವಂಚನೆಯನ್ನು ತಿಳಿದು, ವಜ್ರಕ್ಕೆ ಸಮಾನವಾದ ತನ್ನ ಗದಾದಂಡವನ್ನು ತೆಗೆದು, ಆತನ ತೊಡೆಗಳನ್ನು ಲಕ್ಷ್ಯಮಾಡಿ ಹಾಕಲು ಸುಯೋಧನನು ತೊಡೆಗಳು ಮುರಿದು ಭೂಮಿಯಲ್ಲಿ ಬಿದ್ದನು!

"ಆಗ ಪರ್ವತವನಸಮೇತವಾದ ಭೂಮಂಡಲವು ಗದಗದನೆ ನಡುಗಿತು! ಚಂಡಮಾರುತಗಳೊಡನೆ ಪಾಂಸುವರ್ಷಗಳು ನಿರ್ಘಾತಸಹಿತವಾಗಿ ನಾಲ್ಕು ದಿಕ್ಕು

ಗಳಲ್ಲಿ ಸುರಿದವು! ಎಲ್ಲಿ ನೋಡಿದರೂ ಕೊಳ್ಳಿಗಳು ಕಾಣಲ್ಪಟ್ಟವು! ಮಾಂಸ ಸಮೇತವಾಗಿ ರಕ್ತವರ್ಷವು ಕರೆಯಿತು! ಅಂತರಿಕ್ಷದಲ್ಲಿ ಯಕ್ಷ ರಾಕ್ಷಸ ಕೋಲಾಹಲ ಧ್ವನಿಗಳು ಕೇಳಲ್ಪಟ್ಟವು! ಹತಾವಶೇಷಗಳಾದ ಆನೆ ಕುದುರೆಗಳ ಆರ್ತನಾದಗಳು ಹುಟ್ಟಿದವು! ಮಡುವುಗಳೂ ಭಾವಿಗಳೂ ರಕ್ತಪೂರಿತಗಳಾಗಿ ಕಾಣಲ್ಪಟ್ಟವು! ಮಹಾ ನದೀನದಗಳು ವಿಪರೀತಗಳಾಗಿ ಪ್ರವಹಿಸಿದವು! ಸ್ತ್ರೀಯರು ಪುರುಷರೂಪ ದಿಂದಲೂ ಪುರುಷರು ಸ್ತ್ರೀರೂಪದಿಂದಲೂ ಕಾಣಲ್ಪಟ್ಟರು! ಅಂಥಾ ಮಹೋತ್ಪಾತ ಗಳನ್ನು ನೋಡಿ ಪಾಂಡವ ಪಾಂಚಾಲ ಯೋಧರು ಮನಸ್ಸಿನಲ್ಲಿ ಭಯಪಟ್ಟರು! ಯುದ್ಧವನ್ನು ನೋಡುವುದಕ್ಕೆ ಬಂದ ದೇವ ಗಂಧರ್ವಾಪ್ಸರೋಗಣಗಳು ಭೀಮ ದುರ್ಯೋಧನರ ಪರಾಕ್ರಮಗಳನ್ನು ಸ್ತುತಿಸುತ್ತ ತಮ್ಮ ತಮ್ಮ ಸ್ಥಾನಗಳಿಗೆ ಹೋದರು!''

[ಮರಾಳನಂ] ನೋಡಿ ಚಾಣಕ್ಯನು :—

ಎಲೈ ಮರಾಳನೇ, ಇಷ್ಟು ದಿವಸಗಳವರೆಗೂ ಯಾವ ಕಾರ್ಯಮಂ ನೋಡು ತ್ತಿದ್ದೆ? ಚಂದ್ರಗುಪ್ತನಲ್ಲಿ ಯಾರಿಗೆ ಅನುರಾಗವಿರುವುದು? ಯಾರಿಗೆ ಅಸಹನ ಮುಂಟಾಗಿರುವುದು ಎನಲು :—

ಸ್ವಾಮಿಾ, ಈ ಪುರದಲ್ಲಿ ಮೂವರು ಹೊರತು ಉಳಿದ ಪ್ರಜೆಗಳೆಲ್ಲರೂ ಚಂದ್ರ ಗುಪ್ತನಲ್ಲಿ ಅನುರಕ್ತರಾಗಿರುವರು ಎಂದನು. ಆ ಮಾತಿಗೆ :—

ಆ ಮೂವರಾರು? ಎಂದು ಮರಳಿ ಚಾಣಕ್ಯನು ಕೇಳಲು ಮರಾಳನು:—

ಸ್ವಾಮಿ, ರಾಕ್ಷಸನಿಗೆ ಮಿತ್ರನಾಗಿ ಚಂದ್ರಗುಪ್ತನ ಅಭ್ಯುದಯಮಂ ನೋಡಿ ಸಹಿಸಲಾರದೆ ಹಿಂದೆಮುಂದೆ ಅಡಿಕೊಳ್ಳುತ್ತಿರುವ ಜೀವಸಿದ್ಧಿಯೊಬ್ಬನು. ಅಮಾತ್ಯ ನಿಗೆ ಆಪ್ತರಾಯಸದವನಾಗಿರುವ ಲೋಕಾಯತಮತಸ್ಥನಾದ ಶಕಟದಾಸ ನೊಬ್ಬನು. ಸಚಿವನಿಗೆ ಪರಮಮಿತ್ರನಾಗಿ ಬುದ್ಧಮತಸ್ಥನಾದ ಚಂದನದಾಸನೆಂಬ ವರ್ತಕನೊಬ್ಬನು. ರಾಕ್ಷಸನು ಈ ಪುರಮಂ ಬಿಟ್ಟುಹೋಗುವಲ್ಲಿ ತನ್ನ ಪತ್ನೀಪುತ್ರರಂ ಆ ಚಂದನದಾಸನ ಮನೆಯಲ್ಲಿ ಇಟ್ಟಿರುವಂತೆ ತಿಳಿದು ಇದೆ ಎಂದನು. ಚಾಣಕ್ಯನು ಕೇಳಿ: —

ಎಲೈ ಮರಾಳನೇ, ಈ ಅರ್ಥವು ನಿನಗೆ ತಿಳಿದ ಪರಿ ಹೇಗೆ? ಎನಲು, ಮರಾಳನು:—

ಸ್ವಾಮಿಾ, ನಾನು ಈ ಚಿತ್ರಪಟಗಳಂ ತೆಗೆದುಕೊಂಡು ಶ್ರುತಿಲಯಗಳಿಂ ಗಾನಮಂ ಮಾಡುತ್ತ ಪ್ರತಿಗೃಹಗಳಲ್ಲಿಯೂ ಪಟಮಂ ತೋರಿಸುತ್ತ ಅವರು ಕೊಟ್ಟುದಂ ಸ್ವೀಕರಿಸುತ್ತ ಹಾಗೆ ಚಂದನದಾಸನ ಮನೆಯಲ್ಲಿಯೂ ತೋರಿಸು ತ್ತಿರುವಲ್ಲಿ ಐದು ವರುಷದವನಾಗಿಯೂ ಅಮಾತ್ಯ ರಾಕ್ಷಸನ ಹೋಲಿಕೆಯುಳ್ಳ ರೂಪವಂತನಾಗಿಯೂ ಇರುವ ಹುಡುಗನು ಈ ನನ್ನ ಸಂಗೀತಮಂ ಕೇಳಿ ಬಾಲ ಸ್ವಭಾವದಿಂದ ಅಂತರ್ಗೃಹದಿಂ ಓಡಿಬಂದು ನನ್ನ ಪಟದ ಸಮಿಾಪದಲ್ಲಿ ನಿಂತನು. ಆ ಮಗುವಂ ನೋಡಿ ಮನಸ್ಸಿಗೆ ಸಂಶಯ ತೋರಿ ಅದನ್ನೇ ನಾವು ನಿರೀಕ್ಷಿಸುತ್ತಿರುವ ಸಮಯದಲ್ಲಿ ಆ ಹುಡುಗನು ಓಡಿಬಂದ ಒಳಮನೆಯಲ್ಲಿ ಸ್ತ್ರೀಜನದ ಭೀತಿಗೆ ಅನುಗುಣವಾದ ಕಂಕಣರವದಿಂ ಮುಖರಿತಮಾದ ಕೈ ಚಪ್ಪಾಳೆಯ ಧ್ವನಿಯು ಮಗು ಓಡಿಹೋದುದಕ್ಕೆ ಭಯದಿಂದ ತಾನೇ ಹೇಳಿಕೊಳ್ಳುವ ಹೆಂಗಸಿನ ವಚನವೂ ಸಹ ಕೇಳಬಂದುದರಿಂದ ಇದೇನೋ ಇಲ್ಲಿ ವಿಶೇಷವಿರುವುದು. ತಿಳಿಯಬೇಕೆಂದು ನಂದರ ಭಾವಚಿತ್ರಪಟಂಗಳಂ ಹರಡಿಕೊಂಡು ಅವುಗಳಲ್ಲಿ ಅಮಾತ್ಯ ರಾಕ್ಷಸನ ಭಾವಚಿತ್ರಮಂ ತೆಗೆದು ತೋರಿಸುತ್ತ ಗಾನಮಂ ಮಾಡಿ ಅವರ ಯಶಸ್ಸಂ ಹೊಗಳುತ್ತ ಸಾವಕಾಶಂ ಗೆಯ್ಯುತ್ತಿರಲು ಆ ಸ್ತ್ರೀಯು ಆ ಅಂತರ್ಗೃಹದ ಬಾಗಿಲಲ್ಲಿ

ಬಂದುನಿಂತು ಸನ್ನೆಯಂ ಮಾಡಿ ಕರೆದಾಗ್ಯೂ ಆ ಮಗುವು ಹೋಗದೆ ಪಟದ ಬಳಿಯಲ್ಲೇ ನಿಂತಿದ್ದ ಕಾರಣದಿಂದ ಆಕೆಯು ತ್ವರೆಯಿಂದ ಬಂದು ಬಾಲನಂ ಜರೆದು ಅದರ ಭುಜವಂ ಪಿಡಿದು ಸೆಳೆಯಲು ಆ ಅರ್ಭಕನು ಹೋರುತ್ತ ಪಟವಂ ಬಿಟ್ಟು ಹೋಗದಿರಲು ಆಕೆಯು ಸಮೀಪದಲ್ಲಿ ನಿಲ್ಲಿಸಿದ್ದ ನಂದರ ಮತ್ತು ಅಮಾತ್ಯ ರಾಕ್ಷಸನ ಭಾವಚಿತ್ರಗಳಂ ನೋಡಿ ಖಿನ್ನಳಾಗಿ ಕಂಬನಿಯಂ ತುಂಬುತ್ತ ಸೆರಗಿನಿಂ ಕಣ್ಣೀರ್ಗಳನ್ನೊರಸಿಕೊಳ್ಳುತ್ತ ಮಗುವಂ ಒಂದು ಕೈಯಲ್ಲಿ ಸೆಳೆದುಕೊಂಡು ಹೋಗು ತ್ತಿರಲು, ಆ ಸ್ತ್ರೀಯ ಬೆರಳಿನಲ್ಲಿ ಪುರುಷನು ಧರಿಸತಕ್ಕ ವ್ಯಕ್ತವಾದ ಅಕ್ಷರದಿಂದ ಯುಕ್ತವಾದ ಅಷ್ಟಕೋಣದ ಒಂದು ಮೋಹರವಂ ಕಂಡೆನು. ಪೂರ್ಣಗರ್ಭವಂ ಧರಿಸಿ ಮೆಲ್ಲಮೆಲ್ಲನೆ ತೆರಳಿದುದರಿಂದ ಆ ಮಾನಿನಿಯ ಸೌಂದರ್ಯ ಲಕ್ಷಣಂಗಳು ಸಾವಕಾಶವಾಗಿ ತಿಳಿಯಬಂದುವು. ಇದೆಲ್ಲವಂ ಭಾವಿಸಿ ನೋಡಿದರೆ ರಾಕ್ಷಸನ ಪತ್ನೀಪುತ್ರರು ಚಂದನದಾಸನ ಮನೆಯಲ್ಲಿ ಪ್ರಚ್ಛನ್ನರಾಗಿ ಇದ್ದಾರೆಂಬುದು ನಿಶ್ಚಯ ವಾಗಿ ತೋರುತ್ತದೆ ಎನಲು, ಅದಂ ಕೇಳಿ ಚಾಣಕ್ಯನು ತನ್ನ ಮನದಲ್ಲಿ—ಇವನು ಹೇಳಿದುದೆಲ್ಲ ವಿಹಿತವಾಗಿ ಕಾಣುತ್ತದೆ. ಅವಳ ಕೈಯಲ್ಲಿದ್ದ ಮೋಹರವು ರಾಕ್ಷಸನ ದಾಗಿದ್ದೀತು. ಅದು ನಮ್ಮ ಕರಗತವಾದರೆ ಬಹುಕಾರ್ಯಕ್ಕೆ ಉಪಯುಕ್ತವಾಗ ಬಹುದು ಎಂದು ನಿಶ್ಚಯಿಸಿ ಅದಂ ಸಂಗ್ರಹಿಸುವ ಉಪಾಯವಂ ಯೋಚಿಸಿ:—

ಎಲೈ ಮರಾಳಕನೆ, ನೀನು ಹೇಳಿದರ್ಥವು ತಿಳಿಯಬಂದಿತು. ಚಂದ್ರಗುಪ್ತಾ ಭ್ಯುದಯನಿರೀಕ್ಷಣೆಯಲ್ಲಿ ಅಸಹನಭಾವಮುಳ್ಳ ಕ್ಷಪಣಕನೇ ಮೊದಲಾದ ಮೂವರಿಗೆ ತಕ್ಕುದಂ ಮಾಡಿಸುವೆವು. ನಿನ್ನ ಕೆಲಸದ ಮೇಲೆ ಇರುವವನಾಗು ಎಂದು ಅವನಂ ಕಳುಹಿಸಿ ಸಿದ್ಧಾರ್ಥಕನಂ ಕರಿಸಿ:-

ಎಲೈ ಚಂದನದಾಸನೆಂಬ ವರ್ತಕನ ಮನೆಯಲ್ಲಿ ರಾಕ್ಷಸನ ಹೆಂಡಿರು ಮಕ್ಕ ಳಿರುವರು. ಆತನ ಪತ್ನಿಯ ಕೈಯಲ್ಲಿ ರಾಕ್ಷಸನ ಮುದ್ರೆಯುಂಗುರವಿರುವುದು. ಈ ರೀತಿಯಿಂದ ಆ ಮೋಹವಂ ತರಿಸು ಎಂದು ನೇಮಿಸಿ ರಾಯಸದವರ ಬಳಿಯಲ್ಲಿರುವ ರಾಕ್ಷಸನ ಮುದ್ರೆಯ ಕಾಗದವಂ ತರಿಸಿ ಅದಂ ಸಿದ್ಧಾರ್ಥಕನ ಕೈಯಲ್ಲಿ ಕೊಟ್ಟು ಕಳುಹಿಸಲು ಚಾಣಕ್ಯರು ಆಜ್ಞಾಪಿಸಿದ ರೀತಿಗೆ ಸಿದ್ಧಾರ್ಥಕನು ಆ ಕಾಗದ ದಲ್ಲಿ ಒತ್ತಿರುವ ಮೋಹರದ ಪ್ರಕಾರ ಸುವರ್ಣದಿಂ ಮುದ್ರೆಯಂ ಮಾಡಿಸಿ ಹೇಳಿದ ಕಾರ್ಯವಂ ನಿರ್ವಹಿಸುವದರಲ್ಲಿ ನಿಪುಣೆಯಾದ ಓರ್ವ ಸೂಲಗಿತ್ತಿಯಂ ಏಕಾಂತದಲ್ಲಿ ಕರೆದು ಅವಳಿಗೆ ಸನ್ಮಾನವಾಗಿ ಆ ಮೋಹರವಂ ಅವಳ ಕೈಯಲ್ಲಿ ಕೊಟ್ಟು ಈ ರೀತಿಯಿಂದ ಅಮಾತ್ಯರಾಕ್ಷಸನ ಉಂಗುರವಂ ತಂದುಕೊಡುವವಳಾಗು ಎಂದು ನೇಮಿಸಿ ಆ ಮಂತ್ರಸಾನಿಯಂ ಕಳುಹಿಸಿ ಪುರದ ತಳವಾರನಂ ಬರಿಸಿ....ಎಲೈ, ನೀನು ಹೇಳುವ ಪ್ರಕಾರದಿಂದ ಈ ದಿನ ಪಟ್ಟಣದೊಳ್ ನಡೆದ ವೃತ್ತಾಂತವಂ ತಿಳಿಸುವಲ್ಲಿ ವಿಶೇಷವಾಗಿ ಇದೊಂದು ವರ್ತಮಾನವಂ ವಿಜ್ಞಾಪಿಸುವವನಾಗು ಎಂದು ಹೇಳಿ ಕಳುಹಿಸಲು ಅದೇರೀತಿಗೆ ಆ ತಳವಾರನು ತನ್ನ ವೇಳೆಯಲ್ಲಿ ಹೋಗಿ

ಆಸ್ಥಾನದಲ್ಲಿ ಕುಳಿತಿದ್ದ ಚಾಣಕ್ಯರಿಗೆ ಕೈಮುಗಿದು ಆ ದಿನದಲ್ಲಿ ನಡೆದ ಪುರದ ವಾರ್ತೆಯಂ ಕೇಳುತ್ತಿರುವಲ್ಲಿ—ಸ್ವಾಮಿಾ, ಈ ದಿವಸ ಒಬ್ಬ ಬ್ರಾಹ್ಮಣ ಸ್ತ್ರೀಯ ಪ್ರಸವ ಸಮಯದಲ್ಲಿ ಒಬ್ಬ ಸೂಲಗಿತ್ತಿಯು ಏನೋ ಮತ್ಸರದಿಂದ ಆ ಶಿಸುವಂ ಘಾತಿಸಿ ವಂಚಿಸಿ ಓಡಿಹೋದಳು ಎಂದು ಹೇಳಿದ ಮಾತಿಗೆ ಚಾಣಕ್ಯನು ಅತಿ ಕೃದ್ಧನಾದವನಂತೆ ಕೋಪಿಸಿಕೊಂಡು—ಎಲೈ, ಈ ಪುರದಲ್ಲಿ ಇಂಥಾ ಕಾರ್ಯವು ಎಷ್ಟು ನಡೆದಿರುವುದೋ ಈ ನಗರದ ಮಂತ್ರಸಾನಿಯರೆಲ್ಲರಂ ಹಿಡಿತಂದು ವಿಚಾರಿಸಿ ದಂಡಿಸಿರಿ, ಮುಂದೆ ಈ ಕೃತ್ಯವು ನಡೆಯದಂತೆ ಮಾಡುವವನಾಗು ಎಂದು ನೇಮಿಸಿ ಕಳುಹಿಸಲು ಅದೇ ರೀತಿಗೆ ತಳವಾರರು ಬೀದಿಬೀದಿಗಳಂ ಹುಡುಕಿ ಸೂಲಗಿತ್ತಿಯರು ಗಳಂ ಹಿಡಿದುಕೊಂಡು ಹೋಗುತ್ತಿರಲು ಆ ವೇಳೆಯಲ್ಲಿ ಸಿದ್ಧಾರ್ಥಕನಿಂದ ನೇಮಿಸಿದ ಸೂಲಗಿತ್ತಿಯು ತ್ವರಿತದಿಂ ಹೋಗಿ ಚಂದನದಾಸನ ಗೃಹದ ನಡುವೆಯ ಬಾಗಿಲಿನ ಮರೆಯಲ್ಲಿ ಅತಿ ಭೀತಿಯಿಂ ನಡುಗುವವಳಂತೆ ನಿಂತಿರಲಾಗಿ ಅವಳಂ ಕಂಡು ಆ ಮನೆಯ ಜನರು—ನೀನು ಯಾರು? ಯಾಕೆ ಬಂದೆ? ಎನಲು, ಅವಳು ಎಲ್ಲರ ಕಾಲುಗಳಂ ಕಟ್ಟಿಕೊಳ್ಳುತ್ತ—ಅಕ್ಕಂದಿರಾ, ಅರಮನೆಯವರು ಈ ಪೊಳಲ ಮಂತ್ರ ಸಾನಿಯರೆಲ್ಲರನ್ನೂ ಹಿಡಿದು ಎಲ್ಲೋ ದೇಶಾಂತರಕ್ಕೆ ಕಳುಹಿಸುವರಂತೆ. ನಾನು ನಾಲ್ಕು ಮಕ್ಕಳುಳ್ಳವಳು. ಈ ಅವಾಂತರ ನಿಲ್ಲುವವರೆಗೂ ನಾಲ್ಕು ದಿವಸ ಎಲ್ಲಿ ಯಾದರೂ ಕಣ್ಣಿಗೆ ಮರೆಯಾಗಿರಬೇಕು ಎನಲು ಅದಂ ಕೇಳಿ ಚಂದನದಾಸನ ಸತಿಯು—ನಮ್ಮ ಅಮಾತ್ಯರ ಪತ್ನಿಗೆ ಪ್ರಸವಕಾಲ ಸನ್ನಿಹಿತವಾಗಿರುವುದಷ್ಟೆ. ಆ ಸಮಯಕ್ಕೆ ಸೂಲಗಿತ್ತಿಯರು ದೊರಕುವರೋ ದೊರಕುವುದಿಲ್ಲವೋ? ಆದುದರಿಂದ ಇವಳು ಇಲ್ಲಿ ಇರಬೇಕು ಎಂದು ಬಗೆದು :—

ಎಲೈ ಮಂತ್ರಸಾನಿಯೇ, ನಿನ್ನಿಂದ ನಮಗೆ ಕೆಲಸಮುಂಟು. ಅನ್ಯತ್ರ ಹೋಗಬೇಡ. ನಮ್ಮ ಮನೆಯಲ್ಲೇ ಇರುವವಳಾಗು ಎನಲು, ಅವಳು—ನಮ್ಮವ್ವಾ, ನಾನು ಬದುಕಿದೆನು. ಹಾಗೇ ಆಗಲಿ ಎಂದು ಅಲ್ಲೇ ಇರುತ್ತಿದ್ದಳು. ಮತ್ತೊಂದು ದಿವಸ ರಾಕ್ಷಸನ ಭಾರ್ಯೆಗೆ ಪ್ರಸವವೇದನೆ ತೋರಲು ಆ ಸೂಲಗಿತ್ತಿಯಂ ಸೂತಿಕಾ ಗೃಹಕ್ಕೆ ಕಳುಹಿಸಿದರು. ಅವಳು ಲೋಕದ ಸೂಲಗಿತ್ತಿಯರೆಲ್ಲರಿಗಿಂತಲೂ ಅತಿಶಯ ವಾಗಿ ರಾಕ್ಷಸನ ಪತ್ನಿಯಂ ಸಂತೈಸುತ್ತಿರಲು ಆಕೆ ಸ್ತ್ರೀಯರುಗಳ ಕಟ್ಟಳೆಯ ಮೇರೆಗೆ ಆಭರಣಗಳಂ ಸಡಿಲಿಸಿ ಮಂತ್ರಸಾನಿಯ ವಶವಂ ಮಾಡಿ ಉಟ್ಟಿದ್ದ ಸೀರೆಯಂ ಬಿಚ್ಚಿ ಮತ್ತೊಂದು ಅರಿವೆಯನ್ನುಟ್ಟು ಪ್ರಸವವೇದನೆಯನ್ನನುಭವಿಸುತ್ತ ಶಿಸುವಂ ಹಡೆಯುತ್ತಿರಲು, ಇವಳು ಆ ವೇಳೆಯೊಳ್ ಭೂಷಣಂಗಳ ಜೊತೆಯಲ್ಲಿದ್ದ ರಾಕ್ಷಸನ ಮೋಹರಮಂ ತೆಗೆದುಕೊಂಡು ಸಿದ್ಧಾರ್ಥಕನು ಕೊಟ್ಟಿದ್ದ ಮುದ್ರೆಯ ಉಂಗುರಮಂ ತೊಡವುಗಳ ಜೊತೆಯಲ್ಲಿರಿಸಿ ಅಲ್ಲಿನ ಕಾರ್ಯಮಂ ನೆರವೇರಿಸಿ ಆಕೆಯ ಒಡವೆಗಳಂ ಮುಂದುಗಡೆಯಲ್ಲಿ ಲೆಕ್ಕಮಂ ಮಾಡಿ ಅವಳಿಗೆ ಒಪ್ಪಿಸಿ ಬಂದು ಚಂದನ ದಾಸನ ಪತ್ನಿಯನ್ನಪ್ಪಣೆಯಂ ಕೇಳಲು, ಆಕೆಯು ಸೂಲಗಿತ್ತಿಗೆ ಸನ್ಮಾನಮಂ

ಮಾಡಿ ವೀಳಯಂಗೊಟ್ಟು ಕಳುಹಿಸಿದಳು. ಆ ಬಳಿಕ ಅವಳು ಬಂದು ಆ ಮೋಹರ ವನ್ನು ಸಿದ್ಧಾರ್ಥಕನ ಕೈಗೆ ಒಪ್ಪಿಸಲು ಅವನು ಅದನ್ನು ತೆಗೆದುಕೊಂಡು ಚಾಣಕ್ಯರ ವಶಕ್ಕೆ ಕೊಟ್ಟನು. ಅದಂ ಚಾಣಕ್ಯನು ನೋಡಿ ಮರಾಳಕನು ಹೇಳಿದ ಮೇರೆ ಅಷ್ಟಕೋಣವಾಗಿಯೂ ರಾಕ್ಷಸನ ಹೆಸರುಳ್ಳುದಾಗಿಯೂ ಪುರಾತನವಾಗಿಯೂ ಇರುವುದರಿಂದ ಈ ಅಂಗುಳೀಯಕವು ರಾಕ್ಷಸನದೇ ಹೌದು ಎಂದು ನಿರ್ಣಯಿಸಿ ತನ್ನ ಮನಸ್ಸಿನಲ್ಲಿ—ಈ ಮುದ್ರೆಯು ದೊರಕಿದ ಕಾರಣದಿಂದ ಮಲಯಕೇತುವ ನ್ನನುವರ್ತಿಸಿರುವ ರಾಕ್ಷಸನಿಗೆ ಆ ರಾಜಪುತ್ರನಿಂದಲೇ ತಿರಸ್ಕಾರಮುಂಟಾಗಿ ಆತನು ತಾನಾಗಿ ನಮ್ಮಲ್ಲಿಗೆ ಬರುವಂತೆ ಮಾಡುವೆನೆಂದು ನಿಶ್ಚಯಿಸಿ ತನ್ನ ಬಳಿಗೆ ಅಮಾತ್ಯನು ಬರುವ ಪರಿಯಂತರವೂ ಮಾಡತಕ್ಕ ಪ್ರಯತ್ನಮಂ ಯೋಚಿಸಿ ಇಂಥವರ ಬಳಿಯಿಂದ ಇಂಥವರ ಬಳಿಗೆಂಬುದಾಗಿ ಒಬ್ಬರ ಹೆಸರನ್ನೂ ಕಾಣಿಸದೆ ಒಂದು ಕಾಗದದಲ್ಲಿ ಪ್ರಕೃತೋಚಿತವಾದ ಸಂಗತಿಗಳಂ ಬರೆದು ಸಿದ್ಧಾರ್ಥಕನಂ ರಹಸ್ಯದಲ್ಲಿ ಕುಳ್ಳಿರಿಸಿಕೊಂಡು :—

ಎಲೈ ಆಪ್ತನೇ, ಒಂದು ಕಾರ್ಯಾರ್ಥವಾಗಿ ಬರೆದಿರುವ ಈ ಪತ್ರಿಕೆಯಲ್ಲಿನ ಅಕ್ಷರ ಗಳು ವೈದಿಕಲಿಪಿಯಾದುದರಿಂದ ನಿನಗೆ ಪರಿಚಿತನಾಗಿರುವ ಶಕಟದಾಸನ ಅಕ್ಷರದಲ್ಲಿ ಸ್ಫುಟವಾಗಿ ಬೇರೆ ಪತ್ರಿಕೆಯನ್ನು ಬರೆಸಿಕೊಂಡು ಬರುವವನಾಗು ಎಂದು ಪತ್ರಮಂ ಅವನ ಕೈಯಲ್ಲಿ ಕೊಡಲು ಮಹಾಪ್ರಸಾದವೆಂದು ಸಿದ್ಧಾರ್ಥಕನು ಅದಂ ತೆಗೆದು ಕೊಂಡು ಶಕಟದಾಸನ ಬಳಿಗೆ ಹೋಗಿ ಆ ಕಾಗದಮಂ ತಾನು ಮೊದಲು ನೋಡಿ ಕೊಂಡು—ಚಾಣಕ್ಯರು ಏನೋ ಮಹತ್ಕಾರ್ಯಮಂ ಯೋಚಿಸಿ ಅನ್ಯರಿಗೆ ತಿಳಿಯ ದಂತೆ ಈ ಪತ್ರಿಕೆಯಂ ಲೇಖನಗೊಳಿಸಿದ್ದಾರೆ. ಇದರ ಫಲಮಂ ಪರ್ಯವಸಾನ ದಲ್ಲಿಯೇ ಹೊರತು ಈಗ ತಿಳಿಯಕೂಡದೆಂದು ಬಗೆದು ಶಕಟದಾಸನ ಸಂಗಡ ಪ್ರಕೃತೋಚಿತವಾಗಿ ಮಾತಾಡುತ್ತ ಕೆಲವು ಹೊತ್ತಿನ ಮೇಲೆ ತನ್ನ ಬಳಿಯಲ್ಲಿದ್ದ ಕಾಗದಮಂ ಆತನ ಕೈಯಲ್ಲಿ ಕೊಟ್ಟು :—

ಅಯ್ಯಾ ಶಕಟದಾಸನೇ, ಈ ಪತ್ರದಲ್ಲಿ ಒಂದು ಕೌತುಕಮುಂಟು. ಇದು ಪ್ರಾಕೃತ ವಾಕ್ಯದಿಂದ ಬರೆದಿರುವುದಾದರೂ ಇದರ ಅಕ್ಷರಗಳಂ ವ್ಯತ್ಯಸ್ತವಾಗಿ ಪ್ರಯೋಗಿಸಿದರೆ ಸಂಸ್ಕೃತ ಶ್ಲೋಕಗಳಾಗುತ್ತಿವೆ. ಆ ಶ್ಲೋಕಂಗಳಂ ಪ್ರತಿಲೋಮ ವಾಗಿ ಬರೆದರೆ ಚಿತ್ರಬಂಧಗಳು ಆಗುತ್ತಿವೆ. ಅದುಕಾರಣ ಸ್ಫುಟವಾಗಿ ಇನ್ನೊಂದು ಪ್ರತಿಯಂ ಬರೆಯುವವನಾಗು. ಈ ಲಿಪಿಗಳು ಸಂದಿಗ್ಧವಾಗಿವೆ. ಒಬ್ಬ ಕವೀಶ್ವರನು ಬರೆದು ಇದರ ಪದ್ಧತಿಯಂ ಹೇಳಿದನು ಎನಲು, ಆಗ ಶಕಟದಾಸನು ತನ್ನ ಕೈಬರಹ ದಿಂದ ಬೇರೆ ಪ್ರತಿಯಂ ಬರೆದು ಸಿದ್ಧಾರ್ಥಕನ ಕೈಯಲ್ಲಿ ಕೊಟ್ಟು—ಇದರ ಪದ್ಧತಿ ಏನು ? ಎಂದು ಕೇಳಲು, ಸಿದ್ಧಾರ್ಥಕನು ಸ್ವಲ್ಪಹೊತ್ತು ಯೋಚಿಸುವವನಂತೆ ಇದ್ದು ನೋಡಿ—ಅಯ್ಯಾ ಶಕಟದಾಸನೇ, ಕವೀಶ್ವರನು ಹೇಳಿದ ಕ್ರಮವು ಸ್ವಲ್ಪ ವಿಸ್ಮೃತವಾದಂತೆ ಇದೆ. ಇದನ್ನು ಇನ್ನೊಂದುವೇಳೆ ಕೇಳಿ ತಿಳಿದು ಹೇಳುವೆನೆಂಬು

ವಾಗಿ ಉಸುರಿ ಅಲ್ಲಿಂದ ಹೊರಟು ಆ ಕಾಗದವಂ ಚಾಣಕ್ಯರ ಕೈಯಲ್ಲಿ ಕೊಡಲು ಆತನು ಅದಂ ನೋಡಿಕೊಂಡು ಆ ಪತ್ರವಂ ಮಡಿಸಿ ತನ್ನ ಬಳಿಯಲ್ಲಿದ್ದ ರಾಕ್ಷಸನ ಮುದ್ರೆಯುಂಗುರದಿಂದ ಅದಕ್ಕೆ ಮೋಹರವಂ ಮಾಡಿ ಆ ಬಳಿಕ ಸಿದ್ಧಾರ್ಥಕನಂ ಕರೆದು :—

ಎಲೈ ನಮಗೆ ಪ್ರಿಯನಾದ ಸಿದ್ಧಾರ್ಥಕನೇ, ಈಗಿನವರೆಗೆ ಚಂದ್ರಗುಪ್ತನ ಕೆಲಸವು ನಿನ್ನಿಂದ ಬಹಳವಾಗಿ ಅನುಕೂಲಿಸಿತು. ಕಾರ್ಯಘಟನೆಯಲ್ಲಿ ಸಮರ್ಥನಾದುದರಿಂದ ನಿನಗೆ ಇನ್ನೊಂದು ಕೆಲಸವಂ ಹೇಳುವೆನು. ಅದಂ ಉಸುರಿದ ರೀತಿಗೆ ಸಾಧಿಸುವವನಾಗು ಎಂದು ಹೇಳತಕ್ಕ ಮಾತುಗಳೆಲ್ಲವಂ ಅವನ ಕಿವಿಯಲ್ಲಿ ಹೇಳಿ ಆ ಕಾಗದವನ್ನೂ ರಾಕ್ಷಸನ ಮೋಹರನ್ನೂ ಸಹ ಆ ಸಿದ್ಧಾರ್ಥಕನ ಕೈಯಲ್ಲಿ ಕೊಟ್ಟು ಹೋಗಿಬಾರೆಂದು ಕಳುಹಿಸಿ ಈ ಲೇಖನಕ್ಕೆ ಅನುಕೂಲವಾಗಿ ಮೊದಲು ಬೊಕ್ಕಸದಲ್ಲಿ ಕಟ್ಟಿಸಿ ಇಡಿಸಿರುವ ಪರ್ವತರಾಜನ ಆಭರಣಗಳು ರಾಕ್ಷಸನಿಗೆ ಸೇರುವಂತೆ ಮಾಡಿಸಬೇಕೆಂದು ಯೋಚಿಸುತ್ತಿರಲು ಚಂದ್ರಗುಪ್ತನ ಅಪ್ಪಣೆಯಿಂದ ಅಂತಃಪುರದ ಕಂಚುಕಿಯೊಬ್ಬನು ಬಂದು ಚಾಣಕ್ಯರಂ ಕಂಡು ಕೈಮುಗಿದು :—

ಸ್ವಾಮಿ, ಈ ದಿವಸ ಪರ್ವತೇಶ್ವರನಿಗೆ ಮಾಡಿಸಿದ ಪರಲೋಕಕ್ರಿಯೆಗಳೆಲ್ಲವೂ ಪರಿಸಮಾಪ್ತಮಾದುವು. ಆತನು ಅಲಂಕರಿಸಿದ್ದ ಆಭರಣಂಗಳು ಬೊಕ್ಕಸದಲ್ಲಿ ಇಡಿಸಿ ಇವೆಯಷ್ಟೆ. ಇದಕ್ಕೆ ಅಪ್ಪಣೆ ಏನು? ಎಂದು ಚಂದ್ರಗುಪ್ತ ಮಹಾರಾಜರು ವಿಜ್ಞಾಪಿಸಿಬಾರೆಂದು ನನ್ನಂ ಕಳುಹಿಸಿದರು ಎಂಬುದಾಗಿ ಅರಿಕೆ ಮಾಡಲು ಅದಂ ಕೇಳಿ ಚಾಣಕ್ಯನು—ನಾನು ಯೋಚಿಸಿದ್ದ ಅರ್ಥವನ್ನೇ ಚಂದ್ರಗುಪ್ತನು ಹೇಳಿಕಳುಹಿಸಿದನು. ಉತ್ತಮವಾಯಿತು ಎಂದು ತಿಳಿದು ಆ ಕಂಚುಕಿಯಂ ಕುರಿತು :—

ಎಲೈ ಶೋಣಕನೇ, ಪರ್ವತರಾಜನ ಮಂಡನವು ಅಮೂಲ್ಯವಾದುದರಿಂದ ಅದರ ದಾನಕ್ಕೆ ಪಾತ್ರರಾದವರನ್ನು ಪರೀಕ್ಷಿಸಿ ಸಂಗ್ರಹಿಸಿದ್ದೇನೆ. ಈ ಬ್ರಾಹ್ಮಣರಂ ಕರೆದುಕೊಂಡುಹೋಗಿ ನಾವು ಹೇಳಿದೆವೆಂದು ಆ ಭೂಷಣಂಗಳಂ ಇವರಿಗೆ ಕೊಡಿಸುವವನಾಗೆಂಬುದಾಗಿ ನಿರೂಪಿಸಿ ತನಗೆ ಅನುಕೂಲರಾದ ವಿಶ್ವಾವಸು ಎಂಬ ಭೂಸುರನೇ ಮುಖ್ಯರಾದ ಮೂರುಮಂದಿ ವಿಪ್ರರಂ ಕರೆದು :—

ಅಯ್ಯಾ ವಿದ್ಯಾಸಂಪನ್ನರಾದ ಬ್ರಾಹ್ಮಣರುಗಳಿರಾ, ಈ ದಿವಸ ಚಂದ್ರಗುಪ್ತನು ನಿಮಗೆ ಆಭರಣಂಗಳಂ ಕೊಡುವನು. ನೀವು ಅಲಂಕರಿಸಿಕೊಂಡು ಇಲ್ಲಿಗೆ ಬಂದರೆ ಸುಪ್ರೀತರಾದ ನಿಮ್ಮಂ ನೋಡಿ ಸಂತೋಷಪಡುವೆನು. ಈ ಕಂಚುಕಿಯ ಸಂಗಡ ಹೋಗಿರಿ ಎಂದು ಹೇಳಿ ಮತ್ತೊಂದು ಕಾರ್ಯಗೌರವಮಂ ಯೋಚಿಸಿ ಆ ಕಂಚುಕಿಯಂ ಕುರಿತು :—

ಎಲೈ ಶೋಣಕನೇ, ನಾವು ಹೇಳಿದೆವೆಂದು ನಿಮ್ಮ ಅರಸಿಗೆ ಅರಿಕೆ ಮಾಡುವುದೇನೆಂದರೆ—ನೀನು ಪ್ರಭುವಾಗಿ ರಾಜ್ಯವಿಚಾರಮಂ ಮಾಡುವಲ್ಲಿ ಯಾವುದೊಂದು ವಿಷಯಕ್ಕಾದರೂ ನಮ್ಮ ಬಳಿಗೆ ಹೇಳಿಕಳುಹಿಸಿ ಕಾರ್ಯಮಂ ಮಾಡುತ್ತಿದ್ದರೆ

ಇನ್ನೆಷ್ಟು ದಿವಸಕ್ಕೆ ನಿನಗೆ ರಾಜ್ಯಭಾರದಲ್ಲಿ ಬುದ್ಧಿ ಸ್ಫುರಿಸಬೇಕು? ಇನ್ನು ಮೇಲೆ ಸ್ವರಾಷ್ಟ್ರವಿಚಾರವೇನಿದ್ದರೂ ವಿಮರ್ಶೆಯಿಂದೆಸಗುತ್ತ ಪರರಾಷ್ಟ್ರವಿಚಾರದಲ್ಲಿ ಮಾತ್ರ ನಮಗೆ ತಿಳುಹಿಸಿ ಮಾಡುವವನಾಗು. ಈ ಪ್ರಕಾರವಾಗಿ ಚಂದ್ರಗುಪ್ತನಿಗೆ ಹೇಳು ವಂತೆ ಅವನಿಗೆ ಕಟ್ಟುಮಾಡಿ ಕಳುಹಿಸಲು ಆ ಕಂಚುಕಿಯು ಬ್ರಾಹ್ಮಣರೊಡನೆ ಕೂಡಿದವನಾಗಿ ಬಂದು ಚಂದ್ರಗುಪ್ತನಂ ಕಂಡು ಕೈಮುಗಿದು ನಿಂತು:—

ಜೀಯಾ, ಪರ್ವತರಾಜನ ಭೂಷಣದಾನಕ್ಕೆ ಉತ್ತಮ ಪಾತ್ರರೆಂದು ತಿಳಿದು ಚಾಣಕ್ಯರು ಇವರಂ ಕಳುಹಿಸಿದ್ದಾರೆ. ಮತ್ತು ಯಾವ ಕಾರ್ಯವಾದರೂ ಸ್ವರಾಷ್ಟ್ರ ವಿಷಯಕವಾಗಿದ್ದರೆ ಪ್ರಭುವಾಗಿರುವುದರಿಂದ ಅದೆಲ್ಲವಂ ಸ್ವತಂತ್ರನಾಗಿ ತಾವೇ ಮಾಡತಕ್ಕುದು ಎಂದು ಯಜಮಾನರಾದ ಚಾಣಕ್ಯರ ಅಪ್ಪಣೆಯಾಗಿದೆ ಎನಲು, ಅದಂ ಕೇಳಿ ಚಂದ್ರಗುಪ್ತನು ಪರ್ವತರಾಜನ ಆಭರಣಗಳಂ ತರಿಸಿ ಆ ವಿಶ್ವಾವಸು ಮುಖ್ಯರಾದ ಬ್ರಾಹ್ಮಣರಿಗೆ ಅಲಂಕರಿಸಿ ಅವರಂ ಕಳುಹಿಸಿ ಆ ಬಳಿಕ ಚಾಣಕ್ಯರು ಹೇಳಿಕಳುಹಿಸಿದ ವಾಕ್ಯಮಂ ನೆನೆದು ಏನೋ ಒಂದು ಕಾರ್ಯಾರ್ಥವಾಗಿ ತಮ್ಮನ್ನ ಪೇಕ್ಷಿಸದೆ ಸ್ವದೇಶವಿಚಾರಮಂ ಮಾಡುವಂತೆ ಯಜಮಾನರು ತನಗೆ ಹೇಳಿಕಳುಹಿ ಸಿದ ಬಳಿಕ ಎಂದಿನಂತೆ ನಾನು ಸುಮ್ಮನಿದ್ದರೆ ನಿಮ್ಮರಕ್ಕೆ ಯೋಗ್ಯನಾದೇನೆಂದು ತಿಳಿದು ಸ್ವರಾಜ್ಯದ ವಿಚಾರಮಂ ಪರಾಪೇಕ್ಷೆಯಿಲ್ಲದೆ ತಾನೇ ಮಾಡುತ್ತಿದ್ದನು.

ಅನಂತರದಲ್ಲಿ ಪರ್ವತರಾಜನ ಆಭರಣಗಳಿಂದ ಅಲಂಕೃತರಾಗಿ ತನ್ನ ಬಳಿಗೆ ಬಂದ ವಿಶ್ವಾವಸು ಮುಖ್ಯರಾದ ದ್ವಿಜರಂ ನೋಡಿ ಚಾಣಕ್ಯನು—ಎಲೈ ಆಪ್ತರಾದ ವಿಪ್ರೋತ್ತಮರುಗಳಿರಾ, ಏನೋ ಒಂದು ಕಾರ್ಯಾರ್ಥವಾಗಿ ಅಭರಣದಾನಮಂ ನಿಮಗೆ ಕೊಡಿಸಿದೆನು. ಈಗ ಮಲಯಕೇತುವನ್ನಾಶ್ರಯಿಸಿ ಪರ್ವತರಾಜ್ಯದಲ್ಲಿರುವ ಅಮಾತ್ಯ ರಾಕ್ಷಸನ ಗೃಹಸಮೀಪದಲ್ಲಿ ವರ್ತಕರ ವೇಷಮಂ ಧರಿಸಿ ನೀವು ಅಲಂಕರಿ ಸಿರುವ ಈ ಆಭರಣಂಗಳಂ ಮೂರು ಸಂಪುಟದಲ್ಲಿರಿಸಿಕೊಂಡು ಆ ಅಮಾತ್ಯನ ಬಳಿಗೆ ಹೋಗುವ ಬರುವ ಆಪ್ತಜನರ ಮುಖದಿಂದ ಈ ಭೂಷಣಗಳಂ ಕ್ರಯಕ್ಕೆ ಕೊಡು ವೆವು ಎಂದು ಹೇಳಿಕಳುಹಿಸಿ ರಾಕ್ಷಸನಲ್ಲಿ ಅಗ್ಗವಾಗಿಯಾದರೂ ಕ್ರಯಕ್ಕೆ ಹೊಂದಿಸಿ ಅದರ ಮೌಲ್ಯಧನವನ್ನು ಯಥಾರ್ಥವಾಗಿ ನೀವೇ ತೆಗೆದುಕೊಳ್ಳಿರಿ. ಎಷ್ಟು ಕಡಮೆ ಯಾದರೂ ಮೂರುಲಕ್ಷ ದ್ರವ್ಯಕ್ಕೆ ಕಡಮೆಯಾಗದು. ಈ ಕಾರ್ಯಮಂ ಮಾಡಿ ಬಂದು ನಮಗೆ ತಿಳುಹಿಸಿರಿ ಎಂದು ಆ ಬ್ರಾಹ್ಮಣರಂ ಕಳುಹಿಸಿ ತನ್ನ ಬಳಿಯಣ ಶಿಷ್ಯನಂ ಕರೆದು:

ಎಲೈ ಕುಶಬರ್ಹಿಯೇ, ಜೀವಸಿದ್ಧಿ ಎಂಬ ಕ್ಷಪಣಕನು ರಾಕ್ಷಸನಿಂದ ಪ್ರೇಷಿತ ನಾಗಿ ವಿಷಕನ್ಯೆಯಂ ಪರ್ವತರಾಜನಿಗೊಪ್ಪಿಸಿ ಅವನಂ ಸಂಹಾರಂಗೆಯ್ಸಿದುದರಿಂದ ದ್ರೋಹಿಯಾದ ಅವನನ್ನು ಚಂದ್ರಗುಪ್ತರ ಅಪ್ಪಣೆಯ ಮೇರೆಗೆ ಪುರದಿಂ ಹೊರ ಡಿಸುವೆವೆಂದು ಸಾರುತ್ತ ಆ ಜೀವಸಿದ್ಧಿಯಂ ಹೊರಡಿಸುವಂತೆ ನಾವು ಆಜ್ಞಾಪಿಸಿದ್ದೇ ವೆಂಬುದಾಗಿ ತಳವಾರನಾದ ದಂಡಕನಿಗೆ ಹೇಳಿಬಾರೆಂದು ಕಳುಹಿಸಲು, ಅವನು

ಹೋಗಿ ಉಸುರಿ ಬಂದು ಅಪ್ಪಣೆಯ ಪ್ರಕಾರ ಊರುಗಾವಲವನು ಕ್ಷಪಣಕನನ್ನು ಹೊರಡಿಸಿದನೆಂದು ತಿಳುಹಿಸಿದನು.

ಆ ಬಳಿಕ ಚಾಣಕ್ಯನು ಇನ್ನೊಬ್ಬ ಶಿಷ್ಯನಂ ಕರೆದು—ಎಲೈ ಪಶುಲೋಮ ಕನೇ, ಅಮಾತ್ಯನಿಗೆ ಮಿತ್ರನಾದ ಶಕಟದಾಸನು ಈ ಊರಲ್ಲಿ ಇದ್ದುಕೊಂಡು ದಾರುವರ್ಮಾದಿಗಳಿಗೆ ಸಹಾಯಕನಾಗಿ ಚಂದ್ರಗುಪ್ತನಿಗೆ ದ್ರೋಹವಂ ಎಣಿಸಿದುದ ರಿಂದ ಆ ಪ್ರಭುವಿನ ಅಪ್ಪಣೆಯ ಮೇರೆಗೆ ಈ ಶಕಟದಾಸನಂ ಶೂಲಕ್ಕೆ ಹಾಕುವೆ ವೆಂದು ಸಾರಿಕೊಂಡು ಹೋಗಿ ಅವನಂ ಶೂಲಾರೋಹಣವಂ ಮಾಡಿಸುವಂತೆ ನಾವು ಹೇಳಿದುದಾಗಿ ದಂಡಪಾಶಕನಿಗೆ ತಿಳಿಸಿಬಾರೆಂದು ಉಸುರಿ ಕಿವಿಯಲ್ಲಿ ಮತ್ತೊಂದು ವಾಕ್ಯವಂ ಸೂಚಿಸಲು ಅವನು ಅದೇ ಪ್ರಕಾರ ಹೋಗಿಬಂದು ಶಕಟದಾಸನಂ ಹಿಡಿತರುವುದಕ್ಕೆ ದಂಡಪಾಶಕನು ಹೋದನೆಂದು ಚಾಣಕ್ಯನಿಗೆ ಬಿನ್ನೈಸಿದನು.

ಅನಂತರ ಚಾಣಕ್ಯನು ಬೇರೊಬ್ಬ ಶಿಷ್ಯನಂ ಕರೆದು ಎಲೈ ಶೀಘ್ರಕಾರಿಯೇ, ಬಳೆಗಾರ ಸೆಟ್ಟಿಯಾದ ಚಂದನದಾಸನಂ ಕರೆದುಕೊಂಡುಬಾರೆಂದು ಹೇಳಲು, ಅವನು ಹೋಗಿ ಚಾಣಕ್ಯನ ಅಪ್ಪಣೆಯನ್ನು ಚಂದನದಾಸನಿಗರುಹಿದನು. ಆ ಸೆಟ್ಟಿಯು ತನ್ನ ಮನಸ್ಸಿನಲ್ಲಿ—ಕಠಿಣಚಿತ್ತಮುಳ್ಳವನಾದ ಚಾಣಕ್ಯನಂ ಕಂಡರೆ ನಿರಪರಾಧಿ ಯಾದರೂ ಭೀತನಾಗುವನು. ನಾನಾದರೋ ಮಹಾಪರಾಧಿಯು. ಅವನಂ ಕಂಡ ಬಳಿಕ ನನಗೇನು ವಿಪತ್ತು ಬರುವುದೋ! ಒಳ್ಳೆಯದು. ಮಿತ್ರಕಾರ್ಯಾರ್ಥ ವಾಗಿ ಬಂದರೂ ಬರಲಿ. ರಾಕ್ಷಸನ ಗೃಹಜನಮಾತ್ರ ಸಿಕ್ಕದಂತೆ ಮಾಡಿದರೆ ಅದೇ ನನಗೆ ಪರಮ ಲಾಭವೆಂದು ನಿಶ್ಚಯಿಸಿ ಚಾಣಕ್ಯ ಶಿಷ್ಯನಂ ಕುರಿತು :—

ಅಯ್ಯಾ ವಿಪ್ರೋತ್ತಮನೇ, ನಾನು ಧರಿಸಿರುವ ವಸ್ತ್ರಗಳು ಮಲಿನವಾಗಿವೆ. ದೊಡ್ಡವರಂ ಕಾಣುವುದಕ್ಕೆ ಬೇರೆ ಧೌತಾಂಬರಗಳನ್ನುಟ್ಟುಕೊಂಡು ಬರುವೆನು. ನೀನು ಅವರೆಗೂ ಈ ಪೀಠದ ಮೇಲೆ ಕುಳಿತಿರಬಹುದು ಎಂದು ಹೇಳಿ ಒಳಗೆ ಹೋಗಿ ತನಗೆ ಆಪ್ತನಾದ ಧನಸೇನನಂ ಕರೆದು—ಎಲೈ, ಕ್ರೂರನಾದ ಚಾಣಕ್ಯನು ನನ್ನಂ ಕರೆಯಕಳುಹಿಸಿದ್ದಾನೆ. ಅವನ ಬಳಿಗೆ ಹೋದಬಳಿಕ ಏನಾಗುವುದೋ ತಿಳಿಯ ಕೂಡದು. ನೀನು ಅಮಾತ್ಯರ ಕುಟುಂಬದವರನ್ನು ಮತ್ತೊಂದು ರಹಸ್ಯಸ್ಥಾನದಲ್ಲಿ ಇರಿಸಿ ಕಾದುಕೊಂಡಿರಿ ಎಂದು ನೇಮಿಸಿ, ತಾನು ಮಡಿ ಬಟ್ಟೆಗಳಂ ಹೊದೆದು ಕೊಂಡು ಹೊರಟುಬಂದು ಚಾಣಕ್ಯನಂ ಕಂಡು ಕೈಮುಗಿಯಲು :—

ಎಲೈ ಚಂದನದಾಸನೇ, ನೀನು ಕ್ಷೇಮದಲ್ಲಿ ಇದ್ದೀಯಾ? ಮಾಡುವ ವ್ಯಾಪಾರಗಳು ನಿರುಪಾಧಿಕಗಳಾಗಿ ನಡೆಯುತ್ತಲಿವೆಯೇ? ಕುಳ್ಳಿರು ಎಂದು ಚಾಣಕ್ಯನು ನುಡಿಯಲು, ಆ ಮಾತಿಗೆ ಚಂದನದಾಸನು :—

ಸ್ವಾಮಿಾ, ತಮ್ಮ ಕೃಪೆಯಿಂದ ಎಲ್ಲವೂ ನಿಷ್ಕಂಟಕವೆಂದು ಹೇಳಿ ನಮಸ್ಕರಿಸಿ ಕುಳಿತುಕೊಂಡನು.

ಬಳಿಕ ಚಾಣಕ್ಯನು—ಎಲೈ ಚಂದನದಾಸನೇ, ಪ್ರಜೆಗಳು ಚಂದ್ರಗುಪ್ತನಂ ಒಳ್ಳೆಯವನೆಂದು ಹೇಳುತ್ತಾರೆಯೋ ? ನಂದರನ್ನೇ ಉತ್ತಮರೆಂದು ಹೊಗಳಿ ಕೊಳ್ಳುತ್ತಾರೋ ? ಎನಲು,

ಸ್ವಾಮಿಾ, ಶರತ್ಕಾಲದ ಚಂದ್ರನಂ ಕಂಡ ನೈದಿಲೆಗಳಂತೆ ಪ್ರಜೆಗಳು ಚಂದ್ರ ಗುಪ್ತ ಮಹಾರಾಜರನ್ನೇ ಅಪೇಕ್ಷಿಸುತ್ತಿದ್ದಾರೆ ಎಂದನು.

ಚಾಣಕ್ಯನು—ಎಲೈ ಚಂದನದಾಸನೇ, ಸಂತುಷ್ಟರಾದ ಪ್ರಜೆಗಳ ದೆಸೆಯಿಂದ ಅರಸುಗಳ ಪ್ರತ್ಯುಪಕಾರವನ್ನಪೇಕ್ಷಿಸುವುದು ಪೂರ್ವಮರ್ಯಾದೆ ಎನಲು,

ಚಂದನದಾಸನು—ಸ್ವಾಮಿಯವರ ಅಪ್ಪಣೆಯಾದಂತೆ ಸರ್ವರೂ ತಮ್ಮ ಶಕ್ತಿಯಂ ಮಿಾರಿ ನಡೆದುಕೊಂಡಾರು ಎಂದನು. ಅದಕ್ಕೆ ಚಾಣಕ್ಯನು :—

ಎಲೈ ಚಂದನದಾಸನೇ, ನಿರಪರಾಧಿಗಳಾದ ರಾಷ್ಟ್ರವಾಸಿಗಳ ದೆಸೆಯಿಂದ ದಂಡವಂ ತೆಗೆಯುವುದಕ್ಕೆ ಇದು ನಂದರ ಪ್ರಭುತ್ವವಲ್ಲ. ನೀವೆಲ್ಲರೂ ಕ್ಷೇಮಿಗ ಳಾಗಿದ್ದರೆ ಅದೇ ಚಂದ್ರಗುಪ್ತನಿಗೆ ಮಹಾಭ್ಯುದಯವು ಎನಲು,

ಚಂದನದಾಸನು—ಸ್ವಾಮಿಾ, ಅದೇ ಮೇರೆಗೆ ನಮ್ಮೆಲ್ಲರಂ ರಕ್ಷಿಸಬೇಕು ಎಂದನು.

ಎಲೈ ಚಂದನದಾಸನೇ, ದೊರೆಗಳಿಗೆ ಅಪ್ರಿಯವಂ ಮಾಡದಿದ್ದರೆ ಸಂರಕ್ಷಿತ ರಾಗಿದ್ದೀರಿ ಎಂದು ಚಾಣಕ್ಯನು ಹೇಳಿದುದಕ್ಕೆ ಚಂದನದಾಸನು :

ಸ್ವಾಮಿಾ, ದುರಾತ್ಮಕನಾದವನು ಜನೇಶ್ವರರಿಗೆ ಅಪ್ರಿಯವನ್ನು ಎಣಿಸುವನು ಎನಲಾಗಿ ಚಾಣಕ್ಯನು :—

ಎಲೈ ಚಂದನದಾಸನೇ, ಮೊದಲು ನೀನೇ ರಾಜದ್ರೋಹಿಯಾಗಿದ್ದೀ ಎಂದನು. ಅದಂ ಕೇಳಿ ಚಂದನದಾಸನು :—

ಬುದ್ಧೇಶ ! ಬುದ್ಧೇಶ ! ಎಂದು ತನ್ನ ದೇವರಂ ನೆನೆಯುತ್ತ—ಸ್ವಾಮಿಾ, ಅಗ್ನಿಯೊಡನೆ ತೃಣಂಗಳಿಗೆ ಕಲಹವುಂಟೇ ? ಎನಲು ಚಾಣಕ್ಯನು ;—

ಎಲೈ ವರ್ತಕನೇ, ರಾಜಾಪರಾಧಿಯಾದ ರಾಕ್ಷಸನ ಗೃಹಜನವಂ ನಿನ್ನ ಮನೆಯಲ್ಲಿ ಮರೆಮಾಡಿ ಇರಿಸಿಕೊಂಡು ಈಗಿನವರೆಗೂ ಪ್ರಭುವಿಗೆ ವಿಜ್ಞಾಪಿಸದೆ ಇರುವುದು ನಿನ್ನಲ್ಲಿ ಅಪರಾಧವೋ ಅಲ್ಲವೋ? ಎಂದನು.

ಚಂದನದಾಸನು—ಬುದ್ಧೀ, ಯಾರೋ ಅನೃತವಂ ಹೇಳಿರಬೇಕು. ಈ ಅರ್ಥವಂ ನಾನು ಕಂಡವನಲ್ಲ ಎಂದನು, ಚಾಣಕ್ಯನು :—

ಈ ಸಂಗತಿಯಂ ನೀನು ಕಂಡಿರುವುದುಂಟಾದರೆ ನಿನ್ನ ಸರ್ವಸ್ವವನ್ನೂ ಅರಮನೆಗೆ ತೆಗೆದುಕೊಂಡು ನಿನಗೆ ತೀಕ್ಷ್ಣವಾದ ದಂಡನೆಯಂ ಮಾಡಬಹುದೇ? ಎನಲು, ಚಂದನದಾಸನು :—

ರಾಕ್ಷಸನು ಹೋಗುವ ಸಮಯದಲ್ಲಿ ತನ್ನ ಮನೆಯ ಜನರಂ ನನ್ನ ಮನೆ ಯಲ್ಲಿರಿಸಿದ್ದುದುಂಟು. ಆ ಬಳಿಕ ಅವರು ನನ್ನಂ ವಂಚಿಸಿ ಎಲ್ಲಿಯೋ ಹೋದುದ ರಿಂದ ವಿಜ್ಞಾಪಿಸುವುದಕ್ಕೆ ಭಯಪಡುತ್ತಿದ್ದೆನು ಎಂದನು. ಅದಕ್ಕೆ ಚಾಣಕ್ಯನು :—

ಎಲೈ ಸೆಟ್ಟಿಯೇ, ಮೊದಲು ಕಾಣೆನೆಂದು ಹೇಳಿ ಈಗ ಕಂಡುಬಂಟು, ಎಲ್ಲಿಯೋ ಹೋದರು ಎಂದು ಎರಡು ಮಾತುಗಳಂ ಹೇಳಬಹುದೇ? ಎನಲು, ಚಂದನದಾಸನು :—

ಬುದ್ಧೀ, ಭಯದಿಂದ ಬಾಯಿತಪ್ಪಿ ಹಾಗೆ ಹೇಳಿದೆನು ಎಂದನು.

ಚಾಣಕ್ಯನು ನಕ್ಕು—ಎಲೈ ವ್ಯಾಪಾರಿಯೇ, ಚಂದ್ರಗುಪ್ತನ ಪ್ರಭುತ್ವದಲ್ಲಿ ಬಾಯಿತಪ್ಪು ಬರಕೂಡದು. ಸುಮ್ಮನೆ ರಾಕ್ಷಸನ ದಾರಾಪುತ್ರಾದಿಗಳಂ ತಂದು ಒಪ್ಪಿಸು ಎಂದನು.

ಆ ಮಾತಿಗೆ ಚಂದನದಾಸನು ತನ್ನ ಮನಸ್ಸಿನಲ್ಲಿ—ಈಗ ಶಿರಸ್ಸಿನಮೇಲೆ ಸರ್ಪಬಾಧೆಯೂ ಪರ್ವತ ಪ್ರಾಂತ್ಯದಲ್ಲಿ ವಿಷಹರವಾದ ಔಷಧವೂ ಇದ್ದಂತಾಯಿತು. ಏನೋ ಮಹದಾಪತ್ತು ಬಂದಿತು ಎಂದು ಚಿಂತಿಸುತ್ತಿರುವಷ್ಟರಲ್ಲಿ ಹೊರಗೆ ಆಗುವ ಕಲಕಲಧ್ವನಿಯಂ ಕೇಳ್ದು ಚಾಣಕ್ಯನು—ಅದೇನು? ತಿಳಿದುಬಾರೆಂದು ಶಿಷ್ಯನಿಗೆ ನೇಮಿಸಲು ಆ ಶಿಷ್ಯನು ಹೋಗಿಬಂದು :—

ಸ್ವಾಮಿಾ ಉಪಾಧ್ಯಾಯರೇ, ವಿಷಕನ್ಯಾಮುಖದಿಂದ ಪರ್ವತರಾಜನಂ ಸಂಹರಿಸಿದ ದೋಷವನ್ನು ದ್ಘಾಟಿಸುತ್ತ ದೂತರು ಜೀವಸಿದ್ಧಿ ಎಂಬ ಕ್ಷಪಣಕನಂ ಚಂದ್ರಗುಪ್ತನ ಅಪ್ಪಣೆಯ ಪ್ರಕಾರ ಅಪಮಾನಪೂರ್ವಕವಾಗಿ ಊರಡೆಸೆಯಿಂದ ಹೊರಡಿಸುತ್ತಿದ್ದಾರೆ ಎನಲು ತಾನು ಮಾಡಿದುದಕ್ಕೆ ತಕ್ಕುದಾದ ಫಲವನ್ನನು ಭವಿಸಲಿ ಎಂದು ಚಾಣಕ್ಯನು ಹೇಳುತ್ತ :—

ಎಲೈ ಚಂದನದಾಸನೇ, ರಾಜಾಪರಾಧಿಗಳಿಗೆ ಈ ರೀತಿಯಾಗುವುದು ಸ್ವಭಾವವು. ಆದುದರಿಂದ ವಂಚಿಸದೆ ರಾಕ್ಷಸನ ಗೃಹಜನವನ್ನು ಕರತಂದು ಒಪ್ಪಿಸುವವನಾಗು ಎನಲು,

ಚಂದನದಾಸನು—ಸ್ವಾಮಿಾ, ನಾನು ಅರಿತವನಲ್ಲ ಎಂದನು.

ಅಷ್ಟರಲ್ಲಿಯೇ ಪುನಃ ಬೀದಿಯಲ್ಲಿ ಕೋಲಾಹಲರವಂ ಕೇಳಿಬರುತ್ತಿರಲು, ಅದೇನು? ನೋಡು ಎನ್ನುತ್ತ ಚಾಣಕ್ಯನು ಶಿಷ್ಯನಿಗೆ ಆಜ್ಞಾಪಿಸಲು ಅವನು ಹೋಗಿ ನೋಡಿಬಂದು,

ಉಪಾಧ್ಯಾಯರೇ, ಭಟರು ರಾಜದ್ರೋಹಿಯಾದ ಶಕಟದಾಸನನ್ನು ಅರಸಿನ ಅಪ್ಪಣೆಯ ಮೇರೆಗೆ ಶೂಲಕ್ಕೆ ಹಾಕುವುದಕ್ಕೆ ಸಾರಿಕೊಂಡು ಕರೆದೊಯ್ಯುತ್ತಿದ್ದಾರೆ ಎನಲು, ಅವನು ಮಾಡಿದ ದ್ರೋಹಕ್ಕೆ ಅನುಗುಣವಾದ ಫಲವನ್ನನುಭವಿಸಲಿ ಎಂದು ಹೇಳುತ್ತ ಚಾಣಕ್ಯನು ಚಂದನದಾಸನಂ ಕುರಿತು :—

ಎಲೈ ಸೆಟ್ಟಿಯೇ, ರಾಜಾಪರಾಧಿಗಳಿಗೆ ಹೀಗೆ ಕಠಿಣದಂಡನೆಯಾಗುತ್ತಿರುವುದಂ ಕಂಡೂ ಇನ್ನೂ ಅರಿಯೆನೆಂದು ಹೇಳುತ್ತೀಯೆ? ನಿನ್ನ ಹೆಂಗಸರು ಮಕ್ಕಳಿಗೆ ಕ್ಷೇಮವಾಗಬೇಕಾದರೆ ರಾಕ್ಷಸನ ಮನೆಯವರಂ ತಂದು ಒಪ್ಪಿಸು ಎನಲು, ಚಂದನದಾಸನು :—

ಸ್ವಾಮಿ, ಸುಮ್ಮನೆ ನನ್ನಂ ಬೆದರಿಸುವಿರಿ. ಅಮಾತ್ಯನ ಕುಟುಂಬದವರಂ ಇದ್ದರೂ ನಾನು ಕೊಡುವವನಲ್ಲ. ಇಲ್ಲದಿರುವವರಂ ಹೇಗೆ ಒಪ್ಪಿಸಲಿ ಎಂದನು. ಅದಕ್ಕೆ ಚಾಣಕ್ಯನು :—

ಎಲೈ ಸೆಟ್ಟಿಯೇ, ನಿನ್ನ ನಿಶ್ಚಯವು ಇದೇ ಸರಿಯೋ? ಎನಲಾಗಿ,

ಚಂದನದಾಸನು—ಸ್ವಾಮಿಾ, ಹೀಗೇ ಸರಿ ಎನಲು, ಚಾಣಕ್ಯನು ತನ್ನ ಹೃದಯದಲ್ಲಿ—ಈ ಸೆಟ್ಟಿಯು ಸತ್ಯವಂತನು. ಮಿತ್ರಕಾರ್ಯಕ್ಕೋಸ್ಕರವಾಗಿ ತನ್ನ ಪ್ರಾಣವನ್ನಾದರೂ ಒಪ್ಪಿಸಿತಕ್ಕವನು ಎಂದು ನಿಶ್ಚಯಿಸಿ ಆಮೇಲೆ ಕೋಪಿಸಿ ಕೊಂಡವನಂತೆ ಹುಬ್ಬುಗಂಟಿಕ್ಕಿ—ಎಲೈ ದುರಾತ್ಮಕನಾದ ವರ್ತಕನೇ, ಹಾಗಾದರೆ ನೀನು ಮಾಡಿದ ದ್ರೋಹಕ್ಕೆ ಸರಿಯಾದ ಫಲವನ್ನನುಭವಿಸೀಯೆ ಎನಲು ಚಂದನ ದಾಸನು—

ಸ್ವಾಮಿಾ, ನಿಮ್ಮ ಸ್ವಾತಂತ್ರ್ಯಾನುಗುಣವಾಗಿ ಮಾಡುವುದಂ ಮಾಡಿರಿ ನಾನು ಸಿದ್ಧನಾಗಿದ್ದೇನೆ ಎಂದನು.

ಆಗ ಚಾಣಕ್ಯನು ಶಿಷ್ಯನಂ ಕರೆದು—ಎಲೈ ಶೀಘ್ರಕಾರಿಯೇ, ಈ ದುಷ್ಟ ವಣಿಜನ ಮನೆಯ ಪದಾರ್ಥವೆಲ್ಲವಂ ರಾಜಕೋಶಕ್ಕೆ ತೆಗೆದುಕೊಂಡು ಸ್ವಜನ ಸಮೇತವಾಗಿ ಇವನಂ ಕಾವಲಿನಲ್ಲಿ ಇರಿಸುವಂತೆ ದುರ್ಗಪಾಲಕನಿಗೆ ಹೇಳು. ನಾನು ಚಂದ್ರಗುಪ್ತನಿಗೆ ತಿಳಿಸಿ ಇವನಿಗೆ ಕರ್ಕಶದಂಡನೆಯಂ ಮಾಡಿಸುವೆನೆಂದು ನುಡಿದು ಚಂದನದಾಸನಂ ಕಳುಹಿಸಿ ತನ್ನ ಅಂತರಂಗದಲ್ಲಿ—ಈ ಚಂದನದಾಸನು ಸುಹೃದ ನಾದ ರಾಕ್ಷಸನ ನಿಮಿತ್ತವಾಗಿ ತನ್ನ ಸುವನ್ನಾದರೂ ಕೊಟ್ಟು ಆತನ ಪತ್ನೀಪುತ್ರರಂ ರಕ್ಷಿಸುವೆನೆಂದು ಹೇಗೆ ನಿಶ್ಚಯಿಸಿ ಇರುವನೋ ಹಾಗೆಯೇ ರಾಕ್ಷಸನೂ ತನ್ನ ನಿಮಿತ್ತವಾಗಿ ಚಂದನದಾಸನಿಗೆ ಬಂದ ವಿಪತ್ತಂ ಪರಿಹರಿಸಲೋಸುಗ ಸ್ವಂತ ಪ್ರಾಣವನ್ನಾದರೂ ಇತ್ತು ಈ ಚಂದನದಾಸನಂ ಬಿಡಿಸುವೆನೆಂದು ಎಳೆಗಂದಿ ಕರುವಿದ್ದೆಡೆಗೆ ಬರುವಂತೆ ತಾನು ಇಲ್ಲಿಗೆ ಬಂದಾನು. ಶಕಟದಾಸನಂ ಶೂಲಸ್ಥಾನಕ್ಕೆ ಕಳುಹಿಸಿದಂತೆ ಸಮಯವನ್ನರಿತು ಈ ಸೆಟ್ಟಿಯಂ ಅದೇ ಸ್ಥಾನಕ್ಕೆ ಕಳುಹಿಸ ಬೇಕೆಂದು ನಿಶ್ಚಯಿಸುತ್ತಿರಲು.

ಇಂತು ಬಂದೊದವಿದ ಚಳಿಗಾಲದೊಳ್ ರಾಘವನ ಯಜ್ಞ ತುರಂಗಮುಂ ಅರಣ್ಯಕನೆಂಬೊರ್ವ ಕಿತ್ತಡಿಯ ಪುಣ್ಯಾಶ್ರಮಮಂ ಪೊಗುತರ್ಪುದುಂ; ಕಂಡು ಶತ್ರುಘ್ನಾದ್ಯರ್ ಮುನಿಯ ದರ್ಶನಕೆಂದೊಳಪೊಕ್ಕು ಮುನಿಗೆಱಗಿದರ್. ಆಗ ಳರಣ್ಯಕನಭ್ಯಾಗತರಂ ಮನ್ನಿಸಿ ಸರ್ವರನಾತಿಥ್ಯದಿಂ ಸತ್ಕರಿಸಿ ಶ್ರೀರಾಮಸತ್ಕಥಾ ವಿನೋದಗೋಷ್ಠಿಯೊಳ್....

ಮನೋರಮೆ—ಎನ್ನ ಚೆನ್ನಿಗ! ಆತಿಥ್ಯಮೆಂದೊಡೇಂ? ಬಱಿದೆ ಬಾಯುಪಚಾರಮೆ?

ಮುದ್ದಣ್ಣಂ—ಅಲ್ತಲ್ತು; ಬಾಯುಪಚಾರಮಲ್ತು. ಬಂದರ್ಗೆ ಕೈಗೆ ಕಾಲ್ಗೆ ನೀರಿತ್ತು ಕುಳ್ಳಿರಿಸಿ ಸವಿಗೂೞನಿಕ್ಕಿ ಪೂವಿಂ ಸಿಂಗರಿಸಿ ಬಾವನ್ನದಿಂ ಸೊಗಸು ಗೆಯ್ದು ಒಡನಿರ್ದು ನುಡಿದು ನಡೆದು ಮನ್ನಿಪುದು.

ಮನೋ—ಅಂತಿರ್ಪುದುಂ, ಶತ್ರುಹನ ಸಾಯಿರ ಸಾಯಿರ ಲೆಕ್ಕದಿನಿರ್ದು ಪಡೆಗರಣ್ಯಕಂ ಕೂೞ್ನೀರಿತ್ತು ಸನ್ಮಾನಿಸಿದನೆ?

ಮುದ್ದ—ಅಪ್ಪುದಪ್ಪುದು. ಅನಿಬರುಮಂ ಯಥೇಚ್ಛಂ ಮೃಷ್ಟಾನ್ನ ಭೋಜನದಿಂ ತಣಿಸಿದಂ.

ಮನೋ—ಎನಗಿದಚ್ಚರಿ. ಎಂತುಟಾರ್ತಂ?

ಮುದ್ದ—ಏಂ ಮುನಿಗಳೊಂದು ಜಪದ ತಪದ ಮಂತ್ರದ ಬಲ್ಮೆಯೇಂ ಕಿಱಿದೆ? ಬೇಡಿದ ಪುರುಳನುಱದಿಂ ತಂದೀಗುಂ.

ಮನೋ—ಅಂತುಟೇಂ ಗನಂ! ಆವುದೊ ಮಂತ್ರಂ?

ಮುದ್ದ—ಆವುದೇಂ! ಏಕಾಕ್ಷರಿ, ದ್ವ್ಯಕ್ಷರಿ, ತ್ರ್ಯಕ್ಷರಿ, ಚತುರಾಕ್ಷರಿ, ಪಂಚಾಕ್ಷರಿ, ಷಡಕ್ಷರಿ, ಮುಂತಪ್ಪ ಪ್ರಸಿದ್ಧ ಮಂತ್ರಂಗಳೊಳವಲ್ತೆ.

ಮನೋ—ಇವಱಿಂ ಜಪಿಸಿದೊಡೇನಕ್ಕುಂ?

ಮುದ್ದ—ಈ ಮಂತ್ರಂಗಳಂ ಬಿಡದೆ ಜಪಿಸಿ ಸಿದ್ಧಿವಡೆದೊಡೆ ತತ್ತದಭಿಮಾನಿ ದೇವತೆಗಳ್ ಮೆಯ್ದೋಱಿಯುಮೆಳಸಿದರ್ಥಮನಿತ್ತುಂ ಪೋಕುಂ.

ಮನೋ—ಓ! ಇನಿತೊಂದು ಜಪದ ಬಲ್ಮೆ, ನೆರವಿರ್ಪಿನಂ ಪೆಱತೊಂದಱ ಗೊಡವೆಯಿಲ್ಲದಿರ್ಕುಂ ತಾಪಸರ್.

ಮುದ್ದ—ಅಪ್ಪುದಪ್ಪುದು; ತಪ್ಪೇಂ?

ಮನೋ—ಅಂತದಿರ್ಕೆ. ನಿನ್ನನ್ನರಪ್ಪ ಕಬ್ಬಿಗರ್ ಮನೆವಾೞ್ತೆಯೊಳಿನಿಸೊಂದುಂ ಗೊಡವೆಗೊಳ್ಳದೆ ಕೆಮ್ಮಕೆಮ್ಮನೆ ಪಾೞ್ಗಿತೆಯ ಕಬ್ಬದೊಳೇವೊೞ್ತುಂ ಬೆಮೆಗೊಂಡಿರ್ಪರಲೇ. ಅವರ್ಗೇಂ ಬಟ್ಟೆಯೊ? ಉಣಲೇಂ, ತಿನಲೇಂ? ಅಂತಿರೊಂದು ಜಪಮುಂ ಪಿರಿಯತಪಸಿಗಳತ್ತಣಿನುಪದೇಶಂಗೊಂಡೊಡಾಗದೆ!

ಮುದ್ದ—(ಮುಗುಳ್ನಗೆಯಿಂ) ಏಂ ಎಮ್ಮವರೊಂದಿರವಿಗೆ ನಗುವಾ? ಆಃ! ಎಮ್ಮನ್ನರಪ್ಪ ಕಬ್ಬಿಗರ್ಗೇಂ ಕೊಱತೆಯೊ! ತಾನೆ ಬಯಸಿದೊಡಮೆಯನಾಗಳೆ ತಂದೀವ ಮಂತ್ರದ ಜಪದೊಂದು ನೆರಂ ತಮ್ಮೊಳೊಂದಿರದೊಡಲ್ತೆ ಕಾಡ ಜೋಗಿಗಳತ್ತಣಿನುಪದೇಶಂ. ನಾಡಂ ಕಾಡಂ, ಕಾಡಂ ಬೀಡಂಗೆಯ್ವೊಂದು ಪೆರ್ಮೆಯ ಬಲ್ಮೆಯ ಕಬ್ಬಿಗರೇಂ ಕಕ್ಕುಲತೆಯ ಮುದುದವಸಿಗಳತ್ತಣಿಂ ಪಿರಿಯರಾಗರೆ! ನುಡಿವರೇನದುವೆ ಪುರುಳ್, ಪಿಡಿವರೇನದುವೆ ತಿರುಳ್! ಪಲವೇಂ, ಕೆಲವೇಂ? ತಮ್ಮೊಂದೆ ನುಡಿಯ ಬಲ್ಪಿಂ ಮೂಜಗಮುಮನಱಿಯಿಸುವ ಪೊಗೞ್ವ ಕೊಳ್ವಾಳ್ವ ತಾಳ್ವ ತೂಳ್ವ ಪೂೞ್ವ ಪೆಱ್ವ ಬಾೞ್ವ ಸಿಂಗರದ ಬಣ್ಣಗಬ್ಬಿಗರೆಮ್ಮ ತೆಱನನಿನ್ನುಂ ನೀನಱಿಯೆಯ್.

ಮನೋ—(ಬಿಸವಂದಂಗೊಂಡು) ನಿಮ್ಮವರ್ಗಮಂತಿರೆ ಮಂತ್ರಂ ಸಿದ್ಧಿವರ್ಕುಮೆ?

ಮುದ್ದ—ತಡೆಯೇನಕ್ಕೇಂ!

ಮನೋ—ನಿನ್ನೊಳವೊಳವೆ?

ಮುದ್ದ—ಎನ್ನೊಳಿಂತಿದು ಪಾಸುವೊಕ್ಕು.

ಮನೋ—ಆಃ! ನೀನು ಬಲ್ವೆಯ್ಮೆಗಾಱಂ. ನಿನಗಾರತ್ತಣಿನಿಂದುಪದೇಶಮಾಯ್ತು?

ಮುದ್ದ—ಗುರುವತ್ತಣಿನಂದೆಳವೆಯೊಳೆ.

ಮನೋ—ಎನ್ನೆ ಱಿಯ! ಅದಾವುದೊ ಮಂತ್ರಮೆನ್ನೊಳುಸಿರ?

ಮುದ್ದ—ಆಃ! ಆಃ! ಒಳ್ಳಿತೊಳ್ಳಿತು!! ಮಂತ್ರಂಗಡ! ತನಗೊರೆವುದು ಗಡ! ಚೀಃ! ಚೀಃ! ಪೆಣ್ಗಳ್ಗೇ ಮಂತ್ರೋಪದೇಶಂ ಸಲ್ವುದೆ?

ಮನೋ—ಆನಱಿಯೆನೆ! ನಿನ್ನತ್ತಣಿನುಪದೇಶಂ ಬೇಡುವೆನೆ! ನೀನಾಗಳೆಂದ ಮಂತ್ರಂಗಳೊಳಾವುದದಱ ಪೆಸರೇನೆಂದೆ ಕೇಳ್ದೆಂ.

ಮುದ್ದ—ಆಗಳೆಂದ ಮುನಿಗಳ ಮಂತ್ರಂಗಳೊಳಲ್ತು. ಎಮ್ಮ ಮಂತ್ರಂಗಳ ಬಗೆ ಬೇಱೆ, ಮೂಱೆಱಡಕ್ಕರದ ಮಂತ್ರಂಗಳೆಮಗಕ್ಕುಮೆ! ಎಮ್ಮ ತಂತು ಕಿಱಿದಲ್ತು ಬಲ್ಪಿರಿದು. ಒಂದಕ್ಕರಮಲ್ತೆರಡಲ್ತು ಮೂಱಲ್ತು, ನಾಲ್ಕೈದಲ್ತು, ಆಱುಮಲ್ತು. ಏೞಕ್ಕರದ ಬೀಜಮಂತ್ರಂ. ಅಂತದಱಿಂ ಸರ್ವಮಂತ್ರಂಗಳ್ಗೆ ತಲೆಯೊಳಿರ್ದು ಮೇಲೆನಿಪ್ಪ ಸಪ್ತಾಕ್ಷರೀಮಂತ್ರಮೆಂದು ಪೆಸರ್.

ಮನೋ—ಹಾ ಹಾ! ಆ ಮಂತ್ರಕ್ಕಭಿಮಾನಿದೇವತೆಯಾವುದು? ಮುನ್ನಮಾರಿದಂ ಜಪಿಸಿ ಸಿದ್ಧಿಗಂಡರ್?

ಮುದ್ದ—ಪೋ ಪೋ! ಇಂತಿವಱಿಂ ಕೊಂಡೇಂ ಕಜ್ಜಂ?

ಮನೋ—ಇರ್ಕೆ, ಕೇಳ್ವೆಂ.

ಮುದ್ದ—ಅಂತಾದೊಡೆ ಕೇಳ್ ಪೇೞ್ವೆಂ. ಇಂತೇರ್ಪಟ್ಟ ಮಂತ್ರದಧಿ

ದೇವತೆ ಜೇಷ್ಠೆ. ಮುನ್ನಮಿೂಶ್ವರಂ ತನ್ನೊಂದು ಲೀಲೆಯೊಳ್ ಜಪಿಸಿ ಸಿದ್ಧಿಗೊಂಡ ನಂತದಱಿನಾತನೆ ಋಷಿ.

ಮನೋ—ಓ ಓ ! ಇಂತುಟೆ ಮಂತ್ರದೊಂದು ವೈಭವಂ ! ಎಲೆ ರಮಣ ! ನಿನ್ನಡಿಗಳ್ಗೆರಗುವೆಂ. ಎನ್ನತಿನಿತೊಂದು ಬಿನ್ನಪಂ. ಅಂತು ಸಂಪ ಸಿದ್ಧಿಯ ಮಂತ್ರಮಾವುದೊ ಕೂರ್ಮೆಯಿಂ ತಿಳಿಯೆ ಪೇೞ್.

ಮುದ್ದ—ಆಗಳೆ ಪೇೞ್ದೆನಲ್ತೆ ಸಪ್ತಾಕ್ಷರೀ ಮಂತ್ರಮೆಂದು.

ಮನೋ—ಅಂತು ಪೆಸರನಲ್ತು. ಮೂಲಮನೆ ಕುಱಿತೆನ್ನೊಳಾಡಿ ತೋಱಿ.

ಮುದ್ದ—ಅಬ್ಬಾ! ಪೆಣ್ಣೀಂ ಗಡುಸುಗಾರ್ತಿಯೊ! ಆಗಳ್ ಪೆಸರೇನೆಂದಳ್; ಈಗಳ್ ಮೂಲಮಂ ಕೇಳ್ವಳ್. ಇನ್ನೇವಳೊ? ಮೂಱೆಟೆಯ ಜನ್ನದಾರ ದಾಣೆ! ಉತ್ತರಿಗೆಯಾಣೆ! ಆಗದಾಗದು. ಕೇಳ್ವುದರ್ಕೆ ಪೇೞ್ವುದರ್ಕೆ ನಿಮಗಧಿಕಾರ ಮಿರದು. ಕಣ್ಗೆ ಕಾಲ್ಗೆ ಕೇಡು!

ಮನೋ–ಕಿವಿಯಿಂ ಕೇಳ್ವುದಱೊಳೇಂ ದೋಸಂ? ಅಂತೇರ್ಪಟ್ಟ ವೇದ ಮನಾದೊಡಮೊದುವೆಡೆಯೊಳ್ ಕೇಳದೆ ಪೆಣ್? ನಿನ್ನೊಳಮೇಂ ಜಂಬಮೊ!

ಮುದ್ದ—ವೇದ ಮಂತ್ರದ ಬಗೆ ಬೇಱೆ. ಇದಱ ಪರಿ ಬೇಱೆ. ಅಜ ಗಜಾಂತರಂ. ಅದಱೊಳಂ "ಗೂಢಾದ್ಗೂಢತರಂ ಮಂತ್ರಂ" ಎಂದು ಪೇೞ್ದುದುಂಟು. ಅದುಕಾರಣಂ ನಾಂ ಪೇೞಲಾಗದು; ನೀಂ ಕೇಳಲುಮಾಗದು. ಮುಂತಣ ಕತೆಯಂ ಕೇಳ್. ಮತ್ತಮರಣ್ಯಕಂ ಶತ್ರುಘ್ನಾದ್ಯರೊಳ್....

ಮನೋ—ತೆಗೆ ತೆಗೆ! ನಿನ್ನ ಮುಂಗತೆಯಂ ವಿತೆಯಂ. ಅದೇಂ ಮಂತ್ರಮೊ ಕೇಳ್ವೆಂ. ಕೊರಲಾಣೆ, ಉಂಗುರದಾಣೆ, ಪೇೞ್ದಲ್ಲದೆ ಬಿಡೆಂ–ಎಂದು ಮೆಯ್ಯಿಕ್ಕುವಳ್.

ಮುದ್ದ—ಏಂ ಚಲಮೊ ಚಪಳೆಗೆ! ಪೇೞೆನೆಂದೊಡೆ, ಕೇಳಳ್. ಆಃ! ಪೆಱರೊಳೊರೆದೆವಿನ್ಮೊ ಬೀಜಮಂತ್ರಮನೆಂತು ಪೊಲೆಗಿಡಿಪೆನೊ! ಛೀಃ! ಎಳವೆಂಡಿರ ಕೈಯೊಳಿರ್ಪ ಕಬ್ಬಿಗರ ಬಾೞ್ಕೆಯೆ ದೂಷ್ಯಂ. (ಎಂದು ನೀಡುಂಭಾವಿಸಿ) ಎಲೆ ಪೆಣೆ! ನೀನಾರೊಳಮೆಂದೆಂದಿಂಗಮುಸಿರಲ್ಬಾರದು. ಜೋಕೆ!

ಮನೋ—ಎಂದುಮೆಂತುಮುಸಿರೆನಾಡೆಂ

ಮುದ್ದ—ಅಂತಾದೊಡಂತಿದು, ಕೇಳ್. ಭ....ವ....ಪೆಱರೊಳಾಡೆನೆಂಬ ನಂಬುಗೈಯಂ ಪೊಯ್.

ಮನೋ—ಇದೆ, ಪಿಡಿ ನಂಬುಗೈಯಂ, ನಿನ್ನಾಣೆ, ಕುಲದೈವದಾಣೆ. ಎಂದುಂ ಪೆಱವರೊಳೊರೆಯೆಂ.

ಮುದ್ದ––ಉಂ! ಭವ....ತಿ....ಭಿ....ಪೆಣ್ಗಳಂ ನಂಬಲಾಗದೆಂಬರ್ ಬಲ್ಲರ್. ನೀನೆಂತೊ ಮಱವೆಯೊಳ್ ಪೆಱರೊಡನುಸಿರ್ದ ಗುಟ್ಟಂ ಬಿಟ್ಟೊಡೆಮ್ಮನ್ನರ ಬಾೞ್ ಪಾೞಕ್ಕುಂ.

ಮನೋ—ಆನೇಂ ಮೋಡೆಯೆ! ಪ್ರೊ! ತನ್ನಾಣೆ, ಕಣ್ಣಾಣೆ. ಕೇಳ್ವಿಂ

ಮುದ್ದ—(ಎಕ್ಕಟಿಯೊಳ್) ''ಭವತಿ ಭಿಕ್ಷಾಂ ದೇಹಿ" ಎಂಬುದಿದುವೆ ಕಬ್ಬಿಗರ್ಗೆ ಸಿದ್ಧಿಸಿದ ಪೆರ್ಮೆಯ ಸಪ್ತಾಕ್ಷರೀ ಮಂತ್ರಂ. ಆರೊಳಾನುಮುಸಿರದಿರ್.

ಮನೋ—(ಅರೆ ಮುನಿಸಿಂ) ಪ್ರೋ ಮಾಣೆಲೆ ರಮಣ! ನಿನ್ನ ನುಡಿಯುಂ ಸಾಜಂ ನಿಕ್ಕುವಮೆಂದೇ ಬಗೆದಂ. ಈ ತೆಱನ ಮಾಟದ ಕವಡುನುಡಿಯ ಕೊಂಕೆಂಬುದನಱಿಯದಾದೆಂ. ನೀಂ ಕಬ್ಬಿಗನೊ, ಸಬ್ಬವ ಕಾಜನೊ? ನಿನ್ನೀ ಕಬ್ಬದ ಸೊಗಸನೆಮ್ಮನ್ನರಪ್ಪ ಜಾಣೆಲಿವೆಣ್ಗಳೆ ಕೊಂಡಾಡುವರಲ್ಲದೆ ಬಲ್ಲರೇನೊಲ್ವರೆ ?

ಮುದ್ದ—ಸಾಲ್ಗುಮೀ ಪರಿಹಾಸಂ. ಮುಂಗತೆಯುಂ ಕೇಳ್.

## ಶಾಸನ ಗದ್ಯ

### ಹಲ್ಮಿಡಿ ಶಾಸನ

ಹಾಸನ ಜಿಲ್ಲೆ ಬೇಲೂರು ತಾಲ್ಲೂಕು ಹಲ್ಮಿಡಿಯಲ್ಲಿ ದೊರೆತಿರುವ ಈ ಶಾಸನದ ಕಾಲ ಕ್ರಿ. ಶ. ಸುಮಾರು ೪೫೦. ಇದುವರೆಗೆ ದೊರೆತಿರುವ ಕನ್ನಡ ಶಾಸನಗಳಲ್ಲಿ ಇದೇ ಅತ್ಯಂತ ಪ್ರಾಚೀನವಾದುದು.

ಕರ್ಣಾಟಕದಲ್ಲಿ ಕಂಡುಬರುವ ಅಪಾರವಾದ ಶಾಸನ ಸಂಪತ್ತನ್ನು ಪರಿಶೀಲಿಸಿದರೆ ಮುಖ್ಯವಾಗಿ ಎರಡು ಅಂಶಗಳನ್ನು ಗಮನಿಸಬಹುದು. ದೇವಸ್ಥಾನಗಳಿಗಾಗಿಯೋ ವಿದ್ಯೆಗಾಗಿಯೋ ಅಥವಾ ವಿಶಿಷ್ಟ ವ್ಯಕ್ತಿಗಳಿಗಾಗಿಯೋ ಕೊಟ್ಟ ದಾನಗಳು ಒಂದು ಬಗೆಯುವು. ಇವು ಧರ್ಮದೃಷ್ಟಿಯಿಂದ ಪ್ರೇರಿತವಾದ ಶಾಸನಗಳು. ಇನ್ನೊಂದು ಬಗೆಯ ಶಾಸನಗಳು ವೀರಜೀವನವನ್ನು ಪ್ರತಿಬಿಂಬಿಸುವ ಸಂಕೇತಗಳಾಗಿ ನಿಲ್ಲುತ್ತವೆ. ಪರಾಕ್ರಮ ಮತ್ತು ಧರ್ಮ—ಇವೆರಡೂ ಶಾಸನ ಸಂಸ್ಕೃತಿಯ ಎರಡು ಕಣ್ಣುಗಳಂತೆ ಕಂಗೊಳಿಸಿವೆ. ಈ ಹಲ್ಮಿಡಿ ಶಾಸನ ಪರಾಕ್ರಮವನ್ನು ಪುರಸ್ಕರಿಸಿದುದಕ್ಕಾಗಿ ಹುಟ್ಟಿದುದು. ಆದರೆ ಇದು ಹೋರಾಡಿ ಸತ್ತವರ ಸ್ಮಾರಕಕ್ಕಾಗಿ ನೆಟ್ಟ ವೀರಗಲ್ಲಲ್ಲ; ಗೆದ್ದವರ ಪುರಸ್ಕಾರಕ್ಕಾಗಿ ಕೊಟ್ಟ ದಾನಪತ್ರ.

ಇಲ್ಲಿ ಉಕ್ತವಾಗಿರುವ ಮುಖ್ಯ ವಿಷಯವಿಷ್ಟು : ಕದಂಬ ಕಕುಸ್ಥನ ಆಳ್ವಿಕೆಯಲ್ಲಿ ನರಿದಾವಿಳೆ ನಾಡನ್ನು ಮೃಗೇಂದ್ರ ಮತ್ತು ನಾಗ ಎನ್ನುವವರು ಆಳುತ್ತಿದ್ದರು. ಆಗ ಎಲ್ಲಭಟಾರಿಯ ಮಗ ವಿಜಅರಸ ಎಂಬುವನು ಸೇಂದ್ರಕ ಮತ್ತು ಬಣ (ಬಾಣ)—ಈ ಎರಡು ವಂಶದ ವೀರರ ಸಮ್ಮುಖದಲ್ಲಿ ಕೇಕಯ ಮತ್ತು ಪಲ್ಲವರೊಡನೆ ಯುದ್ಧಮಾಡಿ ಗೆದ್ದನು. ಅದಕ್ಕೆ ಮೆಚ್ಚಿ ಮೃಗೇಂದ್ರ ಮತ್ತು ನಾಗ ಎಂಬುವರು ಪಲ್ಮಿಡಿಯನ್ನೂ ಮೂಱುವಳ್ಳಿಯನ್ನೂ ಅವನಿಗೆ ದಾನವಾಗಿ ಕೊಟ್ಟರು. ಇದು ಈ ಶಾಸನದ ಸಾರ. ವೀರರಿಗೆ ರಾಜರು ತೋರಿಸುವ ಪುರಸ್ಕಾರದ ಪರಂಪರೆ ಬಹು ಪ್ರಾಚೀನವಾದುದೆಂಬುದು ಇದರಿಂದ ವಿದಿತವಾಗುತ್ತದೆ. ಪ್ರಾರಂಭದ ಸಂಸ್ಕೃತ ಶ್ಲೋಕವೂ ಗಮನಾರ್ಹವಾದುದಾಗಿದೆ. ದುಷ್ಟನಿಗ್ರಹ ಶಿಷ್ಟಾನುಗ್ರಹಗಳು ರಾಜ ಧರ್ಮವೆಂಬ ಧ್ವನಿ ಆ ಶ್ಲೋಕದಲ್ಲಿದೆ.

ಕನ್ನಡ ಭಾಷೆಯ ಸ್ವರೂಪವನ್ನು ತಿಳಿದುಕೊಳ್ಳುವ ದೃಷ್ಟಿಯಿಂದಲೂ ಈ ಶಾಸನಕ್ಕೆ ಬಹಳ ಮಹತ್ವದ ಸ್ಥಾನವಿದೆ. ಈ ಶಾಸನದ ಗದ್ಯವನ್ನು ನೋಡಿದರೆ, ಇದಕ್ಕಿಂತ ಹಿಂದೆಯೇ ಕನ್ನಡ ಭಾಷೆಯ ಬೆಳವಣಿಗೆ ನಡೆದಿರಬೇಕೆಂದು ಹೇಳಲು ಅವಕಾಶವಿದೆ. ಕನ್ನಡ ಸಂಸ್ಕೃತಗಳ ಸಂಬಂಧವನ್ನೂ ಇಲ್ಲಿಯ ಗದ್ಯ ಪರಿಚಯ ಮಾಡಿಕೊಡುತ್ತದೆ. ಕದಂಬಪನ್, ನಾಡುಳ್, ಅಪ್ಪೊರ್, ವಿಟ್ಟಾರ್, ಅದಾನ್, ಅಳಿವೊನೆ,—ಈ ಮೊದಲಾದ ಪ್ರಯೋಗಗಳು ಹಳಗನ್ನಡಕ್ಕಿಂತಲೂ ಹಿಂದಿನ ಪೂರ್ವದ ಹಳಗನ್ನಡ ರೂಪವನ್ನು ಕಂಡುಕೊಳ್ಳಲು ಸಹಾಯಕವಾಗುತ್ತವೆ.

### ಮಾವನೂರು ಶಾಸನ

ಹಾಸನ ಜಿಲ್ಲೆ, ಹೊಳೆನರಸೀಪುರ ತಾಲೂಕು ಮಾವನೂರಿನಲ್ಲಿ ದೊರೆತ ಈ ಶಾಸನದ ಕಾಲ ೧೨೮೩. ಹೊಯ್ಸಳ ವೀರನರಸಿಂಹನ ಆಳ್ವಿಕೆಯ ಕಾಲ. ಅಪ್ಪರಸಯ್ಯ ದೇವರಸರು ಮಾವನೂರಿನಲ್ಲಿ ಕಟ್ಟಿಸಿದ ದೇವಾಲಯಗಳಿಗೆ ವೀರ ನರಸಿಂಹನು ದತ್ತಿಯನ್ನು ಕೊಟ್ಟುದನ್ನು ಈ ಶಾಸನ ಹೇಳುತ್ತದೆ. ಪರ್ವತಯ್ಯ ಮತ್ತು ಆತನ ಮಗ ಅಪ್ಪಯ್ಯದೇವ ಇವರ ವರ್ಣನೆ ವಿಸ್ತಾರವಾಗಿ ಬಂದಿದೆ. ಶಾಸನ ಗದ್ಯದಲ್ಲಿ ಅಪರೂಪವಾಗಿ ದೊರೆಯುವ ಮಾದರಿ ಇದು. ಶಾಸನದಲ್ಲಿ ಗದ್ಯದ ಕೆಲಸ ಹೆಚ್ಚಾಗಿ ನೀರಸ ನಿರೂಪಣೆಯೇ. ಪದ್ಯ ಶಾಸನಗಳಲ್ಲಿ ಕಂಡುಬರುವ ಸಾಹಿತ್ಯ ಸೌಂದರ್ಯವನ್ನು, ಪ್ರೌಢಿಮೆಯನ್ನು ಗದ್ಯ ಶಾಸನಗಳಲ್ಲಿ ಕಾಣುವುದು ಕಷ್ಟ. ಕೊಟ್ಟ ದಾನ ಅದರ ಮಿತಿ ಮೇರೆಗಳನ್ನು ಹೇಳುವುದಕ್ಕೆ ಮಾತ್ರ ಗದ್ಯವನ್ನು ಹೆಚ್ಚಾಗಿ ಬಳಸಿಕೊಂಡದ್ದುಂಟು. ಆದರೆ ಇಲ್ಲಿನ ಗದ್ಯದಲ್ಲಿ ಕಂಡುಬರುವ ಭಾಷಾ ಪ್ರೌಢಿಮೆ ಮತ್ತು ವರ್ಣನಕೌಶಲ ಈ ಶಾಸನದ ವೈಶಿಷ್ಟ್ಯ. ಆ ವರ್ಣನೆಯ ಭಾಗವನ್ನು ಮಾತ್ರ ಇಲ್ಲಿ ಆರಿಸಿಕೊಡಲಾಗಿದೆ. ಈ ಶಾಸನದ ಪೂರ್ಣ ಪಾಠವನ್ನು ಎಪಿಗ್ರಾಫಿಯಾ ಕರ್ನಾಟಿಕಾದ ಹದಿನೈದನೆಯ ಸಂಪುಟದಲ್ಲಿ ನೋಡಬಹುದು.

### ಶ್ರವಣಬೆಳುಗೊಳದ ಶಾಸನ

ಹಾಸನ ಜಿಲ್ಲೆ ಚನ್ನರಾಯ ಪಟ್ಟಣ ತಾಲೂಕಿನ ಶ್ರವಣಬೆಳುಗೊಳದಲ್ಲಿರುವ ಅಸಂಖ್ಯಾತ ಶಾಸನ ಸಂಪತ್ತಿನಲ್ಲಿ ಇದೊಂದು; ೧೩೬೮ರಲ್ಲಿ ರಚಿತವಾದದ್ದು. ವಿಜಯನಗರದ ವೀರಬುಕ್ಕರಾಯನ ಧರ್ಮ ಸಮನ್ವಯ ದೃಷ್ಟಿಯನ್ನು ಎತ್ತಿ ತೋರಿಸುತ್ತದೆ. ಜೈನರಿಗೂ ವೈಷ್ಣವರಿಗೂ ಘರ್ಷಣೆ ತಲೆದೋರಿದಾಗ ಎರಡು ಪಂಗಡಗಳ ಧುರೀಣರನ್ನು ಬುಕ್ಕರಾಯ ಬರಮಾಡಿಕೊಂಡು ಕೈಕೈ ಹಿಡಿಸಿ ಸ್ನೇಹ ವನ್ನುಂಟುಮಾಡಿದ ಆ ಘಟನೆ ಮಹತ್ವಪೂರ್ಣವಾದದ್ದು. ಉಭಯ ಸಮಯವೂ ಕೂಡಿ ಕಲ್ಲೆಹದ ಬುಸಿಸೆಟ್ಟಿಗೆ ಸಂಘನಾಯಕ ಪಟ್ಟವನ್ನು ಕಟ್ಟಿದರೆಂಬ ಮಾತನ್ನು ಗಮನಿಸಬೇಕು. ಹದಿನಾಲ್ಕನೆಯ ಶತಮಾನದ ಗದ್ಯದ ಸ್ವರೂಪಕ್ಕೂ ಇದು ಒಳ್ಳೆಯ ಸಾಕ್ಷಿಯಾಗಿದೆ. ಎಪಿಗ್ರಾಫಿಯಾ ಕರ್ನಾಟಿಕಾದ ಎರಡನೆಯ ಸಂಪುಟದಲ್ಲಿ ಈ ಶಾಸನ ಪ್ರಕಟವಾಗಿದೆ.

### ಮಲಪನಗುಡಿ ಶಾಸನ

ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನಲ್ಲಿದೆ ಮಲಪನಗುಡಿ. ಅಲ್ಲಿ ಸಿಕ್ಕಿರುವ ಈ ಶಾಸನದ ಕಾಲ ೧೪೧೨; ವಿಜಯನಗರದ ದೇವರಾಯನ ಕಾಲ. ಈ ಶಾಸನದ ವೈಶಿಷ್ಟ್ಯವೆಂದರೆ ಇಲ್ಲಿ ದಾನಕೊಟ್ಟಿರುವುದು ದೇವಾಲಯಕ್ಕಾಗಲೀ, ಪೂಜಾದಿ ಕಾರ್ಯಕ್ಕಾಗಲೀ ಅಲ್ಲ, ಅರವಟ್ಟಿಗೆಗಾಗಿ. ಬುಳ್ಳಿಯ ನಾಯಕನ ಮಗ ಹೆಗ್ಗಡೆ

ಸೋಮಣ್ಣನು ಅರವಟ್ಟಿಗೆ ಕಟ್ಟಿಸಿ ಅದಕ್ಕಾಗಿ ಬಿಟ್ಟ ವೃತ್ತಿಯ ವಿವರಗಳನ್ನು ಈ ಶಾಸನ ಹೇಳುತ್ತದೆ. 'ಸೌತ್ ಇಂಡಿಯನ್ ಇನ್ಸ್‌ಸ್ಕ್ರಿಪ್ಷನ್ಸ್'—ಭಾಗ ಎರಡರಲ್ಲಿ ಪ್ರಕಟವಾಗಿದೆ ಈ ಶಾಸನ.

### ಶ್ರೀರಂಗಪಟ್ಟಣದ ಶಾಸನ

ಮಂಡ್ಯ ಜಿಲ್ಲೆಯ, ಶ್ರೀರಂಗಪಟ್ಟಣದಲ್ಲಿರುವ ರಂಗನಾಥ ದೇವಾಲಯ ದಲ್ಲಿದೆ ಈ ಶಾಸನ. ಅಚ್ಯುತರಾಯನ ಆಳ್ವಿಕೆಯ ಕಾಲದ್ದು. ೧೫೪೨ರಲ್ಲಿ ರಚಿತ ವಾದದ್ದು, ಅಪ್ಪಾಜಿಯ ಮಗ ಪೆದ್ದಿರಾಜ ಕೊಟ್ಟ ದಾನವನ್ನು ಇದು ಹೇಳುತ್ತದೆ. ಹದಿನಾರನೆಯ ಶತಮಾನ ಮತ್ತು ಅಲ್ಲಿಂದೀಚೆಗೆ ಗದ್ಯ ಹೆಚ್ಚು ಕಡಮೆ ಹೊಸ ಗನ್ನಡದ ಗದ್ಯದತ್ತ ವಾಲುತ್ತಿರುವುದನ್ನು ಕಾಣಬಹುದು. ಎಪಿಗ್ರಾಫಿಯಾ ಕರ್ನಾಟಿಕಾದ, ಎಂಟನೆಯ ಸಂಪುಟದಲ್ಲಿ ಈ ಶಾಸನವಿದೆ.

### ಸಕ್ಕರೆ ಬೈಲು ತಾಮ್ರ ಶಾಸನ

ಶಿಲಾ ಶಾಸನಗಳಂತೆ ತಾಮ್ರ ಶಾಸನಗಳ ಪರಂಪರೆಯೂ ಬಹಳ ಹಿಂದಿ ನಿಂದಲೂ ಬೆಳೆದು ಬಂದಿದೆ. ಈ ತಾಮ್ರ ಶಾಸನ ೧೭ನೆಯ ಶತಮಾನದಲ್ಲಿ, ೧೬೭೧ ರಲ್ಲಿ ರಚಿತವಾದದ್ದು. ಕೆಳದಿಯ ಅರಸು ಶಿವಪ್ಪನಾಯಕನ ಮಗ ಸೋಮಶೇಖರ ನಾಯಕ ಬಾಳೆ ಕೊಪ್ಪದಲ್ಲಿ ಮಠ ಕಟ್ಟಿಸಿ ಅದಕ್ಕೆ ಕೊಟ್ಟ ದಾನವನ್ನು ಇದು ಹೇಳುತ್ತದೆ. ಇದೂ ಸಹ ಎಪಿಗ್ರಾಫಿಯಾ ಕರ್ನಾಟಿಕಾದ ಎಂಟನೆಯ ಸಂಪುಟ ದಲ್ಲಿ ಪ್ರಕಟವಾಗಿದೆ.

### ಚಾಮರಾಜನಗರದ ಅರಿಕುಠಾರ ಶಾಸನ

ಮೈಸೂರು ಜಿಲ್ಲೆಯ ಚಾಮರಾಜನಗರಕ್ಕೆ ಹಿಂದೆ ಅರಿಕುಠಾರವೆಂಬ ಹೆಸರಿತ್ತು. ಅಲ್ಲಿ ದೊರೆತ ಶಾಸನ ಇದು. ಇದರ ಕಾಲವೂ ೧೭ನೆಯ ಶತಮಾನ (೧೬೦೫). ಅರಿಕುಠಾರದ ವೀರಭದ್ರದೇವರ ನೈವೇದ್ಯಕ್ಕೆ ಹಂಗರೆ ಪುರವನ್ನು ದಾನ ವಾಗಿ ಕೊಟ್ಟದ್ದನ್ನು ಉಲ್ಲೇಖಿಸುತ್ತದೆ. ಈ ಶಾಸನ ಎಪಿಗ್ರಾಫಿಯಾ ಕರ್ನಾಟಿಕಾದ ನಾಲ್ಕನೆಯ ಸಂಪುಟದಲ್ಲಿ ಪ್ರಕಟವಾಗಿದೆ.

### ಅರಕಲಗೂಡು ಶಾಸನ

ಹಾಸನ ಜಿಲ್ಲೆಯ ಅರಕಲಗೂಡಿನಲ್ಲಿ ದೊರೆತ ಈ ಶಾಸನ ಇತ್ತೀಚಿನ ಶಾಸನ ಗಳ ಗದ್ಯಕ್ಕೆ ಮಾದರಿಯಾಗಿದೆ. ಕೈ ತಪ್ಪಿದ ಶಾನುಭೋಗತನವನ್ನು ಶ್ರೀರಂಗ ಪಟ್ಟಣದ ರಾಜರಿಂದ ಮತ್ತೊಮ್ಮೆ ಪಡೆದಘಟನೆ ಸರಳವಾದ ನೇರವಾದ ಗದ್ಯದಲ್ಲಿ ನಿರೂಪಿತವಾಗಿದೆ. ಎಪಿಗ್ರಾಫಿಯಾ ಕರ್ನಾಟಿಕಾದ ಐದನೆಯ ಸಂಪುಟದಲ್ಲಿ ಪ್ರಕಟ ವಾಗಿದೆ.

### ಮಾವನೂರು ಶಾಸನ

ಹಾಸನ ಜಿಲ್ಲೆ, ಹೊಳೆನರಸೀಪುರ ತಾಲೂಕು ಮಾವನೂರಿನಲ್ಲಿ ದೊರೆತ ಈ ಶಾಸನದ ಕಾಲ ೧೨೮೩. ಹೊಯ್ಸಳ ವೀರನರಸಿಂಹನ ಆಳ್ವಿಕೆಯ ಕಾಲ. ಅಪ್ಪರಸಯ್ಯ ದೇವರಸರು ಮಾವನೂರಿನಲ್ಲಿ ಕಟ್ಟಿಸಿದ ದೇವಾಲಯಗಳಿಗೆ ವೀರ ನರಸಿಂಹನು ದತ್ತಿಯನ್ನು ಕೊಟ್ಟುದನ್ನು ಈ ಶಾಸನ ಹೇಳುತ್ತದೆ. ಪರ್ವತಯ್ಯ ಮತ್ತು ಆತನ ಮಗ ಅಪ್ಪಯ್ಯದೇವ ಇವರ ವರ್ಣನೆ ವಿಸ್ತಾರವಾಗಿ ಬಂದಿದೆ. ಶಾಸನ ಗದ್ಯದಲ್ಲಿ ಅಪರೂಪವಾಗಿ ದೊರೆಯುವ ಮಾದರಿ ಇದು. ಶಾಸನದಲ್ಲಿ ಗದ್ಯದ ಕೆಲಸ ಹೆಚ್ಚಾಗಿ ನೀರಸ ನಿರೂಪಣೆಯೇ. ಪದ್ಯ ಶಾಸನಗಳಲ್ಲಿ ಕಂಡುಬರುವ ಸಾಹಿತ್ಯ ಸೌಂದರ್ಯವನ್ನು, ಪ್ರೌಢಿಮೆಯನ್ನು ಗದ್ಯ ಶಾಸನಗಳಲ್ಲಿ ಕಾಣುವುದು ಕಷ್ಟ. ಕೊಟ್ಟ ದಾನ ಅದರ ಮಿತಿ ಮೇರೆಗಳನ್ನು ಹೇಳುವುದಕ್ಕೆ ಮಾತ್ರ ಗದ್ಯವನ್ನು ಹೆಚ್ಚಾಗಿ ಬಳಸಿಕೊಂಡದ್ದುಂಟು. ಆದರೆ ಇಲ್ಲಿನ ಗದ್ಯದಲ್ಲಿ ಕಂಡುಬರುವ ಭಾಷಾ ಪ್ರೌಢಿಮೆ ಮತ್ತು ವರ್ಣನಕೌಶಲ ಈ ಶಾಸನದ ವೈಶಿಷ್ಟ್ಯ. ಆ ವರ್ಣನೆಯ ಭಾಗವನ್ನು ಮಾತ್ರ ಇಲ್ಲಿ ಆರಿಸಿಕೊಡಲಾಗಿದೆ. ಈ ಶಾಸನದ ಪೂರ್ಣ ಪಾಠವನ್ನು ಎಪಿಗ್ರಾಫಿಯಾ ಕರ್ನಾಟಿಕಾದ ಹದಿನೈದನೆಯ ಸಂಪುಟದಲ್ಲಿ ನೋಡಬಹುದು.

### ಶ್ರವಣಬೆಳುಗೊಳದ ಶಾಸನ

ಹಾಸನ ಜಿಲ್ಲೆ ಚನ್ನರಾಯ ಪಟ್ಟಣ ತಾಲೂಕಿನ ಶ್ರವಣಬೆಳುಗೊಳದಲ್ಲಿರುವ ಅಸಂಖ್ಯಾತ ಶಾಸನ ಸಂಪತ್ತಿನಲ್ಲಿ ಇದೊಂದು; ೧೩೬೮ರಲ್ಲಿ ರಚಿತವಾದದ್ದು. ವಿಜಯನಗರದ ವೀರಬುಕ್ಕರಾಯನ ಧರ್ಮ ಸಮನ್ವಯ ದೃಷ್ಟಿಯನ್ನು ಎತ್ತಿ ತೋರಿಸುತ್ತದೆ. ಜೈನರಿಗೂ ವೈಷ್ಣವರಿಗೂ ಘರ್ಷಣೆ ತಲೆದೋರಿದಾಗ ಎರಡು ಪಂಗಡಗಳ ಧುರೀಣರನ್ನು ಬುಕ್ಕರಾಯ ಬರಮಾಡಿಕೊಂಡು ಕೈಕೈ ಹಿಡಿಸಿ ಸ್ನೇಹ ವನ್ನುಂಟುಮಾಡಿದ ಆ ಘಟನೆ ಮಹತ್ವಪೂರ್ಣವಾದದ್ದು. ಉಭಯ ಸಮಯವೂ ಕೂಡಿ ಕಲ್ಲೆಹದ ಬುವಿಸೆಟ್ಟಿಗೆ ಸಂಘನಾಯಕ ಪಟ್ಟವನ್ನು ಕಟ್ಟಿದರೆಂಬ ಮಾತನ್ನು ಗಮನಿಸಬೇಕು. ಹದಿನಾಲ್ಕನೆಯ ಶತಮಾನದ ಗದ್ಯದ ಸ್ವರೂಪಕ್ಕೂ ಇದು ಒಳ್ಳೆಯ ಸಾಕ್ಷಿಯಾಗಿದೆ. ಎಪಿಗ್ರಾಫಿಯಾ ಕರ್ನಾಟಿಕಾದ ಎರಡನೆಯ ಸಂಪುಟದಲ್ಲಿ ಈ ಶಾಸನ ಪ್ರಕಟವಾಗಿದೆ.

### ಮಲಪನಗುಡಿ ಶಾಸನ

ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನಲ್ಲಿದೆ ಮಲಪನಗುಡಿ. ಅಲ್ಲಿ ಸಿಕ್ಕಿರುವ ಈ ಶಾಸನದ ಕಾಲ ೧೪೧೨; ವಿಜಯನಗರದ ದೇವರಾಯನ ಕಾಲ. ಈ ಶಾಸನದ ವೈಶಿಷ್ಟ್ಯವೆಂದರೆ ಇಲ್ಲಿ ದಾನಕೊಟ್ಟಿರುವುದು ದೇವಾಲಯಕ್ಕಾಗಲೀ, ಪೂಜಾದಿ ಕಾರ್ಯಕ್ಕಾಗಲೀ ಅಲ್ಲ, ಅರವಟ್ಟಿಗೆಗಾಗಿ. ಬುಳ್ಳಿಯ ನಾಯಕನ ಮಗ ಹೆಗ್ಗಡೆ

ಸೋಮಣ್ಣನು ಅರವಟ್ಟಿಗೆ ಕಟ್ಟಿಸಿ ಅದಕ್ಕಾಗಿ ಬಿಟ್ಟ ವೃತ್ತಿಯ ವಿವರಗಳನ್ನು ಈ ಶಾಸನ ಹೇಳುತ್ತದೆ. 'ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್'—ಭಾಗ ಎರಡರಲ್ಲಿ ಪ್ರಕಟವಾಗಿದೆ ಈ ಶಾಸನ.

### ಶ್ರೀರಂಗಪಟ್ಟಣದ ಶಾಸನ

ಮಂಡ್ಯ ಜಿಲ್ಲೆಯ, ಶ್ರೀರಂಗಪಟ್ಟಣದಲ್ಲಿರುವ ರಂಗನಾಥ ದೇವಾಲಯ ದಲ್ಲಿದೆ ಈ ಶಾಸನ. ಅಚ್ಯುತರಾಯನ ಆಳ್ವಿಕೆಯ ಕಾಲದ್ದು. ೧೫೪೨ರಲ್ಲಿ ರಚಿತ ವಾದದ್ದು, ಅಪ್ಪಾಜಿಯ ಮಗ ಪೆದ್ದಿರಾಜ ಕೊಟ್ಟ ದಾನವನ್ನು ಇದು ಹೇಳುತ್ತದೆ. ಹದಿನಾರನೆಯ ಶತಮಾನ ಮತ್ತು ಅಲ್ಲಿಂದೀಚೆಗೆ ಗದ್ಯ ಹೆಚ್ಚು ಕಡಮೆ ಹೊಸ ಗನ್ನಡದ ಗದ್ಯದತ್ತ ವಾಲುತ್ತಿರುವುದನ್ನು ಕಾಣಬಹುದು. ಎಪಿಗ್ರಾಫಿಯಾ ಕರ್ನಾಟಿಕಾದ, ಎಂಟನೆಯ ಸಂಪುಟದಲ್ಲಿ ಈ ಶಾಸನವಿದೆ.

### ಸಕ್ಕರೆ ಬೈಲು ತಾಮ್ರ ಶಾಸನ

ಶಿಲಾ ಶಾಸನಗಳಂತೆ ತಾಮ್ರ ಶಾಸನಗಳ ಪರಂಪರೆಯು ಬಹಳ ಹಿಂದಿ ನಿಂದಲೂ ಬೆಳೆದು ಬಂದಿದೆ. ಈ ತಾಮ್ರ ಶಾಸನ ೧೭ನೆಯ ಶತಮಾನದಲ್ಲಿ, ೧೬೭೧ ರಲ್ಲಿ ರಚಿತವಾದದ್ದು. ಕೆಳದಿಯ ಅರಸು ಶಿವಪ್ಪನಾಯಕನ ಮಗ ಸೋಮಶೇಖರ ನಾಯಕ ಬಾಳೆ ಕೊಪ್ಪದಲ್ಲಿ ಮಠ ಕಟ್ಟಿಸಿ ಅದಕ್ಕೆ ಕೊಟ್ಟ ದಾನವನ್ನು ಇದು ಹೇಳುತ್ತದೆ. ಇದೂ ಸಹ ಎಪಿಗ್ರಾಫಿಯಾ ಕರ್ನಾಟಿಕಾದ ಎಂಟನೆಯ ಸಂಪುಟ ದಲ್ಲಿ ಪ್ರಕಟವಾಗಿದೆ.

### ಚಾಮರಾಜನಗರದ ಅರಿಕುಠಾರ ಶಾಸನ

ಮೈಸೂರು ಜಿಲ್ಲೆಯ ಚಾಮರಾಜನಗರಕ್ಕೆ ಹಿಂದೆ ಅರಿಕುಠಾರವೆಂಬ ಹೆಸರಿತ್ತು. ಅಲ್ಲಿ ದೊರೆತ ಶಾಸನ ಇದು. ಇದರ ಕಾಲವೂ ೧೭ನೆಯ ಶತಮಾನ (೧೬೦೫). ಅರಿಕುಠಾರದ ವೀರಭದ್ರದೇವರ ನೈವೇದ್ಯಕ್ಕೆ ಹಂಗರೆ ಪುರವನ್ನು ದಾನ ವಾಗಿ ಕೊಟ್ಟದ್ದನ್ನು ಉಲ್ಲೇಖಿಸುತ್ತದೆ. ಈ ಶಾಸನ ಎಪಿಗ್ರಾಫಿಯಾ ಕರ್ನಾಟಿಕಾದ ನಾಲ್ಕನೆಯ ಸಂಪುಟದಲ್ಲಿ ಪ್ರಕಟವಾಗಿದೆ.

### ಅರಕಲಗೂಡು ಶಾಸನ

ಹಾಸನ ಜಿಲ್ಲೆಯ ಅರಕಲಗೂಡಿನಲ್ಲಿ ದೊರೆತ ಈ ಶಾಸನ ಇತ್ತೀಚಿನ ಶಾಸನ ಗಳ ಗದ್ಯಕ್ಕೆ ಮಾದರಿಯಾಗಿದೆ. ಕೈ ತಪ್ಪಿದ ಶಾನುಭೋಗತನವನ್ನು ಶ್ರೀರಂಗ ಪಟ್ಟಣದ ರಾಜರಿಂದ ಮತ್ತೊಮ್ಮೆ ಪಡೆದಘಟನೆ ಸರಳವಾದ ನೇರವಾದ ಗದ್ಯದಲ್ಲಿ ನಿರೂಪಿತವಾಗಿದೆ. ಎಪಿಗ್ರಾಫಿಯಾ ಕರ್ನಾಟಿಕಾದ ಐದನೆಯ ಸಂಪುಟದಲ್ಲಿ ಪ್ರಕಟ ವಾಗಿದೆ.

ಪ್ರಸನ್ನ ನಂಜುಂಡೇಶ್ವರ ಶಾಸನ

ಇದು ಮೈಸೂರಿನ ಪ್ರಸನ್ನ ನಂಜುಂಡೇಶ್ವರ ದೇವಾಲಯದಲ್ಲಿರುವ ಶಾಸನ. ಕೃಷ್ಣರಾಜ ಒಡೆಯರ ಪಟ್ಟಮಹಿಷಿ ಲಕ್ಷ್ಮೀವಿಳಾಸ ದೇವಾಜಮ್ಮಣ್ಣಿಯವರು ದೇವಾಂಬ ಅಗ್ರಹಾರವನ್ನು ಕಟ್ಟಿಸಿಕೊಟ್ಟುದನ್ನು ಇದು ಹೇಳುತ್ತದೆ. ಎಫಿಗ್ರಾಫಿಯಾ ಕರ್ನಾಟಿಕಾದ ಮೂರನೆಯ ಸಂಪುಟದಲ್ಲಿ ಈ ಶಾಸನವನ್ನು ಕಾಣಬಹುದು.

## ಚಂಪೂ ಗದ್ಯ

ಗುಣವರ್ಮ

ಪಂಪಪೂರ್ವಯುಗದ ಪ್ರಸಿದ್ಧ ಕವಿಗಳಲ್ಲಿ ಗುಣವರ್ಮನೂ ಒಬ್ಬನು. ಇವನನ್ನು ಮೊದಲನೆಯ ಗುಣವರ್ಮನೆಂದು ಕರೆಯುವ ವಾಡಿಕೆ ಇದೆ. ಈತನ ಕಾಲ ಕ್ರಿ.ಶ. ಸುಮಾರು ೯೦೦. ನಯಸೇನ, ಪಾರ್ಶ್ವಪಂಡಿತ, ರುದ್ರಭಟ್ಟ, ಎರಡನೆಯ ನಾಗವರ್ಮ ಮೊದಲಾದವರು ಈತನನ್ನು ಹೊಗಳಿದ್ದಾರೆ. ಕೇಶಿರಾಜ ಮತ್ತು ನಾಗವರ್ಮರು ತಮ್ಮ ವ್ಯಾಕರಣಗ್ರಂಥಗಳಲ್ಲಿ ಈತನ ಕಾವ್ಯಗಳಿಂದ ಉದ್ಧರಿಸಿದ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಮಲ್ಲಿಕಾರ್ಜುನ ಮತ್ತು ಅಭಿನವವಾದಿ ವಿದ್ಯಾನಂದರು ತಮ್ಮ ಸಂಕಲನಗ್ರಂಥಗಳಲ್ಲಿ ಈತನ ಕಾವ್ಯಗಳಿಂದ ಆಯ್ದ ಭಾಗಗಳನ್ನು ಉದ್ಧರಿಸಿದ್ದಾರೆ. ಈ ಎಲ್ಲ ಆಧಾರಗಳ ಮೇಲೆ 'ಹರಿವಂಶ' 'ಭುವನೈಕವೀರ' ಮತ್ತು 'ಶೂದ್ರಕ' ಎಂಬ ಗ್ರಂಥಗಳನ್ನು ರಚಿಸಿದ್ದನೆಂದು ಹೇಳಲಾಗಿದೆ. ಆದರೆ ಇವನ ಈ ಗ್ರಂಥಗಳಾವುವೂ ದೊರೆತಿಲ್ಲ. ಉಪಲಬ್ಧ ಕಾವ್ಯಭಾಗಗಳ ಆಧಾರದ ಮೇಲೆ ಇವನೊಬ್ಬ ಪ್ರೌಢ ಕವಿಯೆಂದು ನಿಸ್ಸಂದೇಹವಾಗಿ ಹೇಳಬಹುದು. 'ಶೂದ್ರಕ' ಕಾವ್ಯದ ಗದ್ಯ ಮತ್ತು ಪದ್ಯ ಭಾಗಗಳು ದೊರೆತಿರುವುದು ಪಂಪಪೂರ್ವಯುಗದಲ್ಲಿಯೇ ಕನ್ನಡದ ವೈಶಿಷ್ಟ್ಯವಾದ ಚಂಪೂ ಕಾವ್ಯಶೈಲಿ ಪ್ರಚಲಿತವಾಗಿದ್ದಿತು ಎಂಬುದಕ್ಕೆ ಸಾಕ್ಷಿಯಾಗಿದೆ. ಪ್ರಾಚೀನ ಕಾವ್ಯ ವಸ್ತುವಿನಲ್ಲಿ ಸಮಕಾಲೀನ ಇತಿಹಾಸವನ್ನು ಅಡಕಗೊಳಿಸುವ ಕಾವ್ಯಸಂಪ್ರದಾಯದ ಇತಿಹಾಸವನ್ನೂ ಈ ಕಾವ್ಯ ಮತ್ತಷ್ಟು ಹಿಂದಕ್ಕೆ ಕೊಂಡೊಯ್ಯುತ್ತದೆ.

ಅಭಿನವ ವಾದಿವಿದ್ಯಾನಂದನ 'ಕಾವ್ಯಸಾರ'ದಿಂದ ಉದ್ಧೃತವಾಗಿರುವ 'ಶೂದ್ರಕ' ಕಾವ್ಯದ ಈ ಗದ್ಯಭಾಗದಲ್ಲಿ ರಣರಂಗದ ವರ್ಣನೆಯಿದೆ.

ಪಂಪ

"ಪಸರಿಪ ಕನ್ನಡಕ್ಕೊಡೆಯನೋರ್ವನೆ ಸತ್ಕವಿ ಪಂಪನಾವಗಂ" ಎಂದು ನಾಗರಾಜನಿಂದ ಕೀರ್ತಿತನಾಗಿದ್ದಾನೆ ಪಂಪ ಮಹಾಕವಿ. ಸಂಸ್ಕೃತಕ್ಕೆ ವಾಲ್ಮೀಕಿ ಹೇಗೋ, ಕನ್ನಡಕ್ಕೆ ಪಂಪನು ಹಾಗೆ. ಕನ್ನಡದ 'ಆದಿಕವಿ' ಎಂದು ಆ ಅರ್ಥದಲ್ಲಿ

ಪ್ರಸಿದ್ಧನಾಗಿದ್ದಾನೆ. ಈತನ ಕಾಲ ಕ್ರಿ.ಶ.ಹತ್ತನೆಯ ಶತಮಾನದ ಆದಿಭಾಗ. ಅರಿಕೇಸರಿಯ ಆಸ್ಥಾನದಲ್ಲಿದ್ದ ಪಂಪನು 'ಆದಿಪುರಾಣ' ಮತ್ತು 'ವಿಕ್ರಮಾರ್ಜುನ ವಿಜಯ' ಎಂಬ ಎರಡು ಚಂಪೂ ಕಾವ್ಯಗಳನ್ನು ರಚಿಸಿದ್ದಾನೆ. 'ಆದಿಪುರಾಣ' ಆಗಮಿಕ ಕಾವ್ಯ, 'ವಿಕ್ರಮಾರ್ಜುನ ವಿಜಯ' ಲೌಕಿಕ ಕಾವ್ಯ. ಈತನ ಈ ಎರಡು ಕೃತಿಗಳಿಗೂ ಸಂಸ್ಕೃತದಲ್ಲಿ ಆಕರಗ್ರಂಥಗಳು ಉಪಲಬ್ಧವಾಗಿದ್ದುವು. ಆದರೂ 'ಅಪೂರ್ವ'ವೆಂಬಂತೆ, 'ಮುನ್ನಿನ ಕಬ್ಬಮನೆಲ್ಲಮಿಕ್ಕಿ ಮೆಟ್ಟಿದುವು' ಎಂಬಂತೆ ಅಭೂತಪೂರ್ವ ರೀತಿಯಲ್ಲಿ ಕಾವ್ಯಗಳನ್ನು ರಚಿಸಿದ ಶ್ರೇಯಸ್ಸು ಈತನದಾಗಿದೆ. ಪಂಥ ನಿರ್ಮಾಪಕನಾದ ಮಹಾಕವಿಯೆನ್ನಿಸಿಕೊಂಡಿದ್ದಾನೆ. ರಂ. ಶ್ರೀ. ಮುಗಳಿಯವರು ಹೇಳಿರುವಂತೆ, "ಪೂರ್ವಸಾಮಗ್ರಿಯನ್ನು ಬಳಸಿಯೂ ಅಭಿವ್ಯಕ್ತಿಯಲ್ಲಿ ಅಪೂರ್ವವಾದ ಕಾವ್ಯಗಳನ್ನು ನಿರ್ಮಾಣಮಾಡಿದನು. ಅವನ ಉಜ್ವಲ ಪ್ರತಿಭೆ-ಪಾಂಡಿತ್ಯಗಳೊಡನೆ ಸಮಗ್ರವಾದ ಜೀವನಾನುಭವ, ವಿಶಾಲದೃಷ್ಟಿ, ಸಮನ್ವಯ ಬುದ್ಧಿ ಇವು ಬೆರೆತುಕೊಂಡು ಕನ್ನಡ ಮಾರ್ಗಕಾವ್ಯಕ್ಕೆ ಉನ್ನತ ಶಿಖರಗಳಾದ ಎರಡು ಕೃತಿಗಳನ್ನು ನೀಡಿದುವು. ಅವುಗಳ ಎತ್ತರವು ರಸಿಕರ ಬೆರಗನ್ನು ಬರಮಾಡಿತು, ಮುಂದಿನ ಕವಿಗಳಿಗೆ ಮೇಲ್ಪಂಕ್ತಿಯಾಗಿ ಅವರ ಸಾಹಸವನ್ನು ಕೆರಳಿಸಿದುವು. 'ಆನೆ ನಡೆದುದೆ ಬೀದಿಯಲ್ಲವೆ' ಎಂಬಂತೆ ಪಂಪನ ಮಾರ್ಗವೊಂದು ಪಂಪ ಯುಗದಲ್ಲಿ ರೂಢವಾಯಿತು."

ಪ್ರಸ್ತುತ ಪಠ್ಯಾಂಶದ ಮೊದಲನೆಯ ಭಾಗವನ್ನು ಪಂಪನ 'ಆದಿಪುರಾಣ'ದ ನಾಲ್ಕನೆಯ ಆಶ್ವಾಸದಿಂದ ಆಯ್ದುಕೊಳ್ಳಲಾಗಿದೆ. ಶ್ರೀಮತಿಯ ಪ್ರಸಾಧನ ವರ್ಣನೆಗೆ ಈ ಭಾಗ ಮೀಸಲಾಗಿದೆ.

ಎರಡನೆಯ ಭಾಗವನ್ನು 'ವಿಕ್ರಮಾರ್ಜುನ ವಿಜಯ' ಅಥವಾ 'ಪಂಪಭಾರತ'ದ ಎರಡನೆಯ ಆಶ್ವಾಸದಿಂದ ಆಯ್ದುಕೊಳ್ಳಲಾಗಿದೆ. ಈ ಭಾಗದಲ್ಲಿ ಪಂಪನು ವಸಂತನ ಆಗಮನ ಪ್ರಕೃತಿಯಲ್ಲಿ ಎಂತಹ ಪವಾಡವನ್ನುಂಟುಮಾಡುತ್ತದೆಂಬುದನ್ನು ಮನೋಹರವಾಗಿ ವರ್ಣಿಸಿದ್ದಾನೆ.

ಈ ಪಠ್ಯಾಂಶದ ಕೊನೆಯ ಭಾಗವನ್ನು 'ಪಂಪಭಾರತ'ದಿಂದಲೇ ಆಯ್ದುಕೊಳ್ಳಲಾಗಿದೆ. ಯಾಮಿನೀ ವರ್ಣನಕ್ಕೆ ಈ ಭಾಗ ಮೀಸಲಾಗಿದೆ.

ನಾಗವರ್ಮ

ಪಂಪಯುಗದ ಕವಿಗಳಲ್ಲಿ ಮತ್ತೊಂದು ವೈಶಿಷ್ಟ್ಯಪೂರ್ಣವಾದ ಹೆಸರು ನಾಗವರ್ಮನದು. ಈತನ ಕಾಲ ಕ್ರಿ.ಶ. ೯೯೦. 'ಕರ್ಣಾಟಕ ಕಾದಂಬರಿ' ಮತ್ತು 'ಛಂದೋಂಬುಧಿ' ಈತನ ಗ್ರಂಥಗಳು. ಈ ಎರಡು ಕ್ಷೇತ್ರಗಳಲ್ಲಿಯೂ ಇವನ ಕೃತಿಗಳು ಆದ್ಯಕೃತಿಗಳು. ಸಂಸ್ಕೃತ ಗದ್ಯಕಾವ್ಯವನ್ನು ಕನ್ನಡ ಚಂಪೂ ಕಾವ್ಯವನ್ನಾಗಿ ಪರಿವರ್ತಿಸಿಕೊಂಡು ಹೊಸದೊಂದು ಪಂಥವನ್ನು ರಚಿಸಿದ ಮೊದಲಿಗನಾದ

ತನ್ನ 'ಕರ್ಣಾಟಕ ಕಾದಂಬರಿ' ಗ್ರಂಥದಿಂದ. ಇದು ಕೇವಲ ಭಾಷಾಂತರವಲ್ಲ. ಅದ್ಭುತ ಪ್ರತಿಭೆಯ ಈ ಶ್ರೇಷ್ಠ ಕವಿ ಮೂಲದ ಪಾಂಡಿತ್ಯಕ್ಲೇಶವನ್ನು ತೊಡೆದು ಹಾಕಿ, ಸಾರ ಸಂಗ್ರಹಿಯಾಗಿ ಬಾಣ ಭಟ್ಟನ ಆ ಮಹಾಕಾವ್ಯವನ್ನು ಕನ್ನಡದ ಸರಸ ಕಾವ್ಯವನ್ನಾಗಿಸಿದ್ದಾನೆ. 'ಛಂದೋಂಬುಧಿ' ಕನ್ನಡ ಛಂದಸ್ಸನ್ನು ಕುರಿತ ಮೊಟ್ಟ ಮೊದಲನೆಯ ಗ್ರಂಥ. 'ಲಕ್ಷಣ' ವಿವರಗಳನ್ನೊಳಗೊಂಡ ಪದ್ಯಗಳೇ 'ಲಕ್ಷ್ಯ' ಗಳೂ ಆಗುವಂತೆ ತನ್ನ ಗ್ರಂಥವನ್ನು ರಚಿಸಿರುವುದು ಈತನ ವೈಶಿಷ್ಟ್ಯ. ಕನ್ನಡಕ್ಕೆ ವಿಶಿಷ್ಟವಾದ ಛಂದೋ ಜಾತಿಗಳ ವರ್ಣನೆಯೂ ಇದರಲ್ಲಿ ಕಾಣದೊರೆಯುತ್ತದೆ.

ಪಠ್ಯಾಂಶದ ಒಂದು ಮತ್ತು ಎರಡನೆಯ ಭಾಗಗಳನ್ನು 'ಕರ್ಣಾಟಕ ಕಾದಂಬರಿ'ಯ ಪೂರ್ವಭಾಗದಿಂದಲೂ, ಮೂರನೆಯ ಭಾಗವನ್ನು ಉತ್ತರಭಾಗ ದಿಂದಲೂ ಆಯ್ದುಕೊಳ್ಳಲಾಗಿದೆ. ಮೊದಲನೆಯ ಭಾಗದಲ್ಲಿ ಬೇಟೆಯ ವರ್ಣನೆ ಇದೆ. ಕಾದಂಬರಿಯ ಭವ್ಯಶೈಲಿ ಮತ್ತು ಕವಿಯ ವರ್ಣನಚಾತುರ್ಯಕ್ಕೆ ಈ ಭಾಗ ನಿದರ್ಶನಪ್ರಾಯವಾಗಿದೆ.

ಎರಡನೆಯ ಭಾಗ ಪುಂಡರೀಕನನ್ನು ಕಂಡು, ಮಾತನಾಡಿಸಿ ಮೋಹ ವಿಹ್ವಲೆಯಾದ ಮಹಾಶ್ವೇತೆಯ ಭಾವಾನುಭಾವಗಳ ಸುಂದರ ವರ್ಣನೆಯನ್ನು ಒಳಗೊಂಡಿದೆ.

ತನಗಾಗಿ ಜನ್ಮಾಂತರಗಳನ್ನೆತ್ತಿ ಕೋಟಲೆಗಳನ್ನನುಭವಿಸಿದ ಮಿತ್ರ ಕಪಿಂ ಜಲನ ಅನುಪಮ ಮೈತ್ರಿಯನ್ನು ಕೊಂಡಾಡುವ ವರ್ಣನೆಯನ್ನೊಳಗೊಂಡಿದೆ ಕೊನೆಯ ಭಾಗ.

-

## ದುರ್ಗಸಿಂಹ

ಸಂಸ್ಕೃತದಲ್ಲಿಯೇ ಇಂದು ಅನುಪಲಬ್ಧವಾಗಿರುವ ವಸುಭಾಗ ಭಟ್ಟನ 'ಪಂಚ ತಂತ್ರ'ವನ್ನು ಕನ್ನಡಿಸಿ ಕೊಟ್ಟ ಕೀರ್ತಿ ದುರ್ಗಸಿಂಹನದಾಗಿದೆ. ಈ ದೃಷ್ಟಿಯಿಂದ ಈ ಕನ್ನಡ ಕೃತಿಗೆ ಐತಿಹಾಸಿಕ ಮಹತ್ವವೂ ಇದೆ. ಈತನ ಕಾಲ ಕ್ರಿ.ಶ. ಸುಮಾರು ೧೦೩೦. ರಾಜಕೀಯ ಷಡ್ಯಂತ್ರದ ವಿಭಿನ್ನ ರೀತಿನೀತಿಗಳು, ನಿವಾರಣೋಪಾಯಗಳು, ದೈನಂದಿನ ಜೀವನ ವಿಧಾನದ ಹಲವಾರು ಸಂಗತಿಗಳನ್ನು ಹೃದ್ಯವಾಗಿ, ಮನೋ ರಂಜಕವಾಗಿ ನಿರೂಪಿಸಿರುವುದು ಈ ಗ್ರಂಥದ ವೈಶಿಷ್ಟ್ಯ. 'ಪಿಂಗಳಕ'ನೆಂಬ ಸಿಂಹ ಮತ್ತು 'ಸಂಜೀವಕ'ನೆಂಬ ಎತ್ತಿನ ನಡುವಣ ವ್ಯವಹಾರದ ಅಂಗವಾಗಿ ಭೇದೋಪಾಯ, ವಿಶ್ವಾಸೋಪಾಯ, ಪರೀಕ್ಷೋಪಾಯ, ವಂಚನೋಪಾಯ ಮತ್ತು ಮಿತ್ರಕಾರ್ಯೋಪಾಯಗಳೆಂಬ ಐದು ತಂತ್ರಗಳನ್ನು ನಿರೂಪಿಸಲಾಗಿದೆ. ಮೊದಲ ತಂತ್ರದಲ್ಲಿ ಹಲವು ಕಥೆಗಳನ್ನೊಳಗೊಂಡ ಅಖಂಡ ಕಥೆಯಿದೆ. ಇತರ ತಂತ್ರಗಳಲ್ಲಿ ಈ ಬಗೆಯ ಅಖಂಡ ಕಥೆಯಿಲ್ಲ. ಕಥೆ ಮತ್ತು ಉಪಕಥೆಗಳಿಂದ ತುಂಬಿರುವ ಈ ಕಥಾಸಾಗರ ತುಂಬ ಮನೋರಂಜಕವಾಗಿದೆ.

ಪಠ್ಯಾಂಶದ ಮೊದಲಭಾಗ ''ಪಂಚತಂತ್ರ''ದ 'ಭೇದ ಪ್ರಕರಣ ವರ್ಣನಂ' ಎಂಬ ಪ್ರಥಮ ತಂತ್ರದ ಅಂಗವಾಗಿ ಬರುವ ಯದ್ಭವಿಷ್ಯನೆಂಬ ಮತ್ಸ್ಯನ ಕಥೆಯನ್ನೊಳಗೊಂಡಿದೆ. ಇದು ಈ ಪ್ರಕರಣದ ಇಪ್ಪತ್ತಮೂರನೆಯ ಕಥೆ.

ಎರಡನೆಯ ಭಾಗ 'ವಿಶ್ವಾಸ ಪ್ರಕರಣ'ವೆಂಬ ತೃತೀಯ ತಂತ್ರದ ಅಂಗವಾಗಿ ಬರುವ 'ಬ್ರಹ್ಮರಾಕ್ಷಸನುಂ ತಸ್ಕರನುಂ' ಎಂಬ ಕಥೆಯನ್ನೊಳಗೊಂಡಿದೆ. ಇದು ಈ ಪ್ರಕರಣದಲ್ಲಿ ಬರುವ ಆರನೆಯ ಕಥೆ.

ನಯಸೇನ

ನಯಸೇನನ ಕಾಲ ಕ್ರಿ.ಶ. ೧೧೧೨. 'ಧರ್ಮಾಮೃತ' ಈತನ ಕಾವ್ಯ. ಜೈನಮತದ ಸಾರಸರ್ವಸ್ವವನ್ನೆಲ್ಲ ತನ್ನ ಈ ಗ್ರಂಥದಲ್ಲಿ ಕಂಡರಿಸಿರುವುದಾಗಿ ಈತನು ಹೇಳಿಕೊಂಡಿದ್ದಾನೆ. ಧರ್ಮ ನಿರೂಪಣೆಯೇ ಈ ಕಾವ್ಯದ ಉದ್ದೇಶ. ತನ್ನ ಈ ಉದ್ದೇಶವನ್ನು ಈಡೇರಿಸಿಕೊಳ್ಳಲು ಈತನು ಕಥೆಯ ಮಾಧ್ಯಮವನ್ನು ಆಶ್ರಯಿಸಿದ್ದಾನೆ. ಹದಿನಾಲ್ಕು ಆಶ್ವಾಸಗಳನ್ನುಳ್ಳ ಈ ಕಾವ್ಯದ ಒಂದೊಂದು ಆಶ್ವಾಸದಲ್ಲೂ ಒಂದೊಂದು ಸುಂದರ ಕಥೆ ಕಾಣದೊರೆಯುತ್ತದೆ. ಕಥೆಗಳ ಮೂಲಕ ಧರ್ಮಾಮೃತವನ್ನೆರೆದಿದ್ದಾನೆ. ದೇಸಿ ಶೈಲಿಯನ್ನು ಬಳಸಿರುವ ಈತನ ಆದರ್ಶ ಸೂತ್ರವಂತೂ ಕನ್ನಡಿಗರಿಗೆ ತುಂಬ ಪರಿಚಿತವಾಗಿದೆ. 'ಶುದ್ಧಗನ್ನಡದೊಳ್ ತಂದಿಕ್ಕುವುದೆ ಸಕ್ಕದಂಗಳ ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ'—ಎಂಬುದೇ ಆ ಸೂಕ್ತಿ. ಹೀಗಾಗಿ, ಕನ್ನಡ ಗದ್ಯಶೈಲಿಯ ಬೆಳವಣಿಗೆಯಲ್ಲಿ ಈತನಿಗೂ ಒಂದು ಪ್ರಮುಖ ಸ್ಥಾನವಿದೆ.

ಪಠ್ಯಾಂಶದ ಮೊದಲನೆಯ ಭಾಗವನ್ನು ''ಧರ್ಮಾಮೃತ''ದ ಎರಡನೆಯ ಆಶ್ವಾಸದಿಂದಲೂ, ಎರಡನೆಯ ಭಾಗವನ್ನು ಎಂಟನೆಯ ಆಶ್ವಾಸದಿಂದಲೂ, ಮೂರನೆಯ ಭಾಗವನ್ನು ನಾಲ್ಕನೆಯ ಆಶ್ವಾಸದಿಂದಲೂ ಆಯ್ದುಕೊಳ್ಳಲಾಗಿದೆ.

ಅವಿಚಾರಿತಕೋಪ ಅನರ್ಥಕ್ಕೆ ಕಾರಣವಾಗುತ್ತದೆಂಬ ಸತ್ಯವನ್ನು ನಿರೂಪಿಸುವ ಈ ಮೊದಲನೆಯ ಪ್ರಸಂಗ ವರಧರ್ಮಭಟ್ಟಾರಕರು ಉಪದೇಶಿಸಿದ ಒಂದು ವ್ರತದ ರೂಪದಲ್ಲಿ ಕಂಡರಣೆಗೊಂಡಿದೆ.

ಯಜ್ಞದತ್ತೆ ಸಕಲ ಸೌಭಾಗ್ಯಗಳು ದೊರೆತಿದ್ದರೂ ಬೇರಾವುದನ್ನೂ ಬಯಸದೆ ಮಾವಿನಹಣ್ಣನ್ನೇ ಬಯಸಲು ಕಾರಣವೇನೆಂದು ಸುಮತಿಭಟ್ಟಾರಕರನ್ನು ಕೇಳಿದಾಗ ಜಿನೇಂದ್ರಾಭಿಷೇಕವನ್ನು ನೋಡಬೇಕೆಂಬ ತನ್ನ ಬಯಕೆಯನ್ನು ಹೇಳಲಾರದೆ ಪ್ರಕಾರಾಂತರವಾಗಿ ತನ್ನ ಬಯಕೆಯನ್ನು ಸೂಚಿಸಿದಳೆಂಬುದನ್ನು ಅವರಿಂದ ತಿಳಿದು ಸೋಮದತ್ತನು ಆಶ್ಚರ್ಯಚಕಿತನಾದ ಪ್ರಸಂಗವನ್ನೊಳಗೊಂಡಿದೆ ಎರಡನೆಯ ಭಾಗ.

ಮೂರನೆಯ ಭಾಗ ಶವ್ಯಜೀವನ ವರ್ಣನೆಗೆ ಮೀಸಲಾಗಿದೆ. ಈ ಭಾಗ

ಮಾಲೆಮಾಲೆಯಾಗಿ ಉಪಮೆಗಳನ್ನು ತೂರಿಬಿಡುವ ನಯಸೇನನ ವಿಶಿಷ್ಟ ಶೈಲಿಗೆ ನಿದರ್ಶನವಾಗಿದೆ.

**ಅಗ್ಗಳ**

ಎಂಟನೆಯ ತೀರ್ಥಂಕರನಾದ ಚಂದ್ರಪ್ರಭನ ಚರಿತ್ರೆಯನ್ನು ಕುರಿತ ಮೊಟ್ಟ ಮೊದಲನೆಯ ಉಪಲಬ್ಧ ಗ್ರಂಥವಾಗಿರುವ 'ಚಂದ್ರಪ್ರಭ ಪುರಾಣ' ವನ್ನು ರಚಿಸಿರುವ ಅಗ್ಗಳನ ಕಾಲ ಸುಮಾರು ಕ್ರಿ.ಶ. ೧೨೦೦. ಇದು ಹದಿನಾರು ಆಶ್ವಾಸಗಳನ್ನುಳ್ಳ ಕಾವ್ಯ. ಸಂಸ್ಕೃತ ಭೂಯಿಷ್ಠವಾದ ಶೈಲಿಯಿಂದಾಗಿ ಇದರ ಬಂಧ ತುಂಬ ಪ್ರೌಢವಾಗಿದೆ. ಭವಾವಳಿಗಳ ಗೊಂದಲವನ್ನು ದೂರಮಾಡಿದ್ದಾನೆ. ಆತನ ಕವಿಹೃದಯ ಮತ್ತು ಕಲ್ಪನಾ ವಿಲಾಸಗಳ ಸೊಗಸನ್ನು ಅಲ್ಲಲ್ಲಿ ಕಾಣಬಹುದು. ಆದರೆ ಜೈನ ದರ್ಶನದ ತತ್ತ್ವಗಳು, ಕವಿ ಸಮಯಗಳ ನಿಬಂಧನೆಗೆ ಒಳಪಟ್ಟಿರುವುದರಿಂದ ಇದು ಮಧ್ಯಮ ಗುಣದ ಕಾವ್ಯವಾಗಿ ಪರಿಣಮಿಸಿದೆ. ಇಷ್ಟಾದರೂ ಆತನ ಶೈಲಿಯಲ್ಲಿ ತನ್ನದೇ ಆದ ಒಂದು ಬಗೆಯ ಮೋಹಕತೆಯಿದೆ.

'ಚಂದ್ರಪ್ರಭ ಪುರಾಣ'ದ ಮೊದಲನೆಯ ಆಶ್ವಾಸದಿಂದ ಆಯ್ದುಕೊಳ್ಳಲಾಗಿರುವ ಈ ಭಾಗದಲ್ಲಿ ಮನೋಹರವಾದ ವನವರ್ಣನೆ ಇದೆ.

**ರುದ್ರಭಟ್ಟ**

ವೀರಬಲ್ಲಾಳನ ಮಂತ್ರಿಯಾದ ಚಂದ್ರಮೌಳಿಯ ಆಶ್ರಯದಲ್ಲಿದ್ದವನೂ, ನೇಮಿಚಂದ್ರನ ಸಮಕಾಲೀನನೂ ಆದ ರುದ್ರಭಟ್ಟನ ಕಾಲ ಸುಮಾರು ಕ್ರಿ.ಶ. ೧೨೦೦. ವೈದಿಕ ಪುರಾಣವನ್ನು ಕನ್ನಡ ಕಾವ್ಯರೂಪದಲ್ಲಿ ನೀಡುವ ಸಂಪ್ರದಾಯವನ್ನು ಹಾಕಿದ ಶ್ರೇಯಸ್ಸು ಇವನದಾಗಿದೆ. ಈತನು 'ಜಗನ್ನಾಥ ವಿಜಯ' ಎಂಬ ಕಾವ್ಯವನ್ನೂ, 'ರಸಕಲಿಕೆ' ಎಂಬ ಲಕ್ಷಣ ಗ್ರಂಥವನ್ನೂ ಬರೆದಿದ್ದಾನೆ. 'ರಸಕಲಿಕೆ' ಇನ್ನೂ ಅನುಪಲಬ್ಧವಾಗಿದೆ. ವಿಷ್ಣುಪುರಾಣದ ಐದು ಮತ್ತು ಆರನೆಯ ಅಂಶಗಳಲ್ಲಿ ಕಾಣದೊರೆಯುವ ಕೃಷ್ಣ ಕಥೆಯೇ 'ಜಗನ್ನಾಥ ವಿಜಯ'ದ ಕಥಾವಸ್ತು. 'ವಿಷ್ಣುಪುರಾಣ'ವನ್ನೇ ಹೆಚ್ಚಾಗಿ ಅನುಸರಿಸಿದ್ದರೂ ಭಾರತ, ಭಾಗವತ, ಕೃಷ್ಣ ಕರ್ಣಾಮೃತಗಳ ಪ್ರಭಾವಕ್ಕೆ ಒಳಗಾಗಿರುವುದು ಕಂಡುಬರುತ್ತದೆ. ಈ ಶತಮಾನದ ಇತರ ಗ್ರಂಥಗಳಂತೆ ಈ ಗ್ರಂಥದ ಶೈಲಿಯೂ ಪ್ರೌಢವಾಗಿದೆ. ಕಾವ್ಯ ಮಧ್ಯಮ ವರ್ಗದ್ದಾಗಿದೆ. ಚಂಪೂ ರಚನೆಯಲ್ಲಿ ಬಲ್ಲಿದನಾದ ಈತನ ಕಾವ್ಯದಲ್ಲಿ ಭಕ್ತಿರಸದ ಆಧಿಕ್ಯವಿದೆ.

'ಜಗನ್ನಾಥ ವಿಜಯ'ದ ದ್ವಿತೀಯಾಶ್ವಾಸದಿಂದ ಪ್ರಸ್ತುತ ಪದ್ಯಾಂಶವನ್ನು ಆಯ್ದುಕೊಳ್ಳಲಾಗಿದೆ. ಸದ್ಗುಣಗಳ ಆಗರದಂತಿದ್ದ ಜನಪದದ ವೈಶಿಷ್ಟ್ಯಗಳ ವರ್ಣನೆಯನ್ನು ಇಲ್ಲಿ ಕಾಣಬಹುದಾಗಿದೆ.

## ಆಂಡಯ್ಯ

'ಕನ್ನಡವೊಳ್ಪಿನ ನುಡಿಯಂ ಮುನ್ನಿದಱೊಳೆ ನೋಡಿ ತಿಳಿದುಕೊಳ್ವುದು ಚದುರಂ' ಎಂದು ತನ್ನ ಕಾವ್ಯವಾದ 'ಕಬ್ಬಿಗರ ಕಾವಂ' ಬಗ್ಗೆ ಹೇಳಿಕೊಂಡಿರುವ ಆಂಡಯ್ಯನ ಕಾಲ ೧೨ನೆಯ ಶತಮಾನದ ಕೊನೆಯ ಚರಣ ಮತ್ತು ಹದಿಮೂರನೆಯ ಶತಮಾನದ ಪ್ರಥಮ ಚರಣ. ಸಂಸ್ಕೃತ ಶಬ್ದಗಳನ್ನು ಬಳಸದೆ ಕಾವ್ಯವನ್ನು ಬರೆಯುವೆನೆಂಬ ಪಣತೊಟ್ಟು, ಅದರಲ್ಲಿ ಯಶಸ್ವಿಯಾಗಿರುವುದು ಇವನ ಹೆಚ್ಚಳ. ಈ ಕಾವ್ಯಕ್ಕೆ 'ಸೊಬಗಿನ ಸುಗ್ಗಿ', 'ಕಾವನಗೆಲ್ಲ' ಎಂಬ ಹೆಸರುಗಳೂ ಉಂಟು. ಮನ್ಮಥ ವಿಜಯದ ಸ್ವಕಪೋಲ ಕಲ್ಪಿತ ಕಥೆ ಇದರ ವಸ್ತು. ಈತನ ಹಿರಿಮೆಯನ್ನು ದೇಜಗೌ ಅವರು ಈ ಕೆಲವು ಮಾತುಗಳಲ್ಲಿ ಸೆರೆ ಹಿಡಿದಿದ್ದಾರೆ: ''ಪುರಾಣೇತಿಹಾಸಗಳ ಸಂಸಿದ್ಧವಾದ ಅಥವಾ ಚರ್ವಿತ ಚರ್ವಣವಾದ ಕಥಾನಕಗಳನ್ನೂ ಕಥನ ಕ್ರಮವನ್ನೂ ತೊರೆದು, ಸ್ವತಂತ್ರ ದೃಷ್ಟಿಯ ವಿಶಿಷ್ಟ ಕಲ್ಪನೆಯ ನೂತನ ವಸ್ತು ನಿರ್ಮಾಣದ ಮೂಲಕ ಸವೆದ ಜಾಡನ್ನು ನಿರ್ಲಕ್ಷಿಸಿ, ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ವಿನೂತನ ಮಾರ್ಗವನ್ನು ಪ್ರತಿಷ್ಠಾಪಿಸಿದ ಕೀರ್ತಿ ಕವಿಗೆ ಮೀಸಲಾಗಿದೆ. ಚಂಪೂವಿನ ಚೌಕಟ್ಟನ್ನು ತ್ಯಜಿಸದಿದ್ದರೂ, ಕನ್ನಡಕ್ಕೊಗ್ಗದ ಕೃತಕ ಶೈಲಿಯನ್ನು ಧಿಕ್ಕರಿಸಿ, ದೇಸಿ ಪ್ರಚುರವಾದ ಅಚ್ಚಗನ್ನಡ ಶೈಲಿಯನ್ನು ತನ್ನ ಕಾವ್ಯಕ್ಕಳವಡಿಸಿಕೊಂಡ ಹಠರೂಪದ ನಿಷ್ಠೆಯಲ್ಲಿ ಅವನ ಧೈರ್ಯ ಪ್ರತಿಬಿಂಬಿಸುತ್ತದೆ. ಪೌರಾಣಿಕ ವಸ್ತು ಮತ್ತು ಚಾರಿತ್ರಿಕ ಸಂಗತಿಗಳನ್ನು ಮೊದಲಿಂದ ಕೊನೆಯತನಕ ಓತಪ್ರೋತವಾಗಿ ಹೆಣೆದದ್ದರಲ್ಲಿ ಅವನ ಹೆಚ್ಚುಗಾರಿಕೆ ಮಾರ್ದನಿಸುತ್ತದೆ. ಈ ಮೂರು ವಿಶಿಷ್ಟ ಗುಣಗಳಿಂದ ಆಂಡಯ್ಯನ ಸ್ಥಾನ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸುಭದ್ರಗೊಂಡಿದೆ."

ಪಠ್ಯಾಂಶದ ಮೊದಲನೆಯ ಭಾಗದಲ್ಲಿ ಆಂಡಯ್ಯನು ಬಸಂತಂಗೆ ನೆಲೆವೀಡಾಗಿದ್ದಂತಹ ವನವೊಂದನ್ನು, ಎರಡನೆಯ ಭಾಗದಲ್ಲಿ ಇಟ್ಟಣಂಬಡೆದ ಪಟ್ಟಣದ ಹೆಚ್ಚಳ, ಹಿರಿಮೆಗಳನ್ನೂ ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ವರ್ಣಿಸಿದ್ದಾನೆ.

## ಷಡಕ್ಷರಿ

ಹದಿನೇಳನೆಯ ಶತಮಾನದಲ್ಲಿ ಜನಮನವನ್ನು ಸೂರೆಗೊಂಡ ಮಹಾಕವಿ ಷಡಕ್ಷರಿ. ಸಂಸ್ಕೃತ ಮತ್ತು ಕನ್ನಡ ಭಾಷೆಗಳೆರಡರಲ್ಲಿಯೂ ಕಾವ್ಯವನ್ನು ರಚಿಸಿ 'ಸೈ' ಎನ್ನಿಸಿಕೊಂಡ ಮಹಾ ಪ್ರತಿಭಾವಂತ ಇವನು. 'ಕವಿಕರ್ಣ ರಸಾಯನ', 'ಶಿವಾಧಿಕ್ಯ ರತ್ನಾವಳಿ', 'ಭಕ್ತ್ಯಾಧಿಕ್ಯ ರತ್ನಾವಳಿ' ಎಂಬುವು ಈತನ ಇತರ ಸಂಸ್ಕೃತ ಗ್ರಂಥಗಳು. 'ವೃಷಭೇಂದ್ರ ವಿಜಯ', 'ಶಬರ ಶಂಕರ ವಿಳಾಸ' ಮತ್ತು 'ರಾಜಶೇಖರ ವಿಳಾಸ' ಈತನ ಕನ್ನಡ ಚಂಪೂಕಾವ್ಯಗಳು. ಇವುಗಳೇ ಅಲ್ಲದೆ ಈತನು ಹಲವು ಸ್ತೋತ್ರಗಳನ್ನೂ ರಚಿಸಿದ್ದಾನೆ. ಷಡಕ್ಷರಿಯ ಅಚ್ಯುತ ಕೀರ್ತಿಗೆ ಕಾರಣವಾಗಿರುವುದು ಆತನ ರಾಜಶೇಖರ ವಿಳಾಸ. ಅದರಲ್ಲಿಯೂ ಆ ಕಾವ್ಯದಲ್ಲಿ

ಬರುವ ತಿರುಕೊಳವಿನಾಚಿಯ ಪ್ರಲಾಪ ಕರುಣರಸದ ಕಡಲನ್ನೇ ಉಕ್ಕಿಸುತ್ತದೆ. ಇವನ ಕಾವ್ಯಶಕ್ತಿಯ ವಿಚಾರದಲ್ಲಿ ರಂ. ಶ್ರೀ ಮುಗಳಿಯವರು ಈರೀತಿ ಹೇಳಿದ್ದಾರೆ: "ಷಡಕ್ಷರಿ ನಮ್ಮ ನಾಡಿನ ಅಸಾಮಾನ್ಯ ಪ್ರತಿಭಾಶಾಲಿಗಳಲ್ಲಿ ಒಬ್ಬ."

"ಶಬರಶಂಕರ ವಿಳಾಸ" ದಿಂದ ಆಯ್ದುಕೊಳ್ಳಲಾಗಿರುವ ಈ ಪಠ್ಯಭಾಗ ಪರಮೇಶ್ವರನ ವರ್ಣನೆಯನ್ನೊಳಗೊಂಡಿದೆ. ಈ ಭಾಗ ಷಡಕ್ಷರಿಯ ಶೈಲಿಯ ವೈಶಿಷ್ಟ್ಯಗಳಲ್ಲೊಂದಾದ ಸಮಾಸಭೂಯಿಷ್ಠತೆಗೂ, ಆತನ ಪಾಂಡಿತ್ಯಕ್ಕೂ ಉದಾಹರಣೆಯಾಗಿದೆ.

**ಹರಿಹರ**

ಸುಮಾರು ಕ್ರಿ.ಶ. ೧೨೦೦ರ ಹೊತ್ತಿನಲ್ಲಿ ಜೀವಿಸಿದ್ದನೆಂದು ಹೇಳಲಾದ ಹರಿಹರನು ಕನ್ನಡದ ಮಹಾ ಕವಿಗಳಲ್ಲಿ ಒಬ್ಬನಾಗಿದ್ದಾನೆ. 'ಪಂಪಾಶತಕ', 'ರಕ್ಷಾಶತಕ', 'ಮುಡಿಗೆಯ ಅಷ್ಟಕ', 'ಗಿರಿಜಾ ಕಲ್ಯಾಣ' ಎಂಬ ಕೃತಿಗಳಲ್ಲದೆ ಹರಿಹರನು ಅನೇಕ ರಗಳೆಗಳನ್ನು ಬರೆದಿದ್ದಾನೆ. ಇವುಗಳ ರಚನೆಯ ಕ್ರಮ ಹಾಗೂ ಸಂಖ್ಯೆಯ ವಿಷಯದಲ್ಲಿ ಬೇಕಾದಷ್ಟು ಚರ್ಚೆ ನಡೆದಿದೆ. ಹರಿಹರನ ರಗಳೆಗಳು ಪ್ರಧಾನವಾಗಿ ಶಿವಭಕ್ತರ ಕಾವ್ಯಾತ್ಮಚರಿತೆಗಳಾಗಿವೆ. ರಗಳೆಯೆಂಬ ಸಾಹಿತ್ಯ ಪ್ರಕಾರಕ್ಕೆ ಸಾಹಿತ್ಯ ಚರಿತ್ರೆಯಲ್ಲಿ ಮಹತ್ವದ ಸ್ಥಾನವನ್ನು ದೊರಕಿಸಿ ಕೊಟ್ಟವನು ಹರಿಹರ. ಅವನ ಕೃತಿಗಳಲ್ಲಿ ಉತ್ಸಾಹ, ಭಕ್ತಿ, ಕಲ್ಪನೆಗಳು ಮುಪ್ಪುರಿಗೊಂಡಿವೆ.

ಪಠ್ಯಾಂಶದ ಮೊದಲನೆಯ ಗದ್ಯಭಾಗವನ್ನು 'ಬಸವರಾಜದೇವರ ರಗಳೆ' ಯಿಂದ ಆರಿಸಿಕೊಳ್ಳಲಾಗಿದೆ. ಮಂಗಳವಾಡಕ್ಕೆ ಹೋಗಬೇಕೆಂಬ ಶಿವನ ಆಣತಿಯಿಂದ ದುಃಖವಿಹ್ವಲರಾದ ಬಸವಣ್ಣನವರ ಹೃದಯದ ಒಳತೋಟಿಯನ್ನೂ, ಅವರಿಗೆ ಹರಕರುಣೋದಯವಾದುದನ್ನೂ, ಬಸವಣ್ಣನವರ ಅನುಪಮ ಭಕ್ತಿಯನ್ನೂ, ಹೃದ್ಯವಾಗಿ ನಿರೂಪಿಸಲಾಗಿದೆ. ನಾಸ್ತಿಕರನ್ನೂ ಆಸ್ತಿಕರನ್ನಾಗಿಸಿಬಿಡುವಷ್ಟು ಮನೋಹರವಾಗಿ ಬಂದಿದೆ ಇಲ್ಲಿಯ ವರ್ಣನೆ. ಹರಿಹರನ ಕಾವ್ಯಶಕ್ತಿಯ ಪರಮೋತ್ಕರ್ಷಕ್ಕೂ ಈ ಪ್ರಸಂಗ ಒಂದು ನಿದರ್ಶನವಾಗಿದೆ.

ಪಠ್ಯಾಂಶದ ಎರಡನೆಯ ಭಾಗ 'ನಂಬಿಯಣ್ಣನ ರಗಳೆ'ಯ ನಾಲ್ಕನೆಯ ಸ್ಥಲವಾಗಿದೆ. ನಂಬಿಯಣ್ಣನಿಗೆ ಯೋಗ್ಯಳಾದ ಕನ್ಯೆಯನ್ನು ಅರಸುವ ಹೊಣೆಯನ್ನು ಹೊತ್ತ ತುಂಬುರನು ತನ್ನ ಕಾರ್ಯದಲ್ಲಿ ಸಫಲನಾಗಿ ಬಂದು ವಿವಾಹ ಸಂಭ್ರಮದ ಏರ್ಪಾಡುಗಳನ್ನು ಮಾಡತೊಡಗುವ ಪ್ರಸಂಗದ ವರ್ಣನೆ ಇದೆ. ಕನ್ಯಾಗುಣಕೀರ್ತನದಿಂದ ಪುಳಕಿತನಾದ ನಂಬಿಯಣ್ಣನ ಚಿತ್ರವೂ ಇಲ್ಲಿ ಕಾಣ ದೊರೆಯುತ್ತದೆ. ಇಲ್ಲಿಯೂ ಹರಿಹರನ ವರ್ಣನ ಶಕ್ತಿಯ ಕೌಶಲವನ್ನು ಕಾಣಬಹುದಾಗಿದೆ.

# ವಚನ ಗದ್ಯ

**ದೇವರ ದಾಸಿಮಯ್ಯ**

ದಾಸಿಮಯ್ಯನು ಕ್ರಿ.ಶ. ೯೮೦—೧೦೪೦ರ ನಡುವೆ ಜೀವಿಸಿದ್ದನೆಂದು ವಿದ್ವಾಂಸರ ಅಭಿಪ್ರಾಯ. ವಚನಕಾರರಲ್ಲಿ ಇವನನ್ನು ಸಾಮಾನ್ಯವಾಗಿ ಮೊದಲಿಗನನ್ನಾಗಿ ಪರಿಗಣಿಸಲಾಗುತ್ತದೆ. ಆದರೆ ಅವನ ವಚನಗಳಲ್ಲಿ ಅವನಿಗಿಂತಲೂ ಹಿಂದೆ ಕೆಲವರಾದರೂ ವಚನಗಳನ್ನು ರಚಿಸಿದ್ದರೆಂಬುದಕ್ಕೆ ಆಧಾರಗಳು ಕಂಡುಬರುತ್ತವೆ. ಬಿಜಾಪುರ ಜಿಲ್ಲೆಯ ಮುದನೂರು ಗ್ರಾಮದಲ್ಲಿ ಜನಿಸಿದ ದಾಸಿಮಯ್ಯನು ಅತ್ಯಂತ ಪ್ರಸಿದ್ಧರಾದ ಶಿವಶರಣರಲ್ಲಿ ಒಬ್ಬನಾಗಿದ್ದಾನೆ. ಭೀಮಕವಿ, ಹರಿಹರ ಮೊದಲಾದವರ ಕೃತಿಗಳಲ್ಲಿ ದಾಸಿಮಯ್ಯನು ಉಲ್ಲೇಖಗೊಂಡಿದ್ದಾನೆ.

**ಸಕಲೇಶ ಮಾದರಸ**

ಇವನ ಕಾಲ ಸುಮಾರು ೧೧೫೦. ಪದ್ಮಣಾಂಕನ 'ಪದ್ಮರಾಜ ಪುರಾಣ' ದಲ್ಲಿಯೂ, ಭೀಮಕವಿಯ 'ಬಸವಪುರಾಣ'ದಲ್ಲಿಯೂ ಸಕಲೇಶ ಮಾದರಸನ ಉಲ್ಲೇಖಗಳಿವೆ. ವಿವರಗಳಲ್ಲಿ ಎರಡಕ್ಕೂ ವ್ಯತ್ಯಾಸಗಳಿವೆ. ಉದಾಹರಣೆಗೆ ಕಲ್ಲುಕುರಿಕೆ ಎಂಬಲ್ಲಿ ಅವನು ರಾಜ್ಯಭಾರ ನಡೆಸುತ್ತಿದ್ದನೆಂದು ಪದ್ಮರಾಜ ಪುರಾಣದಲ್ಲಿ ಹೇಳಿದೆ. ಭೀಮಕವಿಯ ಹೇಳಿಕೆಯಂತೆ ಅವನ ರಾಜಧಾನಿ ಅಂಬೆ ಎಂಬ ಪುರವಾಗಿತ್ತು. ಬಸವಣ್ಣನವರ ನೇತೃತ್ವದಲ್ಲಿ ಕಲ್ಯಾಣದಲ್ಲಿ ನಡೆದ ಧರ್ಮಜಾಗೃತಿ ಸಕಲೇಶ ಮಾದರಸನನ್ನು ಆಕರ್ಷಿಸಿ ಅವನನ್ನು ಅಲ್ಲಿಗೆ ಬರುವಂತೆ, ಶಿವಾನುಭವ ಗೋಷ್ಠಿಗಳಲ್ಲಿ ಭಾಗವಹಿಸುವಂತೆ ಮಾಡಿತು.

**ಅಕ್ಕಮಹಾದೇವಿ**

ತನ್ನ ಆಧ್ಯಾತ್ಮಿಕ ಸಾಹಸದ ವ್ಯಕ್ತಿತ್ವದಿಂದಲೂ, ವಚನಗಳ ಸಾಹಿತ್ಯಿಕ ಸೌಂದರ್ಯದಿಂದಲೂ ಅಕ್ಕಮಹಾದೇವಿ ಪ್ರಖ್ಯಾತಳಾಗಿದ್ದಾಳೆ. ಅವಳ ಜೀವನದಲ್ಲಿ ಇಂದು ಬಿಡಿಸಲಾಗದ ಅನೇಕ ಸಮಸ್ಯೆಗಳು ತುಂಬಿವೆ. ಒಟ್ಟಿನಲ್ಲಿ ಆಕೆ ಸಂಪ್ರದಾಯವನ್ನು ಮುರಿದು, ಆತ್ಮಕಲ್ಯಾಣವನ್ನು ಸಾಧಿಸುವಲ್ಲಿ ಎದುರಾದ ಅಡೆತಡೆಗಳನ್ನೆಲ್ಲ ಯಶಸ್ವಿಯಾಗಿ ದಾಟಿದ ಮಹಿಮಾನ್ವಿತಳು. ಸಾವಿಲ್ಲದ ಕೇಡಿಲ್ಲದ ಚೆಲುವನಿಗೆ ನಾನು ಒಲಿದಿದ್ದೇನೆ; ಸಾಯುವ ಕೆಡುವ ಗಂಡರನ್ನೊಯ್ದು ಒಲೆಯೊಳಗಿಕ್ಕು ಎಂಬ ಸ್ಥಾಯಿಯ ಅವಳ ವಚನಗಳು ಅಧ್ಯಾತ್ಮ ಶೃಂಗಾರದ ಹೊಳಪಿನಿಂದ ಬೆಳಗುತ್ತಿವೆ.

**ಅಲ್ಲಮಪ್ರಭು**

ಅಲ್ಲಮಪ್ರಭು ಅಥವಾ ಪ್ರಭುದೇವನು ಬಳ್ಳಿಗಾವೆಯವನು. ಹನ್ನೆರಡನೆಯ

ಶತಮಾನದ ಮಧ್ಯಭಾಗಕ್ಕೆ ಸೇರಿದವನಾದ ಅವನು ತನ್ನ ಶ್ರೇಷ್ಠ ವ್ಯಕ್ತಿತ್ವದಿಂದಾಗಿ ಸಮಕಾಲೀನರ ಮೇಲೆಲ್ಲ ಗಾಢವಾದ ಪ್ರಭಾವವನ್ನು ಬೀರಿದನು. ಮಹಾಜ್ಞಾನಿ ಯಾದ ಅಲ್ಲಮನು ಯಾವುದನ್ನೂ ನಿಷ್ಠುರ ಪರೀಕ್ಷೆಗೆ ಒಳಪಡಿಸಲು ಹಿಂದೆಗೆಯ ಲಿಲ್ಲ. ಅಷ್ಟಾಗಿ ಸುಲಭಗ್ರಾಹ್ಯವಲ್ಲದ ಅವನ ವಚನಗಳಲ್ಲಿ ಅನುಭಾವ ಜ್ಞಾನಗಳು ತೀವ್ರವಾಗಿ ಬೆರೆತಿವೆ. ಕನ್ನಡ ನಾಡಿನ ಘನ ಮಹಿಮಾವಂತರಲ್ಲಿ ಅಲ್ಲಮನು ಒಬ್ಬ ನಾಗಿದ್ದಾನೆ.

### ಅಂಬಿಗರ ಚೌಡಯ್ಯ

ಹನ್ನೆರಡನೆಯ ಶತಮಾನವಲ್ಲಿ ನಡೆದ ಸಾಮಾಜಿಕ ಕ್ರಾಂತಿಯಲ್ಲಿ ಭಾಗ ವಹಿಸಿದವರು ಕೇವಲ ರಾಜರು, ಮಂತ್ರಿಗಳು, ಪಂಡಿತರಲ್ಲ; ಸಮಾಜದ ಕೆಳಗಿನ ಸ್ತರ ಗಳಿಂದಲೂ ನಾನಾ ಕಾಯಕದ ಜನ 'ಕಾಯಕವೆ ಕೈಲಾಸ' ಎಂಬ ಶ್ರದ್ಧೆಯಿಂದ ಭಾಗಿಗಳಾದರು. ಮೋಳಿಗೆಯ ಮಾರಯ್ಯ, ನುಲಿಯ ಚಂದಯ್ಯ ಇಂಥ ಹೆಸರುಗಳು ಅವರವರ ಕಾಯಕವನ್ನು ಸೂಚಿಸುತ್ತವೆ. ಈ ಜನರು ಅಂದಿನ ಕ್ರಾಂತಿಯಲ್ಲಿ ಪಾಲು ಪಡೆದರು; ಅನುಭವ ಮಂಟಪದಲ್ಲಿ ಭಾಗಿಗಳಾದರು; ವಚನಗಳನ್ನು ರಚಿಸಿ ತಮ್ಮ ಭಾವ ಭಾವನೆಗಳಿಗೆ ಶಬ್ದರೂಪ ಕೊಟ್ಟರು. ಅಂಥವರಲ್ಲಿ ಅಂಬಿಗರ ಚೌಡಯ್ಯನೊಬ್ಬ.

### ಚನ್ನಬಸವಣ್ಣ

ಇವನು ಬಸವಣ್ಣನವರ ಸೋದರ ಅಳಿಯ; ಅವರ ಸೋದರಿ ನಾಗಲಾಂಬೆಯ ಮಗ. ತನ್ನ ಆಧ್ಯಾತ್ಮಿಕ ಘನತೆಯಿಂದಲೂ, ಸಮಕಾಲೀನ ಸಮಾಜದ ಉದ್ಧಾರದ ಉತ್ಸಾಹದಿಂದಲೂ ಅವನು ಎಲ್ಲರ ಗೌರವಾದರಗಳನ್ನು ಗಳಿಸಿಕೊಂಡನು. ಅಲ್ಲಮ ಪ್ರಭುವೇ ಅವನನ್ನು ಮಹಾಜ್ಞಾನಿ ಎಂದು ಹೊಗಳಿದನು. ಈ ಜ್ಞಾನದ ಮುಖ ಚನ್ನಬಸವಣ್ಣನವರ ವಚನಗಳಲ್ಲಿ ಸ್ಪಷ್ಟವಾಗಿದೆ. ಷಟ್‌ಸ್ಥಲ ಸಿದ್ಧಾಂತದ ಸ್ವರೂಪ ವಿವರಣೆಗಳಲ್ಲಿ ಅವನು ಹೆಚ್ಚಾಗಿ ಆಸಕ್ತನಾಗಿದ್ದಂತೆ ಕಂಡುಬರುತ್ತದೆ. ''ಷಡು ಸ್ಥಲದ ಮೂರ್ತಿಯಾಗಿ ಬಂದೆಯಲ್ಲಾ ಚನ್ನಬಸವಣ್ಣಾ" ಎಂದು ಬಸವಣ್ಣನವರು ಕೊಂಡಾಡಿದ್ದಾರೆ. ಇನ್ನೊಬ್ಬರು ಅವನನ್ನು ''ಷಡುಸ್ಥಲ ಬ್ರಹ್ಮ" ಎಂದೂ ಕರೆದಿದ್ದಾರೆ. ಈ ಅಭಿಪ್ರಾಯಗಳು ಚನ್ನಬಸವಣ್ಣ ಷಟ್‌ಸ್ಥಲಸಿದ್ಧಾಂತವನ್ನು ಆ ಕಾಲಕ್ಕೆ ತಕ್ಕಂತೆ ಸಂಸ್ಕರಿಸಿ, ಬದುಕಿನಲ್ಲಿ ಅಳವಡುವಂತೆ ಮಾಡುವುದರಲ್ಲಿ ತೊಡಗಿದ್ದನೆಂಬುದನ್ನು ವ್ಯಕ್ತಗೊಳಿಸುತ್ತವೆ.

### ಬಸವಣ್ಣ

ವಚನ ಸಾಹಿತ್ಯದ ರಚಕರಲ್ಲಿ ಬಸವಣ್ಣನವರು ಅಗ್ರಗಣ್ಯರು. ಭಕ್ತಿಗೆ

ನಾತ್ತೊಂದು ಹೆಸರಾದ ಅವರು ಹನ್ನೆರಡನೆ ಶತಮಾನದ ಎಲ್ಲ ಬಗೆಯ ಕ್ರಾಂತಿ ಕಾರಕ ಚಟುವಟಿಕೆಗಳಿಗೂ ಕೇಂದ್ರಬಿಂದುವಾದರು. ಬಾಗೇವಾಡಿಯ ಶೈವ ಬ್ರಾಹ್ಮಣ ದಂಪತಿಗಳ ಮಗನಾಗಿ ಜನಿಸಿದ ಬಸವಣ್ಣ ವೈದಿಕ ಧರ್ಮದಲ್ಲಿ ಜುಗುಪ್ಸೆ ಗೊಂಡು, ಕಪ್ಪಡಿಯ ಸಂಗಮಕ್ಕೆ ಬಂದರು. ಶಿವನ ಆಜ್ಞೆಯಂತೆ ಮಂಗಳವಾಡಕ್ಕೆ ಹೋದರು; ಬಿಜ್ಜಳನ ಮಂತ್ರಿಯಾದರು. ತಾವು ತುಳಿದ ಹೊಸ ಮಾರ್ಗದ ಸಂಘಟನೆಗಾಗಿ ಅವರು ತಮ್ಮ ಬದುಕನ್ನೇ ಮುಡಿಪಾಗಿಟ್ಟರು. ಸರ್ವಸಮಾನತೆ ಯನ್ನೂ, ಕಾಯಕದ ಮಹತ್ವವನ್ನೂ ಅವರು ಘೋಷಿಸಿದರು. ಸಾಮಾಜಿಕ, ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ಮಾತ್ರವಲ್ಲದೆ ಸಾಹಿತ್ಯ ಕ್ಷೇತ್ರದಲ್ಲಿಯೂ ಅವರು ಹೊಸ ದಿಗಂತವನ್ನು ತೆರೆದರು. ಸಾಮಾನ್ಯವಾದ ಮಾತುಗಳಿಗೂ ಅವರು ಅನುಭಾವದ ಭಾರವನ್ನು ಹೇರಿದರು. ಬಸವಣ್ಣನವರಂಥವರಿಂದ ಕನ್ನಡದ ಮಾತುಗಳಿಗೆ ಉಪನಿಷತ್ತುಗಳ ಹಿರಿಮೆ ಪ್ರಾಪ್ತವಾಯಿತು. ಅವರ ವಚನಗಳಲ್ಲಿ ಬಹಿರಂಗದ ಡಾಂಭಿಕತನದ ಟೀಕೆಯೂ, ಅಂತರಂಗದ ತಳಮಳದ ತಿಕ್ಕಾಟವೂ ಸರಿಸಮನಾಗಿ ಬೆರೆತಿವೆ. ಅವರ ಅನೇಕ ವಚನಗಳು ಸಾಧಕನ ಆಧ್ಯಾತ್ಮಿಕ ಹೋರಾಟದ ಪ್ರತೀಕಗಳಾಗಿವೆ.

ಮಡಿವಾಳ ಮಾಚಯ್ಯ

ಬಸವಣ್ಣನವರ ಸಮಕಾಲೀನನಾದ ಮಡಿವಾಳ ಮಾಚಯ್ಯ ಅಥವಾ ಮಾಚಿದೇವ ಬಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿಗೆ ಸೇರಿದವನು. ಅವನ ಹುಟ್ಟೂರಿನಲ್ಲಿ ಕಲ್ಲಿನಾಥನ ಒಂದು ದೇವಾಲಯವಿದೆ. ಅದು ತುಂಬ ಪುರಾತನ ವಾದುದು. ಮಾಚಿದೇವನ ಅಂಕಿತ ಕಲಿದೇವರ ದೇವಾ ಎಂಬುದು ಈ ಕಲ್ಲಿನಾಥ ನನ್ನು ಉದ್ದೇಶಿಸಿದ್ದು ಎಂದು ವಿದ್ವಾಂಸರ ಅಭಿಪ್ರಾಯ. ಮಾಚಿದೇವನು ಈ ಕಲ್ಲಿನಾಥ ಲಿಂಗದಲ್ಲಿಯೇ ಐಕ್ಯನಾದನೆಂದು ಸ್ಥಳೀಯ ಐತಿಹ್ಯ. ಅನೇಕ ಗ್ರಂಥ ಗಳಲ್ಲಿ ಅವನನ್ನು ಕುರಿತ ಉಲ್ಲೇಖಗಳಿವೆ. ಬಸವಣ್ಣನವರು ಕಲ್ಯಾಣವನ್ನು ತ್ಯಜಿಸಿ ಕಪ್ಪಡಿಯ ಸಂಗಮನಾಥನಲ್ಲಿಗೆ ಹೋಗುವಾಗ ತನ್ನ ಸ್ಥಾನದಲ್ಲಿ ಚನ್ನ ಬಸವೇಶ್ವರನನ್ನು ನೇಮಿಸಿದನೆಂದೂ, ಆದರೆ ಅವನು ಇನ್ನೂ ಚಿಕ್ಕವನಿದ್ದಕಾರಣ ಅವನಿಗೆ ಮಾಚಿದೇವನನ್ನು ಸಲಹೆಗಾರನನ್ನಾಗಿ ನೇಮಿಸಿದನೆಂದೂ ಒಂದು ಹೇಳಿಕೆ ಯಿದೆ.

ಉರಿಲಿಂಗದೇವ

ಬಸವ ಯುಗದ ವಚನಕಾರರಲ್ಲಿ ಉರಿಲಿಂಗದೇವನಿಗೆ ಒಂದು ವಿಶಿಷ್ಟ ಸ್ಥಾನವಿದೆ. ಅಕ್ಕಮಹಾದೇವಿಯ ವಚನಗಳನ್ನು ಬಿಟ್ಟರೆ ಸತಿ-ಪತಿ ಭಾವ ಉತ್ತಮ ವಾಗಿ ಅಭಿವ್ಯಕ್ತಗೊಂಡಿರುವುದು ಈತನ ವಚನಗಳಲ್ಲಿಯೆ ಎನ್ನಬಹುದು.

### ಆದಯ್ಯ

ಆದಯ್ಯನು ಶಿವಶರಣರಲ್ಲಿ ಒಬ್ಬನು. ಅವನು ಸೌರಾಷ್ಟ್ರ ಸೋಮನಾಥನನ್ನು ಪುಲಿಗೆರೆಗೆ ತಂದು ಅಲ್ಲಿ ಆ ಲಿಂಗವನ್ನು ಪ್ರತಿಷ್ಠಾಪಿಸಿ, ಪವಾಡಗಳನ್ನು ಮೆರೆದು, ವೀರಶೈವ ಧರ್ಮಪ್ರಸಾರವನ್ನು ಕೈಗೊಂಡ ಸಂಗತಿ ಪ್ರಸಿದ್ಧವಾಗಿದೆ. ಆದಯ್ಯನ ಕಥೆಯನ್ನು ರಾಘವಾಂಕನು ತನ್ನ 'ಸೋಮನಾಥಚರಿತೆ'ಯಲ್ಲಿ ವಿಸ್ತಾರವಾಗಿ ನಿರೂಪಿಸಿದ್ದಾನೆ; ಹರಿಹರನು ತನ್ನೊಂದು ರಗಳೆಯಲ್ಲಿಯೂ ಆದಯ್ಯನ ಕಥೆ ಹೇಳಿದ್ದಾನೆ.

### ತೋಂಟದ ಸಿದ್ಧಲಿಂಗ

ಹನ್ನೆರಡನೆ ಶತಮಾನದ ಮಧ್ಯಭಾಗದಲ್ಲಿ ಆರಂಭವಾದ ಧಾರ್ಮಿಕ ಕ್ರಾಂತಿ, ಅದೇ ಭರದಿಂದ ಮುಂದುವರೆಯಲಿಲ್ಲವಾದರೂ ವೀರಶೈವ ಧರ್ಮದ ಪುನರುಜ್ಜೀವನಕ್ಕಾಗಿ ಶ್ರಮಿಸಿದ ಶರಣರು ಅನೇಕರು ಆಗಿ ಹೋದರು. ವಚನಕಾರರ ಸಂಖ್ಯೆ ಮಾತ್ರ ಕ್ಷೀಣಿಸುತ್ತಾ ಹೋಯಿತು. ಬರೆದ ಕೆಲವರಾದರೂ ಹಿಂದಿನವರ ಗಾಢವಾದ ಪ್ರಭಾವದಿಂದ ತಪ್ಪಿಸಿಕೊಳ್ಳಲಾರದೆ ಹೋದರು. ಆದರೆ ವಿಶೇಷ ಉಲ್ಲೇಖಕ್ಕೆ ಅರ್ಹರಾದವರಲ್ಲಿ ಸುಮಾರು ೧೪೭೦ರ ತೋಂಟದ ಸಿದ್ಧಲಿಂಗ ಮುಖ್ಯನಾಗಿದ್ದಾನೆ. ನಾಗಣೀ ನದಿಯ ದಡದ ತೋಟದಲ್ಲಿ ಅವನು ಶಿವಯೋಗಮಗ್ನನಾಗಿ ಆ ಹೆಸರು ಪಡೆದಿದ್ದಾನೆ. ಎಡೆಯೂರಿನಲ್ಲಿ ಅವನು ಸಮಾಧಿ ಹೊಂದಿದನು. ಎಡೆಯೂರು ಅಂದಿನ ದಿನಗಳಲ್ಲಿ ಪ್ರಸಿದ್ಧವಾದ ವೀರಶೈವ ಕೇಂದ್ರವಾಗುವಷ್ಟುಮಟ್ಟಿಗೆ ಅವನು ಪ್ರಭಾವಶಾಲಿಯಾಗಿದ್ದನು. ಇವನನ್ನು ಕುರಿತು ಅನೇಕ ಚರಿತ್ರ ಗ್ರಂಥಗಳು ರಚಿತವಾಗಿವೆ.

### ಷಣ್ಮುಖಸ್ವಾಮಿ

ಷಣ್ಮುಖಸ್ವಾಮಿ ರಚಿಸಿರುವ ವಚನಗಳು 'ಅಖಂಡೇಶ್ವರ ವಚನ'ಗಳೆಂದು ಪ್ರಸಿದ್ಧವಾಗಿವೆ. ಕವಿಚರಿತಕಾರರ ಅಭಿಪ್ರಾಯದಲ್ಲಿ ಇವನ ಕಾಲ ಸುಮಾರು ೧೭೦೦. ಗುಲಬರ್ಗ ಜಿಲ್ಲೆಯ ಜೇವರಗಿ ಎಂಬಲ್ಲಿ ಷಣ್ಮುಖಸ್ವಾಮಿಯ ಮಠ ಇದೆಯೆಂದು ಹೇಳಲಾಗಿದೆ. ಸದ್ಯಕ್ಕೆ ಷಣ್ಮುಖಸ್ವಾಮಿಯ ಜೀವನದ ಹೆಚ್ಚಿನ ವಿಷಯಗಳೇನೂ ತಿಳಿದಿಲ್ಲ.

### ಮುಕ್ತಾಯಕ್ಕ–ಅಲ್ಲಮಪ್ರಭು

ವಚನ ಸಾಹಿತ್ಯದಲ್ಲಿ ಸಂಕಲನ ಗ್ರಂಥಗಳಿಗೇ ಒಂದು ವಿಶಿಷ್ಟವಾದ ಸ್ಥಾನವಿದೆ. ಅವುಗಳಲ್ಲಿ 'ಲಿಂಗಲೀಲಾವಿಲಾಸ ಚಾರಿತ್ರ', 'ಆಚರಣೆಯ ವಚನಗಳು', ಗಣಭಾಷಿತ ರತ್ನಮಾಲೆ' ಮೊದಲಾದುವನ್ನು ಹೆಸರಿಸಬಹುದು. ಈ ಬಗೆಯ ಗ್ರಂಥ

ಗಳಲ್ಲಿ ಸಂಕಲನಕಾರರು ಮೂಲವಚನಗಳನ್ನು ಬಗೆ ಬಗೆಯಾಗಿ ಜೋಡಿಸಿರುತ್ತಾರೆ ಈ ಜೋಡಣೆಯು ಕೆಲವು ಸಲ ಸಂವಾದರೂಪದಲ್ಲಿರಬಹುದು; ಇನ್ನೊಮ್ಮೆ ಸ್ಥಲ ಗಳಿಗನುಗುಣವಾಗಿರಬಹುದು. ಹೀಗೆ ಮಾಡುವಾಗ ಮೂಲವಚನಗಳು ಅಲ್ಪಸ್ವಲ್ಪ ರೂಪು ಬದಲಾಯಿಸಬಹುದು. ಆದರೆ ಮೂಲ ಆಶಯಕ್ಕೆ ಧಕ್ಕೆಯೇನೂ ಬರುವು ದಿಲ್ಲ. ಸಂಕಲನಕಾರರು ತಾವು ಹೇಳಬಯಸಿದ್ದನ್ನು ವಚನ ವಚನಗಳ ನಡುವಿನ ಟೀಕೆಯರೂಪದ ತಮ್ಮ ಗದ್ಯದ ಕೊಂಡಿಗಳಲ್ಲಿ ವ್ಯಕ್ತಪಡಿಸುತ್ತಾರೆ. ''ಶೂನ್ಯ ಸಂಪಾದನೆ'' ಎಂಬ ಗ್ರಂಥವು ಈ ವರ್ಗಕ್ಕೆ ಸೇರಿರುವ ಒಂದು ಅಪೂರ್ವ ಗ್ರಂಥ ವಾಗಿದೆ. ಈ ಹೆಸರಿನ ಸಂಕಲನಗಳು ನಾಲ್ಕು ಈಗ ಉಪಲಬ್ಧವಿವೆ; ಐದನೆಯ ದೊಂದನ್ನೂ ಊಹಿಸಲು ಆಧಾರಗಳಿವೆ. ಇವುಗಳಲ್ಲೆಲ್ಲ ೧೫ನೆಯ ಶತಮಾನದ ಕೊನೆಯ ಭಾಗದಲ್ಲಿದ್ದ ಗೂಳೂರು ಸಿದ್ಧವೀರಣಾಚಾರ್ಯನ 'ಶೂನ್ಯಸಂಪಾದನೆ' ಮಹತ್ವದ್ದಾಗಿದ್ದು, ಅದು ನಮ್ಮ ಸಾಹಿತ್ಯದ ಶ್ರೇಷ್ಠ ಸಂಕಲನ ಗ್ರಂಥಗಳಲ್ಲಿ ಒಂದಾ ಗಿದೆ. ''ಇವನ ಸಂಪಾದನೆಯಲ್ಲಿ ನಾವೀನ್ಯವಿದೆ, ಸ್ವತಂತ್ರ ನಿರ್ಮಾಣವಿದೆ'' ಎಂದೂ ಹೇಳಲಾಗಿದೆ.

## ಗದ್ಯ ಗ್ರಂಥಗಳ ಗದ್ಯ

### ಶಿವಕೋಟ್ಯಾಚಾರ್ಯ

ವಡ್ಡಾರಾಧನೆಯ ಕರ್ತೃ ಶಿವಕೋಟ್ಯಾಚಾರ್ಯ. ಇವನು ಇದ್ದುದು ಹತ್ತನೆಯ ಶತಮಾನದಲ್ಲಿ. ಕನ್ನಡ ಗದ್ಯಲೇಖಕರಲ್ಲಿ ಅಗ್ರಮಾನ್ಯನಾದ ಈ ಕವಿ ವಡ್ಡಾರಾಧನೆಯನ್ನು ಕ್ರಿ.ಶ. ೯೨೦ರ ಸುಮಾರಿನಲ್ಲಿ ರಚಿಸಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಹತ್ತೊಂಬತ್ತು ಕತೆಗಳ ಗೊಂಚಲು ವಡ್ಡಾರಾಧನೆ. ವಡ್ಡ ಎಂದರೆ ದೊಡ್ಡದು ಎಂದು ಅರ್ಥ. ದೊಡ್ಡವರ ಆರಾಧನೆ, ಪೂಜೆ ಎಂಬುದು ತಾತ್ಪರ್ಯ. ಜೈನರಲ್ಲಿ ತಪಸ್ಸಿಗೆ ಒದಗುವ ಇಪ್ಪತ್ತೆರಡು ಬಗೆಯ ಅಡ್ಡಗಳನ್ನೂ ನಾಲ್ಕು ಬಗೆಯ ಉಪ ಸರ್ಗಗಳನ್ನೂ ಗೆದ್ದು ಕಠಿಣವಾದ ಸಾಧನೆಯಿಂದ ಕರ್ಮಕ್ಷಯಮಾಡಿಕೊಂಡು ಮೋಕ್ಷವನ್ನು ಗಳಿಸಿದ ಹತ್ತೊಂಬತ್ತು ಮಂದಿ ಕೇವಲಿಗಳೇ ಇಲ್ಲಿ ಆ ಹಿರಿಯರು. ಅವರಲ್ಲಿ ಒಬ್ಬರು ವಿದ್ಯುಚ್ಚೋರ ರಿಸಿಗಳು. ಇಲ್ಲಿ ಆರಿಸಿರುವ ಭಾಗ ಅವರನ್ನು ಕುರಿತದ್ದು.

ಮಧುರವಾದ ಕನ್ನಡ-ಸಂಸ್ಕೃತ ಮಿಶ್ರಣದಿಂದ, ರಸವತ್ತಾದ ಶೈಲಿಯಿಂದ ವಡ್ಡಾರಾಧನೆಯ ಗದ್ಯ ಅಪೂರ್ವವಾಗಿ ನಿಲುತ್ತದೆ. ಸಂಭಾಷಣೆಗಳ ಸೌಂದರ್ಯ, ಕತೆಯ ನಿರೂಪಣೆಯ ಸೊಗಸು ಇವು ಈ ಕೃತಿಗೆ ಮೆರುಗನ್ನು ತಂದಿದೆ. ಇಲ್ಲಿ ಅಲ್ಲಲ್ಲಿ ಬರುವ ಪೂರ್ವದ ಹಳಗನ್ನಡದ ಪ್ರಯೋಗಗಳು ಭಾಷೆಯ ದೃಷ್ಟಿಯಿಂದ ಗಮನೀಯವಾಗಿವೆ.

ಚಾವುಂಡರಾಯ

''ಚಾವುಂಡರಾಯ ಪುರಾಣ'' ಅಥವಾ ''ತ್ರಿಷಷ್ಟಿ ಶಲಾಕಾ ಲಕ್ಷಣ ಮಹಾ ಪುರಾಣ'' ಎಂಬ ಗದ್ಯ ಕೃತಿಯನ್ನು ರಚಿಸಿದವನು ಹತ್ತನೆಯ ಶತಮಾನದಲ್ಲಿದ್ದ ಚಾವುಂಡರಾಯ. ಆತ ಅಜಿತಸೇನಾಚಾರ್ಯರ ಶಿಷ್ಯನೂ ಗಂಗರಾಜ ರಾಚಮಲ್ಲನ ಸೇನಾಧಿಪತಿಯೂ ಆಗಿದ್ದನು. ಕ್ರಿ.ಶ. ೯೭೮ರಲ್ಲಿ ಚಾವುಂಡರಾಯ ಪುರಾಣದ ರಚನೆಯಾದಂತೆ ತಿಳಿದು ಬರುತ್ತದೆ.

ಚಾವುಂಡರಾಯನ ಕೀರ್ತಿಯನ್ನು ಆಚಂದ್ರಾರ್ಕಮಾಡಿರುವ ಶಿಲ್ಪಕಲಾ ಮಹಾಕಾವ್ಯವೊಂದುಂಟು. ಅದು ಶ್ರವಣಬೆಳ್ಗೊಳದ ಗೊಮ್ಮಟೇಶ್ವರ ಮಹಾಮೂರ್ತಿ. ಕನ್ನಡ ನಾಡಿನ ಕೀರ್ತಿ ಶಿಖರಗಳಲ್ಲೊಂದಾದ ಆ ಭವ್ಯಮೂರ್ತಿಯನ್ನು ಕೆತ್ತಿಸಿದವನು ಚಾವುಂಡರಾಯನೇ.

ಸಂಸ್ಕೃತದಲ್ಲ ಜಿನಸೇನಾಚಾರ್ಯರೂ ಗುಣಭದ್ರಾಚಾರ್ಯರೂ ರಚಿಸಿದ ಪೂರ್ವಪುರಾಣ ಉತ್ತರಪುರಾಣಗಳನ್ನು ಆಧಾರವಾಗಿಟ್ಟುಕೊಂಡು ಚಾವುಂಡರಾಯ ತನ್ನ ಕೃತಿಯನ್ನು ರಚಿಸಿದ್ದಾನೆ. ಜೈನಧರ್ಮದಲ್ಲಿ ಪ್ರಸಿದ್ಧರಾದ ಅರವತ್ತು ಮೂವರು ಮಹಾಪುರುಷರ ಕಥೆಗಳು ಈ ಕೃತಿಯ ವಸ್ತು. ಸಂಸ್ಕೃತ ಪದಗಳೂ, ಸಮಾಸಗಳೂ, ಜೈನಧರ್ಮದ ಪಾರಿಭಾಷಿಕ ಶಬ್ದಗಳೂ ಹೇರಳವಾಗಿ ಮಿಶ್ರಿತವಾಗಿರುವ ಗದ್ಯಶೈಲಿ ಇವನದು.

ಪ್ರಥಮ ತೀರ್ಥಂಕರನಾದ ವೃಷಭದೇವನ ಪೂರ್ವ ಜನ್ಮಗಳಲ್ಲಿ ಒಂದರ ವೃತ್ತಾಂತವನ್ನು ಇಲ್ಲಿ ಆರಿಸಿದೆ. ವಜ್ರಜಂಘ-ಶ್ರೀಮತಿಯರ ಆತ್ಯಂತಿಕ ಪ್ರೇಮ ಮತ್ತು ಅದು ಕರೆದೊಯ್ದ ದುರಂತ ಮರಣದ ಹೃದಯ ವಿದ್ರಾವಕ ಸಂಗತಿ ಇದರ ವಸ್ತು.

ತಿರುಮಲಾರ್ಯ

೧೬೪೫ ರಿಂದ ೧೭೦೬ರ ವರೆಗೆ ಜೀವಿಸಿದ್ದ ತಿರುಮಲಾರ್ಯ ಚಿಕದೇವರಾಜನ ಆಸ್ಥಾನದಲ್ಲಿದ್ದ ಅಗ್ರಮಾನ್ಯ ಕವಿ. ಸಂಸ್ಕೃತ ಮತ್ತು ಕನ್ನಡ ಭಾಷೆಗಳೆರಡರಲ್ಲಿಯೂ ಪ್ರಕಾಂಡ ಪಂಡಿತನಾಗಿದ್ದ ಈತನು ಎರಡು ಭಾಷೆಗಳಲ್ಲಿಯೂ ಗ್ರಂಥಗಳನ್ನು ರಚಿಸಿದ್ದಾನೆ. 'ಚಿಕದೇವರಾಯ್ಯ ವಿಜಯ', 'ಚಿಕದೇವರಾಯ ವಂಶಾವಳಿ' ಇವು ಈತನ ಪ್ರಸಿದ್ಧ ಗ್ರಂಥಗಳು 'ಅಪ್ರತಿಮವೀರ ಚರಿತೆ' ಅವನ ಹೆಸರಾಂತ ಅಲಂಕಾರ ಗ್ರಂಥ. 'ಚಿಕ್ಕದೇವರಾಯ ಬಿನ್ನಪ' ಮತ್ತು 'ಗೀತಗೋಪಾಲ' ಗ್ರಂಥಗಳು ಚಿಕದೇವರಾಜನ ಹೆಸರಿನಲ್ಲಿದ್ದರೂ ತಿರುಮಲಾರ್ಯನೇ ಅವುಗಳನ್ನು ಬರೆದಿರಬೇಕೆಂದು ಭಾವಿಸಲು ಸಾಕಷ್ಟು ಆಧಾರಗಳಿವೆ. ''ಎನಿತಂದವಾಗಿ ಮೆಲ್ಲಪುವಡೆದ ಸಬುದಂಗಳ ಸೇರುವೆಯಿಂ ಸರಳಮುಂ ಕರ ಮೆಸೆವ ಪುರುಳಪವಣಿಗೆಯುಂ ಸರಸಮುಮೆನಿಸಿ ತನಿಸೊದೆಯ ಸೋನೆಯಂತೆ

ಇನಿದಂ ಕಿವಿಗಳ್ಗೆ ಕರೆಗುಮಿಾ ತಿರುಮಲಾರ್ಯರ ಬಾಯ್ದೆಱೆಯ ಸರಸತಿಯ ಸ್ವೈಪು ವಡೆದ ಸಾಹಿತ್ಯ ಸೌಂದರ್ಯಂ" ಎಂದು ಸಿಂಗರಾರ್ಯನು ತಿರುಮಲಾರ್ಯನನ್ನು ಸ್ತುತಿಸಿದ್ದಾನೆ. ಈತನ ಗದ್ಯ ಶೈಲಿಯ ಬಗ್ಗೆ ರಂ. ಶ್ರೀ. ಮುಗಳಿಯವರು ಹೀಗೆಂದಿದ್ದಾರೆ. "ತಿರುಮಲಾರ್ಯನ ಶೈಲಿಯೇ ಅವನ ಜೀವಾಳ, ರೀತಿಯೇ ಅವನ ಕಾವ್ಯಕ್ಕೆ ಆತ್ಮ. ಸಂಸ್ಕೃತ ಹಾಗೂ ಕನ್ನಡ ಕಾವ್ಯ ಶೈಲಿಗಳ ಒಳದಿರುಳನ್ನು ಹೀರಿ ಪುಷ್ಟವಾಗಿಯೂ ಹೊಸ ನಡೆಯ ಬೆಡಗುಳ್ಳುದು ಅವನ ಗದ್ಯ. ಯಾವ ತಡೆಯೂ ಇಲ್ಲದೆ ತಿಳಿಯಾಗಿ ಅಚ್ಚುಕಟ್ಟಾಗಿ ತುಂಬಿತುಂಬಿ ಹರಿಯುವುದೇ ಅದರ ಲಕ್ಷಣ."

ಈತನ 'ಚಿಕ್ಕದೇವರಾಯ ವಂಶಾವಳಿ' ಎಂಬ ಗ್ರಂಥದಿಂದ ಪಠ್ಯ ಭಾಗವನ್ನು ಆಯ್ದುಕೊಳ್ಳಲಾಗಿದೆ. ಮೈಸೂರಿನ ಮೇಲೆ ದಾಳಿ ಮಾಡಿದ ತಿರುಮಲಾರ್ಯನ ವಿಫಲ ಸಾಹಸ ಮತ್ತು ಮೈಸೂರಿನ ರಾಜರಾಗಿದ್ದ ಬೆಟ್ಟದ ಚಾಮರಾಜರ ಶೌರ್ಯ ಸಾಹಸಗಳ ವರ್ಣನೆ ಇಲ್ಲಿಯ ವಸ್ತುವಾಗಿದೆ.

### ಚಿಕುಪಾಧ್ಯಾಯ

'ದಿವ್ಯಸೂರಿ ಚರಿತ್ರೆ' ಮುಂತಾದ ಮುವ್ವತ್ತಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿರುವ ಚಿಕುಪಾಧ್ಯಾಯ ಚಿಕ್ಕದೇವರಾಜನ ಆಸ್ಥಾನದಲ್ಲಿದ್ದ ಕವಿಗಳಲ್ಲಿ ಅತ್ಯಂತ ಹೆಸರುವಾಸಿಯಾದವನು. ಈತನ ಕಾಲ ಸು. ೧೭೦೦. ಈತನು ಕವಿಯಾಗಿದ್ದುದು ಮಾತ್ರವಲ್ಲದೆ ಚಿಕ್ಕದೇವರಾಜನ ಮಂತ್ರಿಯೂ ಆಗಿದ್ದನು. ಈತನ ಗ್ರಂಥಗಳಲ್ಲಿ ಬಹುಪಾಲು ಮಾಹಾತ್ಮ್ಯ ಗ್ರಂಥಗಳು. ಇವುಗಳಲ್ಲಿ ಕೆಲವು ಸುಂದರ ಗದ್ಯದಲ್ಲಿವೆ. ಅವನ ಶೈಲಿ ಬಾಣದಂಡಿ ಮೊದಲಾದವರನ್ನು ನೆನಪಿಗೆ ತರುತ್ತದೆ. 'ರುಕ್ಮಾಂಗದ ಚರಿತೆ', 'ದಿವ್ಯಸೂರಿ ಚರಿತೆ', 'ವಿಷ್ಣುಪುರಾಣ' ಇವನ ಇತರ ಪ್ರಸಿದ್ಧ ಕೃತಿಗಳು. ಭಾಷಾಂತರ ರೂಪದಲ್ಲಿಯೂ ಈತನು ಕನ್ನಡಕ್ಕೆ ಸೇವೆಯನ್ನು ಸಲ್ಲಿಸಿದ್ದಾನೆ. ಸಾಂಗತ್ಯದಲ್ಲಿಯೂ ಹಲವು ಗ್ರಂಥಗಳನ್ನು ರಚಿಸಿದ್ದಾನೆ. ಈತನ ಕೃತಿಗಳ ಸಂಖ್ಯೆ ಆಶ್ಚರ್ಯವನ್ನುಂಟುಮಾಡುತ್ತದೆ. "ಇವನ ಚಂಪೂ ಕೃತಿಗಳಲ್ಲಿ ಪ್ರೌಢ ಮತ್ತು ಸಂಸ್ಕೃತ ಪ್ರಚುರವಾದ ಶೈಲಿಯಿದ್ದರೆ ಸಾಂಗತ್ಯ ಕೃತಿಗಳಲ್ಲಿ ತಿಳಿಗನ್ನಡವಿದೆ. ಇವನ ಪಾಂಡಿತ್ಯ ಮತ್ತು ಕವಿತಾರಚನೆಯ ಶಕ್ತಿ ನಿರ್ವಿವಾದವಾದರೂ ಕವಿತ್ವದ ಮಟ್ಟ ಉನ್ನತವಾದುದಲ್ಲ." ಎಂದು ರಂ. ಶ್ರೀ. ಮುಗಳಿಯವರು ಅಭಿಪ್ರಾಯಪಟ್ಟಿದ್ದಾರೆ.

ಚಿಕುಪಾಧ್ಯಾಯನ 'ವಿಷ್ಣುಪುರಾಣ'ದ ಪಂಚಮಾಂಶದ ಮೂವತ್ತೆಂಟನೆಯ ಅಧ್ಯಾಯವನ್ನು ಮೊದಲನೆಯ ಪಠ್ಯಭಾಗವಾಗಿ ಆಯ್ದುಕೊಳ್ಳಲಾಗಿದೆ. ಶ್ರೀ ಕೃಷ್ಣನ ನಿಧನಾನಂತರ ಗತಶೌರ್ಯನಾಗಿ ಉಳಿದ ಅರ್ಜುನನಿಗೆ ಗರ್ವಭಂಗವಾದುದು, ಅನಂತರ ವ್ಯಾಸರ ಉಪದೇಶದಂತೆ ಪಾಂಡವ ಸೋದರರು ತಪೋನಿರತರಾದುದು—ಇವುಗಳ ವರ್ಣನೆ ಮೊದಲನೆಯ ಭಾಗದಲ್ಲಿ ಕಾಣದೊರೆಯುತ್ತದೆ.

ಎರಡನೆಯ ಪಠ್ಯಭಾಗವನ್ನು ಈತನ 'ವೆಂಕಟಗಿರಿ ಮಾಹಾತ್ಮ್ಯ' ಎಂಬ ಹಸ್ತಪ್ರತಿಯಿಂದ ಆಯ್ದುಕೊಂಡಿದೆ. ಆದಿಶೇಷನ ಗರ್ವಭಂಗ ಇದರ ವಸ್ತುವಾಗಿದೆ.

### ದೇವಚಂದ್ರ

ಹದಿನೆಂಟನೆಯ ಶತಮಾನದ ಕೊನೆಯಭಾಗ ಮತ್ತು ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಮೈಸೂರು ದೊರೆಗಳ ಆಶ್ರಯದಲ್ಲಿದ್ದ ದೇವಚಂದ್ರ ಎರಡು ಕೃತಿಗಳನ್ನು ರಚಿಸಿದ್ದಾನೆ. ''ರಾಮ ಕಥಾವತಾರ" ಚಂಪೂ ಗ್ರಂಥ. ಆದರೆ ಅವನಿಗೆ ಪ್ರಸಿದ್ಧಿಯನ್ನು ತಂದಿರುವುದು ''ರಾಜಾವಳೀ ಕಥೆ". ಇಲ್ಲಿ ಕವಿ ಗದ್ಯದಲ್ಲಿ ನಿರೂಪಿಸಿರುವುದು ಕೆಲವು ಜೈನ ಕವಿಗಳ ಬಗೆಗೆ ಪ್ರಚಲಿತವಾಗಿರುವ ಕತೆಗಳನ್ನು ಮತ್ತು ಅನೇಕ ರಾಜರ ಶೌರ್ಯ ಸಾಹಸ ದಿಗ್ವಿಜಯಗಳನ್ನು ಕುರಿತ ಸಂಗತಿಗಳನ್ನು ಕಲ್ಪನೆ ಸತ್ಯಗಳೆರಡೂ ಇವನ ಕೃತಿಯಲ್ಲಿ ಬೆರೆತುಹೋಗಿವೆ. ''ಬಿರುದೆಂತೆಂಬರ ಗಂಡ" ಎಂಬ ಪ್ರಶಸ್ತಿಯನ್ನು ತಳೆದ ರಾಜ ಒಡೆಯರು ಮತ್ತು ವಿಜಯನಗರದ ದೊರೆ ತಿರುಮಲರಾಯ ಇವರ ವಿರಸದ ಪ್ರಸ್ತಾಪ ಇಲ್ಲಿ ಆರಿಸಿರುವ ಕಥಾಭಾಗದಲ್ಲಿ ಚಿತ್ರಿತವಾಗಿದೆ.

### ಮುಮ್ಮಡಿ ಕೃಷ್ಣರಾಜ

೧೭೯೪ರಿಂದ ೧೮೬೮ರವರೆಗೆ ಜೀವಿಸಿದ್ದ ಮುಮ್ಮಡಿ ಕೃಷ್ಣರಾಜ ಮೈಸೂರಿನ ದೊರೆಯಾಗಿದ್ದುದಲ್ಲದೆ ಅಂದಿನ ಸಾಹಿತ್ಯಿಕ ಚಟುವಟಿಕೆಗಳ ಕೇಂದ್ರವೂ ಆಗಿದ್ದನು. ಅವನು ಕೊಟ್ಟ ವಿಶೇಷ ಪ್ರೋತ್ಸಾಹ ಕನ್ನಡ ಸಾಹಿತ್ಯದ ಬಹುಮುಖವಾದ ಏಳಿಗೆಗೆ ಕಾರಣವಾಯಿತು. ನಳೋಪಾಖ್ಯಾನ, ಬತ್ತೀಸ ಫುತ್ಥಳೀ ಕಥೆ, ಸೌಗಂಧಿಕಾ ಪರಿಣಯ , ಭಾರತ, ಅಖಂಡ ಕಾವೇರಿ ಮಾಹಾತ್ಮ್ಯ ಮುಂತಾದ ಐವತ್ತು ಗ್ರಂಥ ಗಳನ್ನು ಬರೆದಿದ್ದಾನೆಂದು ಹೇಳಲಾಗಿದೆ. ಇವುಗಳಲ್ಲಿ ಬಹುಪಾಲು ಗ್ರಂಥಗಳು ಗದ್ಯದಲ್ಲಿವೆ. ಕಾಳಿದಾಸನ ಶಾಕುಂತಲ, ಮಾಳವಿಕಾಗ್ನಿ ಮಿತ್ರ ಮತ್ತು ವಿಕ್ರ ಮೋರ್ವಶೀಯ, ಅಂತೆಯೇ ಶ್ರೀಹರ್ಷನ ರತ್ನಾವಳೀ ನಾಟಕದ ಕಥೆಯನ್ನೂ ಗದ್ಯ ರೂಪದಲ್ಲಿ ಬರೆದಿದ್ದಾನೆ. ಉತ್ತರರಾಮಚರಿತೆಯ ಕಥೆಯನ್ನೂ ಗದ್ಯರೂಪದಲ್ಲಿ ನೀಡಿದ್ದಾನೆ. ಪೌರಾಣಿಕ ಗ್ರಂಥಗಳ ಟೀಕುಗಳನ್ನೂ, ಮಾಹಾತ್ಮ್ಯ ಗ್ರಂಥ ಗಳನ್ನೂ ರಚಿಸಿದ್ದಾನೆ. ಕನ್ನಡ ಗದ್ಯಶೈಲಿಯ ವಿಕಾಸಕ್ಕೆ ಮುಮ್ಮಡಿ ಕೃಷ್ಣರಾಜನು ಮಹತ್ವಪೂರ್ಣವಾದ ಕಾಣಿಕೆಯನ್ನು ನೀಡಿದ್ದಾನೆ.

ಪಠ್ಯಭಾಗವನ್ನು 'ಶ್ರೀ ಕೃಷ್ಣರಾಜ ವಾಣೀ ವಿಲಾಸವೆಂಬ ಮಹಾ ಭಾರತದ ಕನ್ನಡ ಟೀಕು' ಎಂಬ ಗ್ರಂಥದಿಂದ ಆಯ್ದುಕೊಳ್ಳಲಾಗಿದೆ. ಕೊಳದೊಳಗೆ ಮುಳು ಗಿದ್ದ ದುರ್ಯೋಧನನನ್ನು ಮೂದಲಿಸಿ ಹೊರಹೊರಡಿಸುವುದು ಮತ್ತು ಭೀಮ ದುರ್ಯೋಧನರ ಯುದ್ಧ—ಇವು ಈ ಭಾಗದಲ್ಲಿ ವರ್ಣಿತವಾಗಿವೆ.

ಅಕ್ಕರಿಗ ... ಾಯಣ
ಅಗಜ... ಾಯಣ

ವ... ಮುದ್ರಾ ಮಂಜೂಷವೆಂಬ" ಸುಂದರವಾದ ಗದ್ಯ ಕೃತಿಯನ್ನು ಬರೆದವನು ವ... ರಾಯಣ. ಮುಮ್ಮಡಿ ಕೃಷ್ಣರಾಜ ಒಡೆಯರ ಆಶ್ರಯದಲ್ಲಿದ್ದು ಅವರ ... ಗದ್ಯದ ಬೆಳವಣಿಗೆಗೆ ತನ್ನ ಕೃತಿಯ ಕಾಣಿಕೆ ನೀಡಿದ ಕವಿ ಈತ. ...ಗುಪ್ತನು ತನ್ನ ಬುದ್ಧಿಕೌಶಲದಿಂದ ನಂದರನ್ನು ನಿರ್ಮೂಲಮಾಡಿ, ಚಂದ್ರ ...ಪ್ತನಿಗೆ ಮೌರ್ಯ ಸಾಮ್ರಾಜ್ಯವನ್ನು ಕೊಡಿಸಿ ಅಮಾತ್ಯ ರಾಕ್ಷಸನನ್ನು ಅವನಿಗೆ ...ಪ್ರಿಯಾಗಿ ನಿಲಿಸಿದ ಸಾಹಸ ಕಥೆ ಇಲ್ಲಿನ ವಸ್ತು. ಸಂಸ್ಕೃತದ "ಮುದ್ರಾ ...ಕ್ಷಸ" ಇವನಿಗೆ ಸ್ಫೂರ್ತಿ. ಆದರೆ ಅಲ್ಲಿನ ಕಥೆಯನ್ನು ಧಾರಾಳವಾಗಿ, ವಿಸ್ತರಿಸಿ, ...ಪಿಸಿ, ಕಲ್ಪನೆಯಿಂದ ಸೊಗಸುಗೊಳಿಸಿ ಕನ್ನಡದ ಈ ಕೃತಿಯನ್ನು ರಚಿಸಿ ...ನೆ. ೧೮೨೩ರಲ್ಲಿ ಇದರ ರಚನೆ ಮುಗಿಯಿತು.

... ಹೊಸಗನ್ನಡದ ಕಹಳೆಯನ್ನೂದಿದ ಮೊದಲನೆಯ ಕಾದಂಬರಿ ಇದು. ಆದರೆ ...ನ್ನಡ ಹೊಸಗನ್ನಡವಾಗಿ ರೂಪ ತಳೆಯುತ್ತಿ ಸಕಲ ಲಕ್ಷಣಗಳೂ ...ಲ್ಲುಂಟು.

... ಚಾಣಕ್ಯ ತಂತ್ರದಿಂದ ರಾಕ್ಷಸ ಸಂಗ್ರಹದ ಮೊದಲ ಹಂತವಾಗಿ ರಾಕ್ಷಸನ ...ದ್ರೆಯುಂಗುರವನ್ನು ಕಸಿದುಕೊಂಡ ಚಮತ್ಕಾರ ಇಲ್ಲಿನ ಕಥಾ ಭಾಗದಲ್ಲಿ ...ರ್ಶಿತವಾಗಿದೆ. ಚಂದನದಾಸನ ಲೋಕೋತ್ತರ ಮಿತ್ರಪ್ರೇಮ ಇಲ್ಲಿ ಒಡ ...ಮೂಡಿದೆ.

...ದ್ದಣ

"ಮುದ್ದಣ" ಎಂಬ ಕಾವ್ಯನಾಮದಿಂದ ಪ್ರಸಿದ್ಧನಾದ ನಂದಳಿಕೆಯ ...ಕ್ಷ್ಮೀನಾರಣಪ್ಪ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜನಿಸಿದವನು. ಹತ್ತೊಂಬತ್ತನೆಯ ...ತಮಾನದ ಕೊನೆ ಮತ್ತು ಇಪ್ಪತ್ತನೆಯ ಶತಮಾನದ ಆದಿಭಾಗ ಅವನ ಜೀವಿತ ...ು. ವೃತ್ತಿಯಿಂದ ವ್ಯಾಯಾಮಶಿಕ್ಷಕನಾದ ಆತ ಅದ್ಭುತರಾಮಾಯಣ, ...ಪಟ್ಟಾಭಿಷೇಕ, ರಾಮಾಶ್ವಮೇಧ ಎಂಬ ಕಾವ್ಯಗ್ರಂಥಗಳನ್ನೂ, ಕುಮಾರ ವಿಜಯ, ರತ್ನಾವಳೀ ಕಲ್ಯಾಣ ಎಂಬ ಯಕ್ಷಗಾನಗಳನ್ನೂ ರಚಿಸಿದ್ದಾನೆ.

ರಾಮಾಶ್ವಮೇಧದ ವಸ್ತು ಪದ್ಮಪುರಾಣದಲ್ಲಿ ಬರುವ ರಾಮನ ಅಶ್ವಮೇಧ ಯಾಗದ ಕಥೆ. ವಸ್ತುವಿಗಿಂತ ಭಾಷೆಗಾಗಿ, ಗದ್ಯಶೈಲಿಗಾಗಿ ರಾಮಾಶ್ವಮೇಧ ಪ್ರಸಿದ್ಧವಾಗಿದೆ. "ಪದ್ಯಂ ವಧ್ಯಂ ಗದ್ಯಂ ಹೃದ್ಯಂ" ಎಂದು ಸಾರಿದವನು ಈತ. ಹೊಸಗನ್ನಡ ಗದ್ಯದ ಮೊದಲ ಸುಳುಹುಗಳನ್ನು ಇಲ್ಲಿಯೂ ಕಾಣಬಹುದು. ಆತ್ಮೀಯವೆನಿಸುವ, ಸಹಜವೆನಿಸುವ ಸಂಭಾಷಣಾ ಕೌಶಲ, ರಸಪೂರ್ಣವಾದ ವರ್ಣನೆಗಳು ಇದರ ವೈಶಿಷ್ಟ್ಯ.

ಕವಿಗೂ ಅವನ ನೆಚ್ಚಿನ ಮಡದಿ ಮನೋರಮೆಗೂ ನಡೆದ ಮಧುರವಾದ, ಆದರೆ ವಿಷಾದವನ್ನು ಮಿಡಿಯುವ ಒಂದು ಸಂಭಾಷಣೆ ಇಲ್ಲಿದೆ.

## ಅರ್ಥಕೋಶ

ಅಕ್ಕರಿಗ—ವಿದ್ಯಾವಂತ
ಅಗಜಾತಾನ್ವಿತ—ಮರದಿಂದ ಕೂಡಿರು
ವವನು; ಶ್ಲೇಷೆ: ಗಿರಿಜಾಸಹಿತನಾಗಿರು
ವವನು
ಅಗರ—ಅಗ್ರಹಾರ
ಅಗಳ್—ಕಂದಕ
ಅಗುರ್ವು—ಭಯಂಕರತೆ
ಅರ್ಘ್ಯವಣಿ—ಅರ್ಘ್ಯಪಾನೀಯ,
ಪೂಜೆಯ ನೀರು
ಅಗ್ರಹಾರ—(ಶ್ಲೇಷೆ) ಎದೆಯ ಮೇಲೆ
ಧರಿಸುವ ಹಾರ
ಅರ್ಜುನ ರುಚಿ—ಧವಳ ಕಾಂತಿ
ಅಡ್ಡಣ—ಗುರಾಣಿ, ಹರಿಗೆ
ಅಣಲು—ಕೆಳದವಡೆ
ಅಧಟು—ಸಾಹಸ, ದರ್ಪ, ಪರಾಕ್ರಮು
ಅಧ್ಬರಿಸಿ—ಅಬ್ಬರಿಸ್ಕಿ, ಕೂಗುಹಾಕಿ
ಅನೋಕಹ—ವೃಕ್ಷ, ಮರ
ಅನಂತಾರಿಪುರಾರಾತಿ—ತ್ರಿಪುರಾರಾತಿ,
ತ್ರಿಪುರನಿಗೆ ಶತ್ರುವಾಗಿರುವವನು
ಅನ್ವಯ—ವಂಶ
ಅಪಾಂಗ—ಕಡೆಗಣ್ಣು
ಅಯೋಮಯ—ಕಠಿಣ, ಕ್ಲಿಷ್ಟ, ಅಭೇದ್ಯ
ಅರಣ್ಯಕ—ಕಾಡಿನಲ್ಲಿ ವಾಸಮಾಡುವವನು,
ಮುನಿ
ಅರಸುಗುರುಪು—ರಾಜಚಿಹ್ನೆ
ಅವನಸ್ವಭಾವನು—ಕಾಪಾಡುವಸ್ವಭಾವ
ವುಳ್ಳವನು; ಶ್ಲೇಷೆ: ವನವಲ್ಲದ ಸ್ವಭಾವ
ಅವಿನ್ನಾಣ—ಗುರುತು
ಅವಯವದೆ—ಲಘುವಾಗಿ
ಅಸಿತ—ಕಪ್ಪು
ಅಸಿಯ—ತೆಳ್ಳಗಿನ, ಸಣ್ಣ
ಅಹಿ—ಹಾವು
ಅಹಿತ—ಶತ್ರು
ಅಭೀರರು—ಗೊಲ್ಲರು, ದನಕಾಯುವವರು
ಆಯತ—ವಿಶಾಲವಾದ; ಗುರುಭಕ್ತನಿಗೆ
ಕೊಡುವ ಇಷ್ಟಲಿಂಗ ದೀಕ್ಷೆ
ಆರಮೆ—ತೋಟ
ಆರವ್ಯಾಲೆ—?
ಆರೂಢ—ಸಿದ್ಧ, ವಿರಕ್ತ
ಆರೆಕಾಱ—ಆರೈಕೆಮಾಡುವವನು;
ಸಾಕುವವನು; ಸಾಕಿದವನು, ಪಾಲಕ
ಆರ್ಪು—ಪರಾಕ್ರಮು
ಆಲಕ್ತಕ—ಗೋರಂಟಿ ರಸ
ಆಲಿಟ್ಟು—ಕೂಗಿಕೊಂಡು, ಮೊರೆಯಿಟ್ಟು
ಆವಳಿ—ಸಮೂಹ
ಆವು—ಹಸು
ಆಹುವ (ಆಹವ)—ಯುದ್ಧ
ಆಳ್ವೇರಿ—ಸುತ್ತಲೂ ಕಂದಕವುಳ್ಳ ಕೋಟೆಯ
ಎತ್ತರವಾದ ಗೋಡೆ
ಇಟ್ಟಣ—ಶೋಭೆ
ಇಭ—ಆನೆ
ಇಕ್ಷುವಾಟ—ಕಬ್ಬಿನ ತೋಟ
ಉಗ್ಘಡಿಸು—ಪರಾಕು ಹೇಳು
ಉಣ್ಮು—ಉಬ್ಬು
ಉತ್ತರಿಗೆ—ಮೇಲುವಸ್ತ್ರ, ಶಲ್ಯ
ಉತ್ತುಂಗಭಂಗ—ಏಳು ಬೀಳು
ಉದ್ದೃಪ್ತ—ಗರ್ವದಿಂದ ಕೂಡಿದ
ಉದ್ಯಾಪನ—ಕೊನೆಗೊಳಿಸು
ಉಪಪ್ಲವ—ಗ್ರಹಣ
ಉಯ್ರ್—ಹೊಟ್ಟು
ಉಱುದಿರಿ—ಬೇಗನೆ
ಉರುಳಿ—ಉಂಡೆ, ಮುದ್ದೆ
ಉಲುಪು—ಉಲುಹು, ಧ್ವನಿ
ಊಡು—ಕುಡಿಸು, ಉಣಿಸು
ಎಚ್ಚು—ಲೇಪಿಸು, ಹಚ್ಚು
ಎಕ್ಕಟಿ—ರಹಸ್ಯವಾಗಿ, ಏಕಾಂತವಾಗಿ
ಎಱವಿ—ಪ್ರೇಯಸಿ, ಮಡಗಿ
ಕೊಂಡವಳು
ಎಳವೆ—ಬಾಲ್ಯ
ಎಳಗಂದಿ—ಎಳೆಯ ಕರುವಿರುವ ಹಸು
ಒಕ್ಕಲಿಕ್ಕಿ—ನಾಶಪಡಿಸಿ
ಒಗ್ಗಾಗಿ—ಗುಂಪುಕೂಡಿ
ಒಡ್ಡಣ—ಕೂಟ, ಸೈನ್ಯ
ಒನಲಿ—ಒಂದರಿ, ಜರಡಿ

ಒಳಚಿ—ಅರಚಿ
ಒಳವಲೆ—ಇನೆಯಲ್ಲವೆ ?
ಅಂತರ್ಗೃಹ—ಒಳಮನೆ
ಅಂಧಕಾರಪ್ರಥಿತ—ಅಂಧಕಾಸುರನ ಶತ್ರು ಎಂದು ಪ್ರಸಿದ್ಧನಾದವನು ; ಶ್ಲೇಷೆ : ಕತ್ತಲನ್ನು ದ್ವೇಷಿಸುವವನು
ಕಕುಪ್ವಳಯ—ಗೂಳಿಯ ಹಿಣಿಲಿನ ವಿಸ್ತಾರ
ಕಕ್ಕುಲತೆ—ಅತಿಶಯವಾದ ಇಚ್ಛೆ
ಕಡುಪು—ಪರಾಕ್ರಮ, ದರ್ಪ
ಕಡಾಹು—ಕೊಪ್ಪರಿಗೆ, ಕಡಾಯಿ
ಕಡುಕು—ಗಂಡಸರು ಕಿವಿಗೆ ಹಾಕಿಕೊಳ್ಳುವ ಆಭರಣ, ಕರ್ಣಕುಂಡಲ
ಕತಿಪಯ—ಕೆಲವು
ಕಪ್ಪಿ—ಆನೆಯನ್ನು ಹಿಡಿಯಲು ಮಾಡಿದ ಗುಂಡಿ, ಖೆಡ್ಡಾ
ಕಬ್ಬಿಸಿಲು—ನೆಳಲು
ಕರ್ಬುರಾಭ್ರ—ಬೂದುಬಣ್ಣದ ಮೋಡ, ಹೊಂಬಣ್ಣದ ಮೋಡ
ಕಮ್ಮಟ—ಟಂಕಸಾಲೆ
ಕರಪಟಶಾಸ್ತ್ರ—ಕಳ್ಳತನದ ವಿದ್ಯೆಯನ್ನು ಹೇಳುವ ಶಾಸ್ತ್ರ
ಕಲ್ಪ—ಬ್ರಹ್ಮನ ಒಂದು ದಿನ, ಸಹಸ್ರ ಯುಗಗಳು
ಕವರ್—ಅಪಹರಿಸು
ಕವರ್ತೆವೋಗು—ಅಪಹಾರವಾಗು
ಕವ್ವರೆಗೊಳ್—ಮುತ್ತಿಗೆ ಹಾಕು
ಕವಾಟೋದ್ಘಾಟನ—ಅಗಳಿಯನ್ನು ತೆಗೆಯುವುದು
ಕಸವರ—ಚಿನ್ನ
ಕಳಿಕೆ—ಮೊಗ್ಗು
ಕಟ್ಟಿ—ಕರ್ಚುರ, ತೊಳೆ
ಕಂಚುಕಿ—ಸೇವಕ
ಕಂಬಿವದ್ದ— ?
ಕಾಮತಕ್ಷಕ—ಕಾಮುವನ್ನು ಕತ್ತರಿಸುವ
ಕಿಂಜಲ್ಕಪುಂಜ—ಕೇಸರ ಸಮೂಹ
ಕೀನಾಶ—ಯಮ

ಕೀಲಾಲ—ರಕ್ತ
ಕೀಲಿಸು—ಸೇರಿಸು
ಕೀಟಿಂ—ಕಡಿವಾಣ
ಕ್ರೀ—ಕ್ರಿಯೆ, ಆಚಾರ
ಕುರರ—ಕುರವಕ್ಕಿ, ಪಕ್ಷಿವಿಶೇಷ
ಕುಬಿನ್ಪುಡಿ— ?
ಕುಹರ—ಬಿಲ
ಕುಂಜರ—ಆನೆ
ಕೂಪ—ಬಾವಿ
ಕೂರ್ಮೆ—ಪ್ರೀತಿ
ಕೂಟ್ನೀರ್—ಕೂಳು-ನೀರು, ಅನ್ನ-ನೀರು
ಕೆಯ್—ಹೊಲ, ಕ್ಷೇತ್ರ
ಕೇಳಿ—ವಿನೋದ, ಆಟ
ಕೈಯಿಟ್ಟ—ಈಟ
ಕೈಲಾಗು—ಕೈಹಿಡಿದುಕೊಂಡು ಕರೆದು ಕೊಂಡು ಹೋಗು
ಕೈವಾರಿ—ಹೊಗಳುಭಟ್ಟ
ಕೊಗ್ಗಿ—ಕೊಗ್ಗಿ (ಲಿ) ಮರ, ಒಂದು ಜಾತಿ ಮರ
ಕೊಟ್ಟಾರ—ಭಂಡಾರ
ಕೊಂಡೊಡೆ—ಕಚ್ಚಿದಾಗ (ಕೊಳ್-ಧಾ)
ಕೊಂಬುಗಾಳೆಯ—ಕೊಂಬು ಕಹಳೆ
ಕೋಟಿಜೆ—ದೊಣ್ಣೆ
ಕೌಂಗು—ಅಡಕೆ
ಖಡ್ಗಿ—ಖಡ್ಗಮೃಗ
ಗವಸಣಗೆ—ಹೊದಿಗೆ, ತೆರೆ
ಗಸುಟು—ಗಸಿ, ವಾಸನೆ
ಗಳಪು—ಹರಟು, ಶಬ್ದಮಾಡು
ಗಾಡಿ—ಸೌಂದರ್ಯ
ಗಾವಳಿ—ಧ್ವನಿ, ಶಬ್ದ, ಅಬ್ಬರ
ಗೀರ್ವಾಣ—ದೇವತೆ
ಗುಡಿ—ಬಾವುಟ, ಧ್ವಜ
ಗುತ್ತು—ಗುದುತು
ಗುಂಡುವಟಿ—ಗುಂಡಿನ ಮಳೆ
ಗೃಹಜನ—ಮನೆಯವರು
ಗೃಹಸೋಬಸ್ಕರ—ಮನೆಗೆ ಅಗತ್ಯವಾದ ಸಾಮಾನುಗಳು

ಗೆಂಟು—ದೂರ
ಗೋದಾನು—ಗೋಸುಂಬೆ
ಗೋಸ—ಘೋಷ, ಶಬ್ದ
ಗಂಧವಾರಣ—ಮದಿಸಿದ ಆನೆ
ಘಟೆ—ಆನೆಯ ಸೈನ್ಯ
ಜ್ಞಾನಾಗ್ನಿ ಸ್ಸರ್ವ ಕರ್ಮಾಣಿ ಭಸ್ಮಸಾತ್ಕುರುತೇ ಮಮ—ಜ್ಞಾನವೆಂಬ ಅಗ್ನಿಯು ಸನ್ನೆಲ್ಲ ಕರ್ಮಗಳನ್ನೂ ಭಸ್ಮಮಾಡುತ್ತದೆ
ಜುಂಜ ಲೋವೆ—ಅಟ್ಟಕ್ಕೆ ಕಟ್ಟದ ಸಣ್ಣ ಇಳಿಜಾರು ಮರ
ಜೋಪ—ಯೋಗ (ತ್ಸ), ಅಲಂಕಾರದ ಮುಸುಗು
ಚಂಪ್ರಕವ(ಬ)ಲ—ಸರ್ಪಗಂಧ, ಅದರ ಹೂವು ಅಂದ
ಛಾತ್ರಕ—ಅನುಯಾಯಿ, ವಿದ್ಯಾರ್ಥಿ
ಜನ್ನದಾರ—ಜನಿವಾರ
ಜಳದ—ಮೋಡ
ಜಾಣೆಲಿವೆಣ್—ದಡ್ಡ ಹೆಂಗಸು, ಜಾಣ್ಮೆಯಿಲ್ಲದವಳು
ಜಾಯಿಲ—ನಾಯಿ
ಜಾಲಗಾಱರ್—ಬೆಸ್ತರು, ಬಲೆಹಾಕುವವರು
ಜಗುಲಿ—ಜಗಳ
ಜಿಷ್ಣುತ್ವ—ಜಯಗಳಿಸುವ ಸಾಮರ್ಥ್ಯ
ಜಿಹ್ವೆ—ನಾಲಗೆ
ಜಂಝೂನಿಲ—ಬಿರುಗಾಳಿ
ಡಾಮರ—ಅನಿರೀಕ್ಷಿತ ತೊಡಕು, ಹೋರಾಟ
ತಣಿಪು—ತೃಪ್ತಿಪಡಿಸು
ತನುರ್ಮನೆ—ತವರು ಮನೆ
ತಮಾಳ—ಹೊಂಗೆ
ತರಹರಿಸು—ತಾಳ್ಮೆಯಿಂದ ಸಹಿಸು
ತಳವೆಳಗಾಗು—ಬೆರಗಾಗು
ತಳಱ—ತಳವಾರ
ತಾರಹಾರ—ಸುಂದರವಾದ ಹಾರ (ನಕ್ಷತ್ರ)
ತಿರುವು—ಬಿಲ್ಲಿನ ಹುರಿ
ತಿರ್ಯಗ್ಜಾತಿ—ಪಶುಪರ್ಯಾಯಗಳಲ್ಲಿನ ಜೀವ
ತಿಲ—ಎಳ್ಳು
ತಿಂತಿಣಿ—ಸಮೂಹ, ಗೊಂಚಲು
ತುರಿಪ—ಬೇಗ
ತುಱುಗಲ್—ಗುಂಪು, ಸಮೂಹ
ತುಱಿಲಾಳ್—ವೀರ, ಬಂಟ
ತೂಣೀರ—ಬತ್ತಳಿಕೆ
ತೆಱಪು—ಅವಕಾಶ
ದಕ್ಕು—ದೊಣ್ಣೆ, ಮಾರಿಗೆ ಬಿಟ್ಟಬಲಿ
ದರ್ಕು—ಶೂಲ
ದಡ್ಡು—ಜಡ್ಡುಗಟ್ಟಿದ ಭಾಗ
ದಸರಿದೊಡಕು—ರೇಸಿಮೆಯ ತೊಡಕು, ಬಿಜ್ಜಬಾರದ ಗಂಟು
ದಾಯಗೆಡು—ಅಂದಗೆಡು
ದಾಂಗುಡಿ—ಹಬ್ಬಿದ ಕುಡಿ
ದಿಬ್ಯ—ದಿವ್ಯ, ಕಾಸಿದ ಕುಳವನ್ನು ಹಿಡಿದು ಅಥವಾ ಕಾದ ಎಣ್ಣೆಯಲ್ಲಿ ಕೈಯಿಟ್ಟು ಪ್ರಮಾಣಮಾಡುವುದು
ದೀರ್ಘಿಕಾ—ಉದ್ದುದ್ದವಾಗಿರುವ ಕೊಳ
ದೀವದಂಚೆ—ಸಾಕಿ ಪಳಗಿಸಿದ ಹಂಸ
ದೊರೆಯ—ಸಮಾನವಾದ
ಧ್ವಾನ—ಶಬ್ದ
ಧ್ವಾಂತ—ಕತ್ತಲೆ
ಧೇನುಕ—ಕತ್ತೆ
ನಗೆವೆಣ್ಣು—ನೆಗೆಣ್ಣು, ಗಂಡನ ಸೋದರನ ಹೆಂಡತಿ
ನವ್ಯಪ್ರಸೂನ—ಹೊಸ ಚಿಗುರು
ನಾಳಿಕೇರ—ನಾರಿಕೇಳ, ತೆಂಗು
ನಿಗಳ—ಬೇಡಿ
ನಿಗುಚು—ನಿಗುರಿಸು, ಉದ್ದವಾಗಿಸು
ನಿಡಿದು—ದೊಡ್ಡ
ನಿರವಿಸು—ನಿರೂಪಿಸು
ನಿಱಿಗೆ—ಇಮ್ಮಾವು
ನಿಸ್ಸಾಳ—ಭೇರಿ
ನೀರ್ಗಾಯ್—ಎಳನೀರು
ನೆರಂ—ಸಹಾಯವಾಗಿ
ನೇಲಿಸು—ನೇತುಹಾಕು
ನೇಸಱ್—ಸೂರ್ಯ
ನೋಂಪಿ—ವ್ರತ
ಪಡಲಿಡು—ಕೆಡಹು, ಬೀಳಿಸು

ಪಡಿ—ಅಗಳಿ
ಪದಿರು—ಜಾಣ್ಮೆಯ ಮಾತು
ಪರಜು—ಕತ್ತಿಯ ಅಲಗು
ಪರದಿ—ಪರವೆ, ತೆರೆ
ಪರಿ—ಓಡು
ಪಱಿಮೆವಱಿ—ದುಂಬಿಯ ಮರಿ
ಪರೆಕಾರ—ಪರೆಕಾರ
ಪಲಾಸ—ಪಲಾಶ, ಮುತ್ತುಗದ ಗಿಡ
ಪಲ್ಲಣ—ಜೀನು
ಪಟಿಯಿಗೆ—ಬಾವುಟ
ಪಸಾಯ್ತ—ಅಲಂಕಾರಮಾಡುವವನು
ಪಸುರ್ವಂಪರ—ಹಸಿರು ಚಪ್ಪರ
ಪಳಂಚು—ತಾಗು, ಸಂಘಟ್ಟಿಸು
ಪಟಿವಿಸು—ದುಃಖಪಡು
ಪಟಿತ್ತಿ—ಪತ್ತಿ
ಪಾದರಿಗ—ಜಾರ, ವ್ಯಭಿಚಾರಿ
ಪಾರಾವಾತ—ಪಾರಿವಾಳ
ಪಾಂಸುವರ್ಷ—ದೂಳಿನಮಳೆ
ಪಿಂಗಿ—ಹಿಂಗಿಹೋಗಿ
ಪುಟ್ಟಗೆ—ರೇಷ್ಮೆವಸ್ತ್ರ
ಪುಡಿಕೆ—ಪೆಟ್ಟಿಗೆ, ಸಂದೂಕ
ಪುರಿವಳಲು—ಸುಡುತ್ತಿರುವ ಮರಳು
ಪುರುಳ್—ಹುರುಳು
ಪುಲ್ಲವಡಿಗಿತಿ—ಹೂವಾಡಿಗಿತ್ತಿ
ಪುಷ್ಕರ—ಕೊಳ
ಪೂಗುಡಿ—ಹೂವಿನಕುಡಿ
ಪೆರಸಾರ್ವ—ಹಿಮ್ಮೆಟ್ಟುವ
ಪೆಱಗೆ—ಹಿಂದೆ
ಪೆಳಱ್—ಭಯಪಡು
ಪೆಂಡವಾಸ—ಅಂತಃಪುರ
ಪೊಜಿಸು—ಚೋರೆ ಹಕ್ಕಿ
ಪೊಟಿಲ್—ಪಟ್ಟಣ, ನಗರ
ಪೊಂಗು—ಹರಿಯುವ, ಚಿಮರುವ
ಪೊಂಬೆಸ—ಚಿನ್ನದ ಕೆಲಸ ಮಾಡಿದ
ಪಂಚಾನನ—ಸಿಂಹ
ಪಂದಲೆ—ಹಸಿಯ ತಲೆ, ಆಗತಾನೆ ಕತ್ತರಿಸಿದ ತಲೆ
ಪ್ರಪಂಚ—ಸಂಚು, ಸನ್ನಾಹ
ಪ್ರದ್ಯೋತನ—ಸೂರ್ಯ
ಪ್ರಾಕು—ಮುಂದೆ, ಪೂರ್ವದಲ್ಲಿ
ಫಳಕಾಱ—ಗುರಾಣಿ, ಕತ್ತಿ ಹಿಡಿದಿರುವವನು
ಫಣಾಮಣಿ—ಹಾವಿನ ಹೆಡೆಯಲ್ಲಿರುವ ರತ್ನ
ಬಗೆದು—ಯೋಚಿಸಿ
ಬಟ್ಟೆ—ಮಾರ್ಗ, ದಾರಿ
ಬದಗು—ಸೇವೆ
ಬದ್ದವಣ—ಮಂಗಳವಾದ್ಯ, ನಗಾರಿ
ಬಲಾಹಕ—ಮೋಡ
ಬಳ್ಳು—ನರಿ
ಬಂಬಲ್—ಸಮೂಹ, ಗುಂಪು
ಬಲ್ಮೆ—ಪರಾಕ್ರಮ, ಮಹತ್ವ
ಬಾಯ್ಕೇಳಿಸು—ಅಂಕೆಗೆ ಒಳಪಡಿಸು
ಬಾರಿಸು—ತಡೆ
ಬಾವನ್ನ—ಶ್ರೀಗಂಧ
ಬಾಳ್—ಕತ್ತಿ
ಬಾಳ್ವುದು—ಸೀಳುವುದು
ಬಾಂಬೊಟಿಲ್—ಆಕಾಶದಲ್ಲಿರುವ ಪಟ್ಟಣ
ಬಿಚ್ಚತ—ವಿಸ್ತೃತ
ಬಿಜ್ಜೋದರಿ—ವಿದ್ಯಾಧರ ಸ್ತ್ರೀ
ಬಿಸವಂದ—ಸೋಜಿಗ, ಆಶ್ಚರ್ಯ
ಬಿಯ—ವ್ಯಯ
ಬೃಂಹಿತ—ಆನೆಯ ಕೂಗು
ಬೆಟ್ಟಿತು—ಕಠಿಣವಾದ
ಬೆದೆಕಾಱ—ಕಾಮಿ
ಬೆಮೆ—ಭ್ರಮೆ
ಬೆಸದವರು—ಬೆಸ್ತರು, ಮೀನುಗಾರರು
ಬೆಳ್ಪಾರ—ಉರುಲು, ಮೃಗಗಳನ್ನು ಹಿಡಿಯಲು ದೂರದೂರ ಹರಹುವ ಬಲೆ
ಬೇವಸ—ವ್ಯಾಕುಲ, ಬೇಗುದಿ
ಬೈಕಂದಿರಿ—ಭಿಕ್ಷೆ ಬೇಡು
ಬೊಂತಿ—ಹರಕು ಬಟ್ಟೆ
ಬೋಳೆಯ—ದೇವತೆ
ಭಸಿತೋದ್ಧೂಲನ—ವಿಭೂತಿಯನ್ನು ಹಚ್ಚಿಕೊಳ್ಳುವುದು
ಭಾಸ್ಕರ—ಸೂರ್ಯ

ಮಕರಪತಾಕ—ಮನ್ಮಥ
ಮಡಲ್ತ—ಹಬ್ಬಿ ಹೂಬಿಟ್ಟಿರುವ
ಮಣಲಪುಳಿನ—ಮರಳುದಡ
ಮನೆವಾೞ್ತೆ—ಗೃಹಕೃತ್ಯ, ಮನೆಗೆಲಸ
ಮನ್ನೆಯ—ನಾಯಕ
ಮನೋದಾರು ವಿದಾರಣ—ಮನಸ್ಸೆಂಬ ಮರವನ್ನು ಸೀಳುವ
ಮರುಜೇವಣಿ—ಸಂಜೀವಿನಿ ಮೂಲಿಕೆ
ಮೞ್ಮಿಟು—ಕಂಗೆಡು
ಮಾಕಂದ—ಮಾವಿನ ಮರ
ಮೂವಂಕ—ಮೂರು ಬಂಕ, ಮೂರು ಪಕ್ಕ
ಮಿಟ್ಟಿ—ಮಣ್ಣಿನ ಹೆಂಟೆ
ಮೀಂಗುಲಿಗರ್—ಮೀನನ್ನು ಕೊಲ್ಲುವವರು, ಬೆಸ್ತರು
ಮುಟ್ಟೆ—ಆವುಗೆ
ಮುಡಿಪಿ—ಸತ್ತು
ಮುದು—ವಯಸ್ಸಾದ, ಮುದಿಯ
ಮುನ್ನೀರ್—ಸಮುದ್ರ
ಮುಳಿಸೆಂಡು—ಒಂದು ಬಗೆಯ ಚೆಂಡಾಟ
ಮುಸುಱ್—ಮುತ್ತು
ಮೂರ್ಧ್ನಿ ಘ್ರಾಣ—ವಾತ್ಸಲ್ಯದಿಂದ ನೆತ್ತಿಯನ್ನು ಮೂಸುವುದು; ಮುಂದಲೆಯನ್ನು ಮೂಸಿ ಆಶೀರ್ವದಿಸುವ ವಿಧಾನ
ಮೊನೆಗಾಱತನ—ಧೈರ್ಯ
ಮೋಹರ—ಸೈನ್ಯ ; ಯುದ್ಧ
ಮೋಡೆ—ಮೂಡೆ, ದಡ್ಡಹೆಂಗಸು
ಮಂತ್ರಸಾನಿ—ಸೂಲಗಿತ್ತಿ
ಮಂದಾರ ಭೂಜ—ಪಾರಿಜಾತವೃಕ್ಷ
ಮಾಂದ್ಯ—ನಿಧಾನವಾದ ಗತಿ
ಯೂಥಪತಿ—ಗಜರಾಜ, ಆನೆಗಳ ನಾಯಕ
ರಾಜಹರಿಸಮಂಚಿತ—ಸೂರ್ಯಚಂದ್ರರಿಂದ ಕೂಡಿದ
ರಸನೆ—ನಾಲಗೆ
ರೂಹು—ರೂಪು
ಲುಂದುವೋವರಿ—ಮಲಗುವ ಮನೆ
ವಕ್ರಪ್ರಚಾರಿ—ವಕ್ರಗಾಮಿ, ವಕ್ರವಾಗಿ ಸಂಚರಿಸುವ
ವಕ್ರವಾಕ್ಯ—ಕೊಂಕು, ನುಡಿ
ವಖ್ಖಾಣಿಸು—ವ್ಯಾಖ್ಯಾನ ಮಾಡು
ವಣ್ಣಂ ಜಳಿಯದೆ—ಬಣ್ಣಗುಂದದೆ
ವಲ್ಲಿವಾಟು—ಮೇಲೆ ಹೊದೆಯುವ ಬಟ್ಟೆ, ಶಲ್ಯ, ಉತ್ತರೀಯ
ವಾತಪೂರಣ—ಬಾವುಟ
ವಾರುವ—ಕುದುರೆ
ವಿಭೂತಿ—ವೈಭವ ವಿಶೇಷವಾದುದು, ಶ್ರೇಷ್ಠ
ವಿದ್ರಾವಣ—ಬೆನ್ನಟ್ಟಿಬರುವುದು, ಸೋಲಿಸು, ಓಡಿಸು
ವಿಭ್ರಾಜಿತ—ಹೊಳೆಯುವ
ವಿಶಕಲಿತ—ಹೆಚ್ಚಾಗಿ ಚೂರಾದದ್ದು
ವಿಶಾಖಾಂಕ—ವಿಗತ ಶಾಖೆಗಳಿಂದ ಚಿಹ್ನಿತ ಅಂದರೆ ರೆಂಬೆಗಳಿಲ್ಲದ : ಶ್ಲೇಷೆ—ಗುಹನೊಡನೆ ಇರುವ
ವಿಶೀರ್ಣ—ಒಡೆದ, ಸೀಳಿದ
ವಿಷಯ—ದೇಶ
ವಿಸಟಂಬರಿ—ಸ್ವೇಚ್ಛೆಯಾಗಿ ಓಡಾಡು
ವಿಸರ—ಸಮೂಹ
ವಿಸ್ರಂಭಣ—ವಿಶ್ವಾಸ
ವಿಸ್ಫುಲಿಂಗ—ಕಿಡಿ, ಒಂದು ಬಗೆಯ ವಿಷ
ವಿಳಯ—ಪ್ರಳಯ
ವೀತಕ್ಷಣ ರುಚಿ—ವಿಗತಕ್ಷಣ ರುಚಿ (ಮಿಂಚು)
ವೇಢೈಸಿ—ಮುತ್ತಿಗೆ ಹಾಕಿ
ವೈಯ್ಯಾಳಿ—ವೈಹಾಳಿ (ತ್ಸ), ಕುದುರೆ ಸವಾರಿ
ವಂಗಡ—ಗುಂಪು, ಸಾಲು
ವಂಶಚ್ಛೇದ—ಬಿದಿರನ್ನು ಕತ್ತರಿಸುವುದು
ಶತಘ್ನಿ—ಸಿಡಿಮದ್ದಿನ ಆಯುಧ, ತೋಪು
ಶತ್ರುಹ—ಶತ್ರುಘ್ನ
ಶಲ್ಯ—ಭರ್ಜಿ
ಶ್ರಾವಕ—ಜೈನಗೃಹಸ್ಥ (ಹನ್ನೆರಡು ಉಪಾಸಕ ವ್ರತಗಳನ್ನು ಪಾಲಿಸುವವನು)
ಷಟ್ಚರಣ—ದುಂಬಿ
ಸದ್ಯೋಜಾತ—ಆ ಕ್ಷಣವೇ ಹುಟ್ಟಿದ, ಶಿವ
ಸದ್ಯೋನ್ಮುಕ್ತ—ಒಮ್ಮೆಗೇ ಮುಕ್ತಿ ಪಡೆದವನು
ಸಬ್ಬವಕಾಱ—ಹಾಸ್ಯಗಾರ

ಸಮುಚಿ—ಮಟ್ಟಮಾಡು
ಸರಿಸ—ನೆಟ್ಟನೆ
ಸಟ್ಟಿಜ್ಜಡರ್—ತೆರಿಗೆ ಅಧಿಕಾರಿಗಳು,
ಷಡ್ಭಾಗದವರು
ಸಾಯಿರ—ಸಾವಿರ
ಸಿಡಿಗಂಟೆ—ಹೊದರಾದ ಮುಳ್ಳುಪೊದೆ
ಸಿತಾಸಿತ—ಬಿಳುಪು-ಕಪ್ಪು
ಸಿನೆ—ಪೂರ್ಣ, ಶೂನ್ಯ

ಸಿಯ್ಮಾವು—ಸಿಹಿಮಾವು
ಸಿವದಿಟ್ಟು—ಶಿವಧೋಯೆಂದು ನೊರೆಯಿಟ್ಟು
ಸುರಸರಿತ್—ದೇವನದಿ
ಸುಸರ—ಅನಾಯಾಸವಾಗಿ, ಸ್ನೇಹದಿಂದ
ಮುಂಬರಿಯುವುದು
ಸುಹೃದ—ಮಿತ್ರ
ಸೂರುಳ್—ಶಪಥ ಮಾಡು
ಸೊವಡು—ಸೊಗಡು, ಕಟುವಾದ ವಾಸನೆ

ಸೊಂದಿಗೋಡಗಂ—ದೊಡ್ಡ ಅಳಿಲು
(ಒಂದು ಜಾತಿಯ ಕೋತಿ ಇರಬಹುದೆ ?)
ಸೋಂಬ—ಪ್ರಿಯ, ಜಾರ
ಸೌರಭ್ಯ—ಸುಗಂಧ
ಸಂಚ—ರಹಸ್ಯ, ಸಂಚು, ತಂತ್ರ
ಸಂಚಿತಧನ—ಕೂಡಿಟ್ಟ ಹಣ
ಸ್ವಾನುಭೂತೌ ನಿವಿಷ್ಟಾಯ ಪ್ರಸನ್ನಃ
ಸ್ಯಾತ್ ಸದಾಶಿವಃ } —
ಶಿವನ ತಾದಾತ್ಮ್ಯವನ್ನು ಪಡೆದಿರುವವನಿಗೆ
ಶಿವ ಪ್ರಸನ್ನನಾಗುತ್ತಾನೆ
ಸ್ವಾಯುತ—ಗುರುಭಕ್ತನಿಗೆ ಪ್ರಾಣಲಿಂಗವನ್ನು
ಅರುಹಿ ಕೊಡುವ ದೀಕ್ಷೆ
ಹದುಳಿಗ—ಸುಖಿ
ಹಮ್ಮವಂಬೋಗು—ಮೂರ್ಛೆಹೋಗು
ಹೊಳಲು—ಪಟ್ಟಣ, ನಗರ
ಹ್ರದ—ಮಡು, ತೀರ್ಥ, ಕೊಳ



WO 7402—MUPM—12000—16-7-70

# ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆಗಳು

1 ಸಂಶೋಧನೆ—ಎಂ. ಚಿದಾನಂದಮೂರ್ತಿ
2 ಕನ್ನಡ ಲಿಪಿಯ ಉಗಮ ಮತ್ತು ವಿಕಾಸ—ಎ. ವಿ. ನರಸಿಂಹಮೂರ್ತಿ
3 ಸಂಕ್ಷಿಪ್ತ ವಿಶ್ವ ಇತಿಹಾಸ—ಆರ್. ಜಿ. ಶಿವಣ್ಣ ; ಎಚ್. ರಾಮಲಿಂಗಪ್ಪ
4 ಸುವರ್ಣ ಸಂಚಯ—(ಸಂಪಾದಿತ)
5 ಕರ್ಣಾಟಕ ಕವಿಚರಿತೆಯ ಅನುಕ್ತ ಕೃತಿಸೂಚಿ—ಎಸ್. ಶಿವಣ್ಣ
6 ಭಾರತೀಯ ಸಂಸ್ಕೃತಿ ಪರಂಪರೆ—ಹುಮಾಯೂನ್ ಕಬೀರ್
7 ಹೊರೆಸನ ಸಾಹಿತ್ಯ ವಿಮರ್ಶೆ—ಎನ್. ಬಾಲಸುಬ್ರಹ್ಮಣ್ಯ
8 ಗದ್ಯವಿಹಾರ—(ಸಂಪಾದಿತ)
9 ಭಾರತೀಯ ಸಾಮಾಜಿಕ ಸಂಸ್ಥೆಗಳು— ಎಂ. ನಂಜಮ್ಮಣ್ಣಿ
10 ಕರ್ಣಾಟಕದ ಅರಣ್ಯ ವೃಕ್ಷಗಳು— ಎಸ್. ಎನ್. ರಾಮಸ್ವಾಮಿ
11 ಮಾನವನ ಉಗಮ—ಎಲ್. ಸಿದ್ದವೀರೇ ಗೌಡ
12 ಪ್ರಾಕೃತಿಕ ಭೂಗೋಳ ಶಾಸ್ತ್ರ—ಸಂ. ಜಾರ್ಜ್ ಕುರಿಯನ್ ; ಬಿ. ಎಸ್. ಪರಾಬ್
13 ತಿಮ್ಮಕ್ಕನ ಪದಗಳು—ಸಂ. ಎಲ್. ಆರ್. ಹೆಗ್ಗಡೆ
14 ವರ್ಧಾ ಯೋಜನೆ—ಕೆ. ಎಲ್. ಶ್ರೀಮಾಲಿ
15 ದ್ರೋಣಪರ್ವ—ಸಂ. ಎನ್. ಅನಂತರಂಗಾಚಾರ್
16 ಕರ್ಣಪರ್ವ—ಸಂ. ಎನ್. ಅನಂತರಂಗಾಚಾರ್
17 ಸೂಪಶಾಸ್ತ್ರ—ಸಂ. ಎಸ್. ಎನ್. ಕೃಷ್ಣಜೋಯಿಸ್
18 ಮೋಳಿಗೆ ಮಾರಯ್ಯನ ವಚನಗಳು—ಸಂ. ಬಿ. ಎಸ್. ಸಣ್ಣಯ್ಯ
19 ಮನೋವಿಜ್ಞಾನ ಕೋಶ—ಬಿ. ಕೃಷ್ಣನ್
20 ಗಳಗನಾಥ—(ಸಂಪಾದಿತ)
21 ಮುದ್ದಣ—(ಸಂಪಾದಿತ)
22 ಮುಮ್ಮಡಿ ಕೃಷ್ಣರಾಜ ಒಡೆಯರು—(ಸಂಪಾದಿತ)
23 ಹಣದ ಸ್ಥೂಲ ವಿವರಣೆ—ಕ್ರೌಥರ್
24 ಮಳಲಿ ಗಿಡ್ಡಮ್ಮ—ಸಂ. ಎಂ. ಸಿ. ವಸಂತಕುಮಾರ್
25 ಮನೋವಿಶ್ಲೇಷಣೆ ನಡೆದು ಬಂದ ದಾರಿ—ಲೂಸಿ ಫ್ರೀಮನ್ ; ಮಾರ್ವಿನ್ ಸ್ಮಾಲ್
26 ಆಯ್ದ ಜನಪದ ಕಥೆಗಳು—ಸಂ. ಜೀ. ಶಂ. ಪರಮಶಿವಯ್ಯ
27 ಕೈಲಾಸ ಕರೆದ ನೊರೆಹಾಲು—ಸಂ. ಗುಂಡ್ಮಿ ಚಂದ್ರಶೇಖರ ಐತಾಳ
28 ಜನಪದ ಬೆಡಗಿನ ವಚನಗಳು—ಸಂ. ಸುಭಾಕರ
29 ಲೆಕ್ಕಾಚಾರಶಾಸ್ತ್ರ—ಸಿ. ಎಂ. ಮುನಿರಾಮಪ್ಪ.
30 ಜೋಡಿಧಾಖಲೆ ಪದ್ಧತಿ ಲೆಕ್ಕ ಬರಹ—ಡಿ. ಎನ್. ಶ್ರೀನಿವಾಸಮೂರ್ತಿ
31 ಬೀಜ ರೇಖಾಗಣಿತ—ಸಿ. ಎನ್. ಶ್ರೀನಿವಾಸೈಯ್ಯಂಗಾರ್
32 ಆರ್ಥಿಕ ಚಿಂತನೆಯ ಬೆಳವಣಿಗೆ—ಬಿ. ಎಂ. ಕುಮಾರಸ್ವಾಮಿ